# ಸೌರಭಶ್ರೀ

(ಶ್ರೀ ಶ್ರೀನಿವಾಸರಾವ್ ಅಭಿನಂದನ ಗ್ರಂಥ)



ಸಂಪಾದಕರು :

**ಕವಿತಾ ಕೃಷ್ಣ**

**ಎಸ್. ಕೆ. ವೇಣುಗೋಪಾಲ್**

ಎಸ್. ವಿ. ಶ್ರೀನಿವಾಸರಾವ್ ಅಭಿನಂದನ ಸಮಿತಿ

ಬೆಂಗಳೂರು–18

"SOWRABHASRI" :—FELICITATION VOLUME—
Collection of articles by various authors on the life and works of Sri S. V. Srinivasa Rao. Edited by Sri Kavitha Krishna and Sri S. K. Venugopal, Published by Sri S. V. Srinivasarao Abhinandana Samithi, Bangalore-18

Pages : XVI+16+152+80+24



ಮೊದಲ ಮುದ್ರಣ : 1995



ಬೆಲೆ : 125-00

ಮುಖಚಿತ್ರ : ಕಲಾವಿದ ಶ್ರೀ ಅರಸು

ಮುದ್ರಣ :
ಶ್ರೀ ಮಹಾಲಕ್ಷ್ಮೀ ಎಂಟರ್‌ಪ್ರೈಸಸ್
ನಂ. 35, ಮನವರ್ತಿಪೇಟೆ, ಬೆಂಗಳೂರು–53.

# ಅಭಿನಂದನ ಸಮಿತಿ

**ಗೌರವಾಧ್ಯಕ್ಷರು :**

ಎಸ್. ಮಲ್ಲಿಕಾರ್ಜುನಯ್ಯ

ಉಪಾಧ್ಯಕ್ಷರು, ಲೋಕಸಭೆ

**ಕಾರ್ಯಾಧ್ಯಕ್ಷರು :**

ಪ್ರೊ॥ ಹೆಚ್. ಆರ್. ದಾಸೇಗೌಡ

ದೀನಬಂಧು ವಿ. ಆರ್. ನಾಯ್ಡು

**ಪ್ರಧಾನ ಕಾರ್ಯದರ್ಶಿಗಳು :**

ಜೆಮಿನಿ ಸತ್ಯನಾರಾಯಣ

ಎಸ್. ಕೆ. ವೇಣುಗೋಪಾಲ್

**ಕೋಶಾಧ್ಯಕ್ಷರು :**

ಎನ್. ಗುರುಮೂರ್ತಿ ಆಚಾರ್

# ಕಾರ್ಯಕಾರಿ ಸಮಿತಿ ಸದಸ್ಯರು

ಪ್ರೊ॥ ಸಿ. ಹೆಚ್. ಮರಿದೇವರು

ನಿರುಪಮಾ

ಎ. ಪಂಕಜ

ಡಿ. ಮಾಧವಮೂರ್ತಿ

ಡಾ॥ ಹೆಚ್. ಎಸ್. ಗೋಪಾಲರಾವ್

ಅರಳುಮಲ್ಲಿಗೆ ಪಾರ್ಥಸಾರಥಿ

ಗಾಯತ್ರಿ ಮೂರ್ತಿ

ಹೆಗ್ಗರೆ ಶ್ರೀನಿವಾಸಮೂರ್ತಿ

ನಾ. ನಂಜಮ್ಮ

ಕೆ. ಆರ್. ಕಮಲೇಶ್

ಕೆ. ವಿ. ಕುಮಾರ್

ಬಿ. ಎಸ್. ಗುರುರಾಜ್

ಹೆಚ್. ವಿ. ವಾಸು

ಎಂ. ವಿ. ನಾಗರಾಜರಾವ್

ಎಸ್. ಆರ್. ಚಂದ್ರಶೇಖರ್

ಎ. ವಿ. ವೇಣುಗೋಪಾಲ್

ಹೆಚ್. ಎಸ್. ಪಾರ್ವತಿ

ಬಿ. ಹರಿಶ್ಚಂದ್ರಭಟ್

ಬಾಬು ಕೃಷ್ಣಮೂರ್ತಿ

ಶೀತಕಲ್ ಕೃಷ್ಣಯ್ಯ

ಟಿ. ಎಸ್. ವೆಂಕಟೇಶ್

# ಹರಕೆ

"ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ" ಇದು ಸರ್ವಜ್ಞನ ವಚನಗಳಲ್ಲಿ ಬರುವ ಒಂದು ಸಾಲು. ಸಜ್ಜನಿಕೆ ಜೊತೆಗೆ ಸರಳತೆ ಹಾಗೂ ಪ್ರಾಮಾಣಿಕತೆಯು ಸೇರಿದರೆ ಅದರ ಸವಿ ಎಷ್ಟೆಂದು ವರ್ಣಿಸುವುದು ಯಾರಿಗಾದರೂ ಕಷ್ಟವೆ. ಶ್ರೀ ಎಸ್. ವಿ. ಶ್ರೀನಿವಾಸರಾಯರಲ್ಲಿ ಅಂಥ ಗುಣವಿಶೇಷಗಳನ್ನು ನಾವು ಕಾಣಬಹುದು. ಇವರನ್ನು ನಾನು ಕಳೆದ ಇಪ್ಪತ್ತೆರಡು ವರ್ಷಗಳಿಂದ ಬಲ್ಲೆ. ಈಗಲೂ ನಾವು ಬೆಳಗಿನ ವೇಳೆ ಗಾಳಿ ಸಂಚಾರಕ್ಕೆ ಹೋದಾಗ ಪರಸ್ಪರ ಭೇಟಿಯಾಗುತ್ತೇವೆ. ಹಿಂದೆ ಇವರು ಎಲ್ಲರ ಜೊತೆಯಲ್ಲಿ ಹೇಗೆ ಪ್ರೀತಿ ವಿಶ್ವಾಸದಿಂದ ಬೆರೆಯುತ್ತಿದ್ದರೊ ಈಗಲೂ ಎಲ್ಲರೊಡನೆ ಅದೇ ಪ್ರೀತಿ ವಿಶ್ವಾಸವಿಟ್ಟುಕೊಂಡಿದ್ದಾರೆ. ಮಾತು ಕಡಿಮೆಯಾದರೂ ಸ್ನೇಹಕ್ಕೆ ಕೊರತೆಯಿಲ್ಲ.

ಪದವೀಧರರಾಗಿ ರಕ್ಷಣಾ ಇಲಾಖೆಯಲ್ಲಿ ಸೇವೆಗೆ ಸೇರಿದಾಗಿನಿಂದಲೂ ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ಮಾಡಿದ್ದಾರೆ. ಕತೆ, ಕಾದಂಬರಿ, ನಾಟಕ, ರೂಪಕಗಳನ್ನು ಬರೆದಿದ್ದಾರೆ. ಇವರ ಅನೇಕ ಲೇಖನಗಳು ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಬಹು ಭಾಷೆಗಳ ಪರಿಚಯ ಇವರಿಗಿರುವುದರಿಂದ ಇತರ ಭಾಷೆಯ ಕೆಲವು ಕೃತಿಗಳನ್ನು ಕನ್ನಡಕ್ಕೂ. ಕನ್ನಡದಿಂದ ಕೆಲವು ಕೃತಿಗಳನ್ನು ಇತರೆ ಭಾಷೆಗಳಿಗೂ ಅನುವಾದ ಮಾಡಿದ್ದಾರೆ. ಮಕ್ಕಳ ಪುಸ್ತಕ ರಚನೆಯಲ್ಲಿ ಶ್ರೀನಿವಾಸರಾಯರಿಗೆ ವಿಶೇಷ ಆಸಕ್ತಿ. ಮಕ್ಕಳ ಪುಸ್ತಕಗಳ ಶ್ರೀನಿವಾಸರಾಯರೆಂದೇ ಕೆಲವರು ಇವರನ್ನು ಕರೆಯುತ್ತಾರೆ. ಇವರ ಕೃತಿಗಳಿಗೆ ಪ್ರಶಸ್ತಿಗಳೂ ಬಂದಿವೆ.

ಇವರಿಗೆ ಪ್ರವಾಸವೆಂದರೆ ತುಂಬ ಇಷ್ಟ. ಮನೆಯವರೊಂದಿಗೆ ಈಗಾಗಲೇ ಭಾರತದ ಅನೇಕ ಪ್ರಮುಖ ಸ್ಥಳಗಳನ್ನು ಸಂದರ್ಶಿಸಿ ಬಂದಿದ್ದಾರೆ. ವಿದೇಶಗಳಿಗೂ ಹೋಗಿ ಬಂದಿದ್ದಾರೆ. ಕನ್ನಡ ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದ ಕೆಲವು ಸಂಸ್ಥೆಗಳಲ್ಲಿ ಅಧ್ಯಕ್ಷರಾಗಿ, ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಕರ್ನಾಟಕ ರಾಜ್ಯದ ಏಕೈಕ ಪ್ರಾತಿನಿಧಿಕ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕೋಶಾಧ್ಯಕ್ಷರಾಗಿದ್ದುದಲ್ಲದೆ ಕರ್ನಾಟಕ ಪ್ರಕಾಶಕರ ಸಂಸ್ಥೆಯ ಗೌರವ ಕಾರ್ಯದರ್ಶಿಯಾಗಿ ಈಗಲೂ ಸೇವೆ ಸಲ್ಲಿಸುತ್ತಿದ್ದಾರೆ.

ಇಂಥ ಭವ್ಯ, ದಕ್ಷ, ಪ್ರಾಮಾಣಿಕ. ಸರಳ. ಸಜ್ಜನಿಕ ವ್ಯಕ್ತಿಗೆ ಅವರ ಅರವತ್ತನೇ ವರ್ಷದ ಸಂದರ್ಭದಲ್ಲಿ ಅವರನ್ನು ಗೌರವಿಸಿ ಅಭಿನಂದನಾ ಗ್ರಂಥವನ್ನು ಅರ್ಪಿಸುತ್ತಿರುವುದು ಎಲ್ಲ ದೃಷ್ಟಿಯಿಂದಲೂ ಉಚಿತವು. ಯೋಗ್ಯವೂ ಆಗಿದೆ. ಶ್ರೀ ಶ್ರೀನಿವಾಸರಾಯರು ಮತ್ತು ಅವರ ಕುಟುಂಬ ವರ್ಗದವರಿಗೆ ದೇವರು ಆಯುರಾರೋಗ್ಯವನ್ನು ನೀಡಿ ಅವರಿಂದ ಈ ನಾಡಿಗೆ–ನುಡಿಗೆ ಇನ್ನೂ ಹೆಚ್ಚಿನ ಸೇವೆ ಸಲ್ಲುವಂತಾಗಲೆಂದು ಹಾರೈಸುತ್ತೇನೆ.

ಬೆಂಗಳೂರು

ಇತಿ,

**ಜಿ. ನಾರಾಯಣ**

ಮಾಜಿ ಅಧ್ಯಕ್ಷರು,

ಕನ್ನಡ ಅಭಿವೃದ್ಧಿ ಪ್ರಾಧಿಕಾರ

# ಸಂಪಾದಕರ ಮಾತು

ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರು ಸಾಹಿತ್ಯಲೋಕದಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದಿರುವ ಸಜ್ಜನ ವ್ಯಕ್ತಿ. ಶ್ರೀಯುತರು ವೃತ್ತಿಯಲ್ಲಿ ವಿಜ್ಞಾನಿಗಳಾದರೂ, ಪ್ರವೃತ್ತಿಯಲ್ಲಿ ಸಾಹಿತಿಗಳಾಗಿ. ಮೇಲಾಗಿ ಮಕ್ಕಳ ಸಾಹಿತಿಗಳಾಗಿ ಹೆಸರು ಪಡೆದಿದ್ದಾರೆ. ಇತಿಹಾಸ. ಸಾಮಾಜಿಕ ಪ್ರಜ್ಞೆ, ಶೈಕ್ಷಣಿಕ ಶ್ರೇಷ್ಠತೆ ಮುಂತಾದ ಸಮಾಜದ ಪ್ರಗತಿಗೆ ಪೂರಕವಾಗುವಂತಹ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅವರ ಬರಹಗಳು ಬಹುತೇಕ ನಾಡಿನ ಪ್ರಮುಖ ದಿನಪತ್ರಿಕೆಗಳು. ವಾರಪತ್ರಿಕೆಗಳು ಹಾಗೂ ಮಾಸಿಕಗಳಲ್ಲಿ ಧಾರಾವಾಹಿಗಳಾಗಿ ಪ್ರಕಟಗೊಂಡು ಕನ್ನಡದ ಓದುಗರ ಮನ ಮೆಚ್ಚಿಸಿವೆ. ಅವರ ಕೃತಿಗಳಾದ 'ಪ್ರೌಢ ಪ್ರತಾಪ ವೀರ ರಾಜೇಂದ್ರ', 'ಒರಿಯಾ ಕತೆಗಳು'. 'ಕನ್ನಡ ಸಾಹಿತಿ ದರ್ಶನ'. 'ಜೆಟಗೇರಿ ಕೃಷ್ಣಶರ್ಮ ವಾಚಿಕೆ' 'ಮಕ್ಕಳೇ, ಇವರನ್ನು ನೀವು ಬಲ್ಲಿರಾ' ಮುಂತಾದುವು ಸಾಹಿತ್ಯಕ ಮೌಲ್ಯದಿಂದ ಕೂಡಿದುದಾಗಿದ್ದು ಶ್ರೀನಿವಾಸರಾಯರ ಸಾಹಿತ್ಯ ಪ್ರೌಢತೆಗೆ ಸಾಕ್ಷಿಯಾಗಿವೆ. ಭಾರತ ಸರ್ಕಾರದ ರಕ್ಷಣಾ ಇಲಾಖೆಯಲ್ಲಿ ಮೂರು ದಶಕಕ್ಕೂ ಹೆಚ್ಚುಕಾಲ ಸೇವೆ ಸಲ್ಲಿಸಿ ಗೆಜೆಟೆಡ್ ಅಧಿಕಾರಿಯಾಗಿದ್ದು ಅಲ್ಲೂ ಅನೇಕ ಪ್ರತಿಭಾ ಪುರಸ್ಕಾರಗಳನ್ನು ಗಳಿಸಿರುವ ಹೆಗ್ಗಳಿಕೆ ಇವರದು.

ಶ್ರೀಯುತ ಶ್ರೀನಿವಾಸರಾಯರು, 60 ತುಂಬಿದ ತಮ್ಮ ಸಾರ್ಥಕ ಜೀವನದಲ್ಲಿ ಅನೇಕ ಸಂಘಸಂಸ್ಥೆಗಳ ಜೊತೆಗೆ ನಿಕಟ ಸಂಪರ್ಕವುಳ್ಳವರಾಗಿದ್ದವರು. ಅನೇಕ ಅಧಿಕಾರಸ್ಥಾನಗಳಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸಿದವರು. ಬನಶಂಕರಿ ಸಾಂಸ್ಕೃತಿಕ ಸಂಘದ ರೂವಾರಿಗಳಾಗಿ. ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕೋಶಾಧಿಕಾರಿಯಾಗಿ ಅವರು ನೀಡಿದ ಸೇವೆ ಚಿರಕಾಲ ಸಾರ್ವಜನಿಕರ ನೆನಪಲ್ಲಿ ಉಳಿಯುವಂತಹುದಾಗಿದೆ. ಮೇಲಾಗಿ ಪ್ರಕಾಶನೋದ್ಯಮದ ಪ್ರಗತಿಗೆ ಅವರ ದುಡಿಮೆ ಅನಂತ ಮತ್ತು ಅವಿರತ. ಕರ್ನಾಟಕ ಪ್ರಕಾಶಕರ ಸಂಘದ ಕಾರ್ಯದರ್ಶಿಗಳಾಗಿ. ನಾಡಿನ ಹಾಗೂ ಇತರೆ ಭಾಷೆಗಳ ಪ್ರಕಾಶನದ ಪ್ರಗತಿಗೆ ಅವಿಶ್ರಾಂತವಾಗಿ ಶ್ರಮಿಸುತ್ತಿದ್ದಾರೆ.

ಇಂತಹ ಶ್ರೇಷ್ಠ ಸ್ನೇಹಿತರಿಗೆ ಅರವತ್ತು ವರ್ಷಗಳು ತುಂಬಿದ ಶುಭ ಸಂದರ್ಭದಲ್ಲಿ ಅವರ ಅಪಾರ ಮಿತ್ರ ಬಳಗ. ಅವರನ್ನು ಅಭಿನಂದಿಸಲು ಒಂದು ಕಿರು ಹೊತ್ತಿಗೆಯನ್ನು ಪ್ರಕಟಿಸಲು ತೀರ್ಮಾನಿಸಿ. 'ಸೌರಭಶ್ರೀ' ಎಂಬ ಗ್ರಂಥ

ವನ್ನು ಹೊರ ತರುತ್ತಿರುವುದು ಆನಂದದ ವಿಚಾರ. ಈ ಕೃತಿಗೆ ಶ್ರೀನಿವಾಸ ರಾಯರನ್ನು ಆತ್ಮೀಯವಾಗಿ ಬಲ್ಲ ಅನೇಕ ಮಿತ್ರರು, ಬಂಧುಗಳು ಮತ್ತು ಅವರ ಸಾಹಿತ್ಯವನ್ನು ಅಭ್ಯಸಿಸಿ, ಆ ಬಗ್ಗೆ ಅನೇಕ ವಿಮರ್ಶೆಗಳನ್ನು ನೀಡಿದ ಹಿರಿ, ಕಿರಿಯ ಸಾಹಿತಿಗಳು. ಅವರವರ ಅನಿಸಿಕೆಗಳನ್ನು ನೀಡಿ ಸಹಕರಿಸಿದ್ದಾರೆ. ಅವರೆಲ್ಲರನ್ನೂ ಸ್ಮರಿಸುತ್ತೇವೆ. ಹಾಗೂ ಈ ಸಂದರ್ಭದಲ್ಲಿ ಪ್ರಕಟವಾಗುತ್ತಿರುವ ನೆನಪಿನ ಸಂಚಿಕೆಗೆ ಜಾಹಿರಾತುಗಳನ್ನು. ಲೇಖನಗಳನ್ನು ಅನೇಕ ಹಿತೈಷಿಗಳು ನೀಡಿದ್ದಾರೆ. ಹಲವಾರು ಕಾರಣದಿಂದ ಗ್ರಂಥ ಪ್ರಕಟಣೆ ನೆನೆಗುದಿಗೆ ಬಿದ್ದಿದ್ದುದನ್ನು ಪ್ರೊ॥ ಹೆಚ್. ಆರ್. ದಾಸೇಗೌಡ ಅವರು ಆಸಕ್ತಿ ವಹಿಸಿ ಕೈಗೆತ್ತಿಕೊಂಡು ಈ ಗ್ರಂಥ ಪ್ರಕಟಣೆಯ ಕಾರ್ಯವನ್ನು ಬಹು ಸಮರ್ಪಕ ರೀತಿಯಲ್ಲಿ ಪೂರೈಸಿದ್ದಾರೆ. ಇವರ ಈ ಉಪಕಾರವನ್ನು ಸಂಪಾದಕ ಮಂಡಲಿ ಕೃತಜ್ಞತೆಯಿಂದ ನೆನೆಯುತ್ತದೆ. ಹಾರ್ದಿಕ ಅಭಿನಂದನೆ ಸಲ್ಲಿಸುತ್ತದೆ. ಇದೇ ರೀತಿ ಈ ಕಾರ್ಯದಲ್ಲಿ ಸರ್ವ ವಿಧದ ಸಹಾಯ ನೀಡಿದ ಸನ್ಮಾನ್ಯರುಗಳಾದ ಶ್ರೀ ಎನ್. ಗುರುಮೂರ್ತಿ ಆಚಾರ್. ಕೆ. ಆರ್. ಕಮಲೇಶ್, ಜೆಮಿನಿ ಸತ್ಯನಾರಾಯಣ್, ಶ್ರೀಮತಿ ನಿರುಪಮಾ ಮುಂತಾದ ಸಹೃದಯ ಮಿತ್ರರುಗಳಿಗೂ ನಾವು ತುಂಬಾ ಆಭಾರಿಯಾಗಿದ್ದೇವೆ. ಹರಸಿ, ಹಾರೈಸಿ, ಸಂದೇಶ ನೀಡಿರುವ ಸನ್ಮಾನ್ಯರುಗಳಾದ ಶ್ರೀ ಜಿ. ನಾರಾಯಣ, ಶ್ರೀ ಎಂ. ವೀರಪ್ಪ ಮೊಯಿಲಿ, ಶ್ರೀಮತಿ ಬಿ. ಟಿ. ಲಲಿತಾ ನಾಯಕ್ ಅವರಿಗೆ ನಮ್ಮ ಹಾರ್ದಿಕ ಕೃತಜ್ಞತೆ ಸಲ್ಲುತ್ತದೆ. ಶ್ರೀ ಮಹಾಲಕ್ಷ್ಮೀ ಎಂಟರ್‌ಪ್ರೈಸಸ್‌ನ ಮಿತ್ರರಾದ ಶ್ರೀ ರಾಮರಾಯರು ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟಿದ್ದಾರೆ. ಅವರೆಲ್ಲರನ್ನು ಈ ಸಂದರ್ಭದಲ್ಲಿ ನೆನೆಯುತ್ತೇವೆ. ಸುಂದರ ಮುಖಚಿತ್ರ ರಚಿಸಿ ಕೊಟ್ಟಿರುವ ಕಲಾವಿದ ಶ್ರೀ ಅರಸುರವರಿಗೂ ನಮ್ಮ ಕೃತಜ್ಞತೆ ಸಲ್ಲುತ್ತದೆ.

**ಕವಿತಾಕೃಷ್ಣ**

**ಎಸ್. ಕೆ. ವೇಣುಗೋಪಾಲ್**



ಲೇಖಕರು ಬರವಣಿಗೆಯಲ್ಲಿ ತೊಡಗಿರುವಾಗ



ಮನೆ 'ಸೌರಭ'





ದಿನಾಂಕ 13-5-1956 ಮದುವೆಯ ಸಂದರ್ಭದಲ್ಲಿ



ಮಗ ಶ್ರೀ ಅರುಣ್ ಕುಮಾರನ ಉಪನಯನ ಸಂದರ್ಭದಲ್ಲಿ
ತಾಯಿಯ ಪಾದಪೂಜೆ ಮಾಡುತ್ತಿರುವುದು



ಮಗಳು ಚಿ|| ಸೌ|| ಕಲ್ಪನಾಳ ಮದುವೆ ಸಂದರ್ಭದಲ್ಲಿ ಸಿ. ಐ. ಎಲ್‌ನ
ವರಿಷ್ಠಾಧಿಕಾರಿ ಕರ್ನಲ್ ಧಿಂಗ್ರಾ, ದಂಪತಿಗಳೊಡನೆ



ಮಗಳು ಚಿ|| ಸೌ|| ಕವಿತಾಳ ಮದುವೆಯ ದಿನದಂದು
ಮಕ್ಕಳು ಅಳಿಯಂದಿರು ಮತ್ತು ಸೊಸೆಯೊಂದಿಗೆ



ಷಷ್ಟ್ಯಾಬ್ದ ಸಮಾರಂಭದಂದು
ಮಗ ಮತ್ತು ಸೊಸೆಯಿಂದ ಪಾದ ಪೂಜೆ



ಷಷ್ಟ್ಯಾಬ್ದ ಸಮಾರಂಭದಂದು



ಮಗಳು ಚಿ॥ ಸೌ॥ ಕವಿತಾಳ ಮದುವೆ ಸಮಾರಂಭದಂದು



ಮಗ ಅರುಣಕುಮಾರ್‌ನ ಮದುವೆಯ ದಿನದಂದು



ಪತ್ನಿ ಅನಸೂಯಾಳೊಡನೆ ಆಗ್ರಾ ಸಂದರ್ಶಿಸಿದಾಗ



ಬನಶಂಕರಿ ಸಾಂಸ್ಕೃತಿಕ ಸಂಘದ ವಾರ್ಷಿಕ ದಿನದಂದು
ನಾಟಕದಲ್ಲಿ ಪತ್ನಿಯೊಡನೆ



ತಾಯಿ ಮತ್ತು ಅಣ್ಣನ ಜೊತೆಯಲ್ಲಿ



ಬನಶಂಕರಿ ಸಾಂಸ್ಕೃತಿಕ ಸಂಘ ಮತ್ತು ತೆರಿಗೆದಾರರ ಸಂಘ ಏರ್ಪಡಿಸಿದ್ದ ಸನ್ಮಾನ ಸಮಾರಂಭದಂದು ದೀಪ ಬೆಳಗುತ್ತಿರುವುದು.



ಡಾ॥ ದೇ. ಜ. ಗೌ. ರವರೊಂದಿಗೆ



ಕರ್ನಾಟಕ ಪ್ರಕಾಶಕರ ಸಂಘ ಏರ್ಪಡಿಸಿದ್ದ ಪುಸ್ತಕ ಮೇಳದಲ್ಲಿ
ಮುಖ್ಯಮಂತ್ರಿ ಶ್ರೀ ವೀರಪ್ಪ ಮೊಯಿಲಿಯವರೊಂದಿಗೆ




ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸಿದ್ದ
ಸಮಾರಂಭದಲ್ಲಿ ಮಾತನಾಡುತ್ತಿರುವುದು.




‘ಪ್ರೌಢ ಪ್ರತಾಪ ವೀರ ರಾಜೇಂದ್ರ’ ಪುಸ್ತಕ ಬಿಡುಗಡೆ ಸಮಾರಂಭದಂದು



ಕೇಂದ್ರ ಸರ್ಕಾರದ ಕ್ಷೇತ್ರ ಪ್ರಸಾರ ಕೇಂದ್ರ ಏರ್ಪಡಿಸಿದ್ದ ಅಖಿಲ ಭಾರತದ ಲೇಖಕರ ಕಮ್ಮಟದ ಸದಸ್ಯರು ಮುಖ್ಯಮಂತ್ರಿ ಶ್ರೀ ದೇವರಾಜ ಅರಸರನ್ನು ಭೇಟಿಯಾದಾಗ (ಫೆಬ್ರುವರಿ 1976)



ಕರ್ನಾಟಕ ರಾಜ್ಯ ಸಾಮಾಜಿಕ ಹಿತ ರಕ್ಷಣೆ ಮತ್ತು ಸಾಂಸ್ಕೃತಿಕ ಸಂಘದ ವತಿಯಿಂದ
TTD ಛತ್ರದಲ್ಲಿ ನಡೆದ ಸನ್ಮಾನ ಸಮಾರಂಭದಂದು 23.11.92



ಡಾ|| ಯು. ಆರ್. ಅನಂತಮೂರ್ತಿಯವರು N.B.T. ಛೇರ್ಮನ್ ಆಗ
ನಿಯುಕ್ತಗೊಂಡಾಗ ಸನ್ಮಾನಿಸಿದ ಸಂದರ್ಭದಲ್ಲಿ



ಡಿಸ್ನಿವರ್ಲ್ಡ್ ಎಪಿಕಾಟ್ ಸೆಂಟರ್



ಲೇಖಕರು ಅಮೆರಿಕಾದ ಡಿಸ್ನಿ ವರ್ಲ್ಡ್ ಸಂದರ್ಶಿಸಿದಾಗ



ಬನಶಂಕರಿ ಸಾಂಸ್ಕೃತಿಕ ಸಂಘ ಮತ್ತು ತೆಲಗಮಾರರ ಸಂಘ ಶ್ರೀನಿವಾಸರಾಯರನ್ನು ಪಿ. ಇ. ಎಸ್. ಸಭಾಂಗಣದಲ್ಲಿ ಸನ್ಮಾನಿಸಿದಾಗ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವ ಶ್ರೀ ಹೆಚ್. ವಿಶ್ವನಾಥ್‌ರೊಂದಿಗೆ




ಕನ್ನಡ ಸಾಹಿತ್ಯ ಪರಿಷತ್ತಿನ ಸಮಾರಂಭದಲ್ಲಿ
ಡಾ|| ಪು. ತಿ. ನ. ರವರೊಂದಿಗೆ



ಸಂಘದ ಕಾರ್ಯದರ್ಶಿಯವರಾದ ಶ್ರೀ ಎಸ್. ಎ. ಶ್ರೀನಿವಾಸರಾವ್
ಅವರ "ಅಮೆರಿಕ ಪ್ರವಾಸ" ಮುನ್ನ ಶುಭ ಹಾರೈಕೆ



ಡಾ॥ ದೇ. ಜ. ಗೌ. ರವರೊಂದಿಗೆ "ವಿಶ್ವಚೇತನ" ದಲ್ಲಿ



'ಪ್ರೌಢಪ್ರತಾಪ ವೀರರಾಜೇಂದ್ರ' ಕಾದಂಬರಿ
ಬಿಡುಗಡೆಯಂದು ಶ್ರೀ ಗುಂಡೂರಾವ್ ರವರಿಂದ ಸನ್ಮಾನ



ಶ್ರೀ ರಾಮನಿವಾಸ ಮಿರ್ಧಾ ರಕ್ಷಾ ಉತ್ಪಾದನಾ
ಮಂತ್ರಿ,ಯವರೊಂದಿಗೆ

# ಹಾರೈಕೆ

ಸನ್ಮಾನ್ಯ ಮಿತ್ರರಾದ ಎಸ್. ವಿ. ಶ್ರೀನಿವಾಸರಾವ್ ಅವರಿಗೆ ಅರವತ್ತು ತುಂಬಿದ ಕಾರಣಕ್ಕಾಗಿ ಅವರ ಅಭಿಮಾನಿಗಳು, ಮಿತ್ರರೂ ಹಾಗೂ ಬಂಧುಗಳು ಅಭಿನಂದನ ಗ್ರಂಥ ತರುತ್ತಿರುವ ವಿಚಾರ ತಿಳಿದು ತುಂಬಾ ಸಂತೋಷವಾಯಿತು. ಶ್ರೀನಿವಾಸರಾವ್ ಅವರ ಸ್ನೇಹ-ಸಂಪರ್ಕವಾದುದು ಮೂರು-ನಾಲ್ಕು ವರ್ಷದ ಕೆಳಗೆ. ಆದರೆ ಕಾದಂಬರಿಕಾರರಾದ ಶ್ರೀನಿವಾಸರಾವ್ ಪರಿಚಯ ಹತ್ತಾರು ವರ್ಷಗಳ ಹಿಂದೆ ಆಗಿದೆ. 'ಸುಧಾ'. 'ಪ್ರಜಾಮತ', 'ಮಲ್ಲಿಗೆ' 'ಕನ್ನಡ ಪ್ರಭ' ಮೊದಲಾದ ಪತ್ರಿಕೆಗಳಲ್ಲಿ ಇವರ ಅನೇಕ ಕಾದಂಬರಿಗಳು ಧಾರಾವಾಹಿಯಾಗಿ ಪ್ರಕಟಗೊಂಡಿರುವುದನ್ನು ಗಮನಿಸಿದ್ದೇನೆ. 'ಮಕ್ಕಳ ಸಾಹಿತ್ಯ' ಹಾಗೂ 'ಪ್ರವಾಸ ಕಥನ' ಇವರಿಗೆ ಪ್ರಿಯವಾದ ಸಾಹಿತ್ಯ ಕ್ಷೇತ್ರಗಳು. ಇವುಗಳ ಜೊತೆ ನನ್ನೊಡನೆ ವಿಶೇಷ ನಂಟು ಬೆಳೆಯಲು ಕಾರಣವಾಗಿದ್ದುದು 'ಕೊಟ್ಟ' ಕಾದಂಬರಿ. ಈ ಕಾದಂಬರಿಯ ರಚನಾ ಕಾಲದಲ್ಲಿ ಶ್ರೀಯುತರು ನನ್ನೊಡನೆ ಅನೇಕ ದಿನಗಳನ್ನು ಕಳೆದಿದ್ದಾರೆ. ಕಾದಂಬರಿಯ ವಸ್ತು, ಶೈಲಿ ಹಾಗೂ ತಂತ್ರಗಳನ್ನು ಕುರಿತಂತೆ ಮತ್ತೆ ಮತ್ತೆ ಮಾತನಾಡಿದ್ದಾರೆ. 'ಕೊಟ್ಟ' ಕಾದಂಬರಿಯ ಆಂತರಿಕ ಸೌಂದರ್ಯ ಹೆಚ್ಚಿಸುವಲ್ಲಿ ಅಪೂರ್ವ ರೀತಿ ಸಹಾಯ ಮಾಡಿದ್ದಾರೆ.

ನಾನು ಮುಖ್ಯ ಮಂತ್ರಿಯಾಗಿದ್ದಾಗ ನನ್ನ ಬದುಕನ್ನು ಕುರಿತಂತೆ 'ಮೂಡಬಿದರೆ ವೀರಪ್ಪ ಮೊಯಿಲಿ' ಎಂಬ ಕಿರು ಗ್ರಂಥ ರಚಿಸಿದ್ದಾರೆ. ನನ್ನ ಜೀವನ ವಿವರ ಹಾಗೂ ನಾನಿಟ್ಟ ಹೆಜ್ಜೆಗಳ ಬಗ್ಗೆ ಅಮೂಲ್ಯ ವಿವರಗಳನ್ನು ಕಲೆ ಹಾಕಿದ್ದಾರೆ. ಯಾವುದೇ ಕೆಲಸವನ್ನು ಮಾಡಿದರೂ ಕೂಡ ಸ್ವಾರ್ಥವಿಲ್ಲದೇ ನಿಷ್ಕಾಮ ಕರ್ಮಯೋಗಿಯಂತೆ ದುಡಿಯುವ ಶ್ರೀನಿವಾಸರಾವ್ ಅವರಂತಹ ಮಿತ್ರರು ಅಪರೂಪ. ರಕ್ಷಣಾ ಇಲಾಖೆಯಲ್ಲಿ ವಿಜ್ಞಾನಿಗಳಾಗಿದ್ದ ಶ್ರೀನಿವಾಸರಾವ್ ವೈಜ್ಞಾನಿಕ ಮನೋಭಾವದೊಡನೆ ಕವಿ-ಸಾಹಿತ್ಯ ಕ್ಷೇತ್ರದಲ್ಲೂ ಗಣನೀಯ ಕೆಲಸ ಮಾಡಿರುತ್ತಾರೆ. ಇಂತಹ ಅಪರೂಪದ ವ್ಯಕ್ತಿ ಶ್ರೀನಿವಾಸರಾವ್ ಅವರ ಬದುಕು ಮತ್ತಷ್ಟು ಸಮೃಥತೆಯಿಂದ ಕೂಡಲೆಂದು ಪ್ರಾರ್ಥಿಸುತ್ತೇನೆ.

**ಎಂ. ವೀರಪ್ಪ ಮೊಯಿಲಿ**
ಮಾಜಿ ಮುಖ್ಯ ಮಂತ್ರಿಗಳು,
ಕರ್ನಾಟಕ ಸರ್ಕಾರ

# ಸಂದೇಶ

ಪ್ರಿಯ ಮಿತ್ರರೂ. ಖ್ಯಾತ ಕಾದಂಬರಿಕಾರರು. ಸಜ್ಜನರೂ ಆದ ಶ್ರೀ ಎಸ್. ವಿ. ಶ್ರೀನಿವಾಸರಾವ್‌ರವರಿಗೆ ಅವರ ಅರವತ್ತು ತುಂಬಿದ ಸವಿನೆನಪಿನಲ್ಲಿ ಮಿತ್ರರು ಹಾಗೂ ಅಭಿಮಾನಿಗಳು ಸೌರಭಶ್ರೀ ಎಂಬ ಅಭಿನಂದನಾ ಗ್ರಂಥವನ್ನು ತರುತ್ತಿರುವ ವಿಚಾರ ತಿಳಿದು ಸಂತೋಷವಾಯಿತು.

ಶ್ರೀ ಎಸ್. ವಿ. ಶ್ರೀನಿವಾಸರಾವ್‌ರವರು ಕನ್ನಡ ಸಾಹಿತ್ಯ ಪರಿಷತ್ ಕೋಶಾಧ್ಯಕ್ಷರಾಗಿದ್ದಾಗ ನಾನು ಅದರ ಕಾರ್ಯಕಾರಿ ಸಮಿತಿಯಲ್ಲಿದ್ದೆ. ಕರ್ನಾಟಕ ಪ್ರಕಾಶಕರ ಸಂಘ. ಮಕ್ಕಳ ಸಾಹಿತ್ಯ ಪರಿಷತ್ತು. ಬನಶಂಕರಿ ಸಾಂಸ್ಕೃತಿಕ ಸಂಘ. ಮೊದಲಾದ ಸಂಘಟನೆಗಳಲ್ಲಿ ಶ್ರೀನಿವಾಸರಾವ್‌ರವರು ಮಾಡುತ್ತಿರುವ ಕೆಲಸಗಳನ್ನು ಗಮನಿಸಿದ್ದೇನೆ.

ಶ್ರೀ ಶ್ರೀನಿವಾಸರಾವ್‌ರವರು ವೃತ್ತಿಯಲ್ಲಿ ವಿಜ್ಞಾನಿಗಳಾಗಿದ್ದಾರೆ. ಪ್ರವೃತ್ತಿಯಲ್ಲಿ ಸೃಜನಶೀಲ ಲೇಖಕರು. ಅವರ ಹದಿನೆಂಟು ಕಾದಂಬರಿಗಳು ಕನ್ನಡದ ವಿವಿಧ ಪತ್ರಿಕೆಗಳಲ್ಲಿ ಧಾರವಾಹಿಯಾಗಿ ಪ್ರಕಟವಾಗಿವೆ. ಕೊಡಗಿನ ಇತಿಹಾಸ ಕುರಿತಂತೆ ರಚಿತವಾಗಿರುವ ಅವರ "ಪ್ರೌಢ ಪ್ರತಾಪ ವೀರ ರಾಜೇಂದ್ರ" ಕಾದಂಬರಿ ಅನೇಕ ಸಾಹಿತ್ಯ ಅಭಿಮಾನಿಗಳ ಮೆಚ್ಚುಗೆಯನ್ನು ಗಳಿಸಿದೆ. ಯಾವುದೇ ಕಾದಂಬರಿಯನ್ನು ರಚಿಸುವ ಮುನ್ನ ಶ್ರೀನಿವಾಸರಾವ್‌ರವರು ಮಾಡುವ ಸಂಶೋಧನಾ ಕಾರ್ಯ ವಿಶೇಷವಾಗಿ ಉಲ್ಲೇಖಿಸುವಂತಹದ್ದು. ಅದರಲ್ಲೂ ತರುಣ ಲೇಖಕರಿಗೆ ಶ್ರೀನಿವಾಸರಾವ್‌ರವರ ಈ ಸಿದ್ಧತೆ ಮಾರ್ಗದರ್ಶನ ನೀಡುವಂತಹದ್ದು. ಜನಪ್ರಿಯ ಲೇಖಕರಾಗಿದ್ದಾಗ್ಯೂ ಶ್ರೀನಿವಾಸರಾವ್‌ರವರು ತಮ್ಮ ಸಾಹಿತ್ಯ ಕೃತಿಗಳು ಪರಿಪೂರ್ಣವಾಗಿ ಹೊರಹೊಮ್ಮುವುದಕ್ಕೆ ಸಾಕಷ್ಟು ಶ್ರದ್ಧೆ ವಹಿಸಿ ದುಡಿಯುವುದನ್ನು ಗಮನಿಸಬಹುದು. "ಮಕ್ಕಳೇ. ನೀವು ಇವರನ್ನು ಬಲ್ಲಿರಾ" ಹಾಗೂ "ಕನ್ನಡ ಸಾಹಿತಿ ದರ್ಶನ"ದಂತಹ ವಿಶಿಷ್ಟ ಕೃತಿಗಳನ್ನು ಇವರು ರಚಿಸಿದ್ದಾರೆ. ಮಕ್ಕಳ ಸಾಹಿತ್ಯದಲ್ಲಿ ಕೆಲಸ ಮಾಡಿದ ಸಾಹಿತಿಗಳನ್ನು "ಮಕ್ಕಳೇ. ಇವರನ್ನು ನೀವು ಬಲ್ಲಿರಾ" ಗ್ರಂಥದಲ್ಲಿ ಆತ್ಮೀಯವಾಗಿ ಪರಿಚಯ ಮಾಡಿ ಕೊಟ್ಟಿದ್ದಾರೆ. "ಕನ್ನಡ ಸಾಹಿತಿ ದರ್ಶನ"ದ ಗ್ರಂಥದಲ್ಲಿ ಸುಮಾರು 1,500 ಕವಿ ಬರಹಗಾರರ ಪರಿಚಯವನ್ನು ಮಾಡಿ ಕೊಟ್ಟಿದ್ದಾರೆ.

ಸಾಹಿತ್ಯ ಸೇವೆ ಹಾಗೂ ಸಂಘಟನೆಗಳಲ್ಲಿ ವಿಶೇಷ ಆಸಕ್ತಿ ಇರಿಸಿಕೊಂಡಿರುವ ಶ್ರೀನಿವಾಸರಾವ್‌ರವರು ಮುಂದೆಯೂ ಕ್ರಿಯಾಶೀಲರಾಗಿ ನಡೆಯಲೆಂದು ಈ ಸಂದರ್ಭದಲ್ಲಿ ಹಾರೈಸುತ್ತೇನೆ.

**ಬಿ. ಟಿ. ಲಲಿತಾನಾಯಕ್**
ಕನ್ನಡ ಮತ್ತು ಸಂಸ್ಕೃತಿ,
ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯ ಮಂತ್ರಿಗಳು

## ಪರಿವಿಡಿ

## ಭಾಗ-೧ ಸಾಹಿತ್ಯ ಸೌರಭ



## ಭಾಗ-೨ ಜೀವನ ಸೌರಭ

## ಅನುಬಂಧ

# ಪ್ರೌಢ ಪ್ರತಾಪ ವೀರರಾಜೇಂದ್ರ-ಒಂದು ಅವಲೋಕನ

—ಸಿದ್ಧಯ್ಯ ಪುರಾಣಿಕ್

ಶ್ರೀ ಎಸ್. ವಿ. ಶ್ರೀನಿವಾಸರಾಯರು ನನಗೆ ಮಕ್ಕಳ ಸಾಹಿತಿಗಳಾಗಿ ಮಾತ್ರ ಪರಿಚಿತರಾಗಿದ್ದರು. ಶ್ರೀನಿವಾಸರಾಯರ ಕೃತಿಗಳಯಾದಿ ನನ್ನನ್ನು ಚಕಿತನನ್ನಾಗಿ ಮಾಡಿತು. ಅವರ ಕೃತಿಗಳ ವೈಪುಲ್ಯ, ವೈವಿಧ್ಯ ಗಣನೀಯವೆನಿಸಿತು.

ಅವುಗಳಲ್ಲಿ ಅವರ ಪ್ರಪ್ರಥಮ ಐತಿಹಾಸಿಕ ಕಾದಂಬರಿ 'ಪ್ರೌಢ ಪ್ರತಾಪ ವೀರರಾಜೇಂದ್ರ' ನನ್ನನ್ನು ಬಹಳ ಆಕರ್ಷಿಸಿತು. ಇದಕ್ಕೆ ನಾನೊಮ್ಮೆ ಕೊಡಗಿನ ಜಿಲ್ಲಾಧಿಕಾರಿಯಾಗಿದ್ದುದು ಮೊದಲ ಕಾರಣವಾದರೆ, ಮಾನ್ಯ ಮಾಸ್ತಿಯವರ ಇದೇ ಹೆಸರಿನ ಶ್ರೇಷ್ಠ ಐತಿಹಾಸಿಕ ಕಾದಂಬರಿ ಕೊಡಗಿನ ಪತನದ ಚಿತ್ರವನ್ನಿತ್ತು, ಕೆಲವು ಕೊಡಗರ,ಕೆಲವು ಕನ್ನಡಿಗರ ಅಸಮಾಧಾನಕ್ಕೆ ಕಾರಣವಾಗಿದ್ದರೆ, ಶ್ರೀನಿವಾಸರಾಯರ ಈ ಕಾದಂಬರಿ ಅದರ ಉತ್ಥಾನದ ಚಿತ್ರ ನೀಡಿರುವುದರಿಂದ ಆ ಅಸಮಾಧಾನ– ಅದು ಸಕಾರಣವಿರಲಿ, ನಿಷ್ಕಾರಣವಿರಲಿ ದೂರ ಮಾಡುವುದೆಂಬುದು ಎರಡನೆಯ ಕಾರಣವಾಗಿದೆ.

ಶ್ರೇಷ್ಠ ವಿದ್ವಾಂಸರೂ, ಶ್ರೇಷ್ಠ ಸಾಹಿತಿಗಳು ಆದ ಡಾ॥ ಪಿ. ಎಸ್. ರಾಮಾನುಜಂ ಅವರು ತಮ್ಮ ಮುನ್ನುಡಿಯಲ್ಲಿ ಐತಿಹಾಸಿಕ ಕಾದಂಬರಿಗಳ ಅಗತ್ಯ, ಪ್ರಸ್ತುತತೆ, ತಿರುಳು–ಹುರುಳುಗಳನ್ನು ಕುರಿತು ಮನೋಜ್ಞವಾಗಿ ವಿವರಿಸಿದ್ದಾರೆ. ಮಾಸ್ತಿ, ತ.ರಾ.ಸು., ಶ್ರೀನಿವಾಸರಾವ್ ಕೊರಟಿ, ಸಿ. ಕೆ. ನಾಗರಾಜರಾವ್, ಆನಂದಕಂದ, ಅ.ನ.ಕೃ. ಮೊದಲಾದ ಮಹನೀಯರು ತಮಗೆ ನೀಡಿರುವ ಐತಿಹಾಸಿಕ ಕಾದಂಬರಿಗಳು ಮೌಲಿಕವಾದುವುಗಳಾದರೂ ಒಟ್ಟಿನಲ್ಲಿ ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳು ವಿರಳವೆಂಬ ರಾಮಾನುಜಂ ಅವರ ಅಭಿಪ್ರಾಯವನ್ನು ಒಪ್ಪಲೇಬೇಕಾಗುತ್ತದೆ.

ಶ್ರೀನಿವಾಸರಾಯರ ಈ ಐತಿಹಾಸಿಕ ಕಾದಂಬರಿಯನ್ನು ಓದಿದಾಗ ಇವರ ಈ ಹಿಂದಿನ ಹದಿನೇಳು ಕಾದಂಬರಿಗಳೂ ಐತಿಹಾಸಿಕ ಕಾದಂಬರಿಗಳಾಗಬಾರದಿತ್ತೆ

ಎಂದೆನಿಸಿತು. ಇತಿಹಾಸದ ಸೂಕ್ಷ್ಮ ವಿವರಗಳ ಪರಿಶೋಧನೆ, ಇತಿಹಾಸದ ಆ ಘಟನೆಗಳು ನಡೆದ ಸ್ಥಳಗಳ ಸಾಕ್ಷಾತ್ ಪರಿಚಯ, ಅಲ್ಲಿಯ ಜನರ ನಂಬಿಕೆಗಳು, ನಡವಳಿಕೆಗಳು, ಹಬ್ಬ-ಉತ್ಸವಾದಿಗಳ ಆಚರಣೆಗಳು. ಅರಮನೆಯ ಕುತಂತ್ರಗಳು–(*Palace intrigues*). ಅಂತಃಕಲಹಗಳು. ಅಪ್ಪಟ ದೇಶಪ್ರೇಮಿಗಳಂತೆ ದುಷ್ಟ ದೇಶದ್ರೋಹಿಗಳು. ಹೆಣ್ಣಿನ ಉನ್ನತ ಮಾದರಿಗಳಂತೆ ಅವನತ ಮಾದರಿಗಳು. ಚತುರೋಪಾಯಗಳ ಚಲಾವಣೆ. ವೀರರಾಜೇಂದ್ರನ ಧೀರೋದಾತ್ತ ಗುಣಗಳೊಡನೆ ಅವನ ಬಂಧುಗಳ ದುರ್ಗುಣಗಳು ಇವುಗಳನ್ನು ಮುಖಾಮುಖಿ ಮಾಡಿ ವೈದೃಶ್ಯ ಸಾಧನೆಯನ್ನು ಸಾಧಿಸಿದುದಲ್ಲದೆ ಕೊಡಗಿನ ನೆರೆ ರಾಜ್ಯಗಳೊಡನೆ, ಆಂಗ್ಲರೊಡನೆ, ಟಿಪ್ಪುಸುಲ್ತಾನನೊಡನೆ ನಡೆದ ಸಂಧಾನಗಳ ಕಣ್ಣುಮುಚ್ಚಾಲೆಗಳ ಆಕರ್ಷಕ ಆಯೋಜನೆಗೈದಿರುವುದರಿಂದ ಈ ಕಾದಂಬರಿ 'ತ್ರಿಲ್' (*Thrill*)ಗಳ ತೂಗುಯ್ಯಾಲೆಯಾಗಿದೆ.

ಇಂದಿನ ಕೊಡಗು ಒಂದು ಚಿಕ್ಕ ಜಿಲ್ಲೆಯಾದರೂ ಅದನ್ನೊಂದು ಹಿರಿಯ ರಾಜ್ಯವನ್ನಾಗಿ ಮಾಡಿದ ಹಿರಿಮೆ ಪ್ರೌಢಪ್ರತಾಪ ವೀರರಾಜೇಂದ್ರನದು. ಎಂಥ ವರ್ಣಮಯ ರಾಜ್ಯವದು : ಪ್ರಕೃತಿಶ್ರೀಯ ಆಡುಂಬೊಲ : ಬೆಟ್ಟ, ಕಣಿವೆ, ಕಾಡುಮೇಡುಗಳ ಬೆಡಗಿನ ಬೀಡು : ಕಾಡು ಕುರುಬರು, ಜೇನು ಕುರುಬರು, ಮುಳ್ಳು ಕುರುಬರಂಥ ಗಿರಿಜನರಿಂದ, ಪಣ್ಯದ ಹೊಲೆಯರು, ಜಮ್ಮದ ಆಳುಗಳು, ರೈತರು, ಚಾವಡಿಗಾರರು, ಕಾಪಳರು, ಬೊಳಿ ಪೆಗ್ಗಡೆಗಳು, ಊರ ನಾಡತಕ್ಕರು, ಕಣಿಯರು, ಕಾರೆಣೆ-ಕಾವೆಣೆಡಿಯರು, ತುರುಚಿಯರು, ಕೊಡವರು, ಕೊಡಗು ಮಾಪಿಳ್ಳೆಯವರು, ತಿರುವಳಿಕಾರರು, ಪಣಿಕರು, ಬಣ್ಣರು ಮುಂತಾದ ಪಂಗಡಗಳಿಂದ ರಾಜರಾಣಿಯರವರೆಗೆ ಹರಡಿರುವ ಜನಸಮುದಾಯದ ಬಗೆಬಗೆಯ ಬದುಕಿನ ಬಣ್ಣಬಣ್ಣದ ನಾಡು. ಅವರೆ ಎಲ್ಲರೂ ಕೊಡಗಿನ ಕಳೆದು ಹೋಗಿದ್ದ ಸ್ವಾತಂತ್ರ್ಯದ ಸಂಪಾದನೆಗಾಗಿ ಕಂಕಣ ಕಟ್ಟಿದವರು. ಕಾದಂಬರಿ ಓದುತ್ತ ಹೋದಂತೆ ಇದೊಂದು ರಾಜಮನೆತನಕ್ಕೆ ಸಂಬಂಧಿಸಿದ ಕಥೆಯೆಂಬುದು ಮರೆತು ಹೋಗಿ ಒಂದು ಜನಾಂದೋಲನದ ಚಿತ್ರ ಎಂದೆನಿಸತೊಡಗುತ್ತದೆ. "ಕೊಡಗ ಆನೆ, ಹುಲಿ, ಚಿರತೆಗಳೊಡನೆ ಕಾದಾಡುತ್ತಿರಬೇಕು. ಇಲ್ಲವೆ ಶತ್ರುಗಳೊಡನೆ ಯುದ್ಧ ಆತನ ನಿತ್ಯ ವ್ಯಾಯಾಮ, ಇವಿಲ್ಲದಿದ್ದರೆ ಅವನಿಗೆ ಹಸಿವಾಗದು, ನಿದ್ದೆ ಬಾರದು" (ಪುಟ 107). "ನಾವು ಕೊಡಗರು : ನ್ಯಾಯನೀತಿಯ ಮುಂದೆ ದಯಾಪರರು : ಅನ್ಯಾಯ, ಅನೀತಿಯ ವಿರುದ್ಧ ಕಡುಕ್ರೂರಿಗಳು" (ಪುಟ 262-63) ಎಂಬ ಮಾತುಗಳು ಕಾದಂಬರಿಯನ್ನೋದಿ ಮುಗಿಸಿದಾಗ ನಿಜವೆನ್ನಿಸುತ್ತವೆ.

ಸಂಜಯಯಖಾನ್‌ನ ಮೈಸೂರಿನ ಮಹಾರಾಜರ ಅವಹೇಳನ, ಟಿಪ್ಪು ಸುಲ್ತಾನನ ವೈಭವೀಕರಣದ ಅತಿರಂಜಿತ ದೂರದರ್ಶನ ಚಿತ್ರ 'ಟಿಪ್ಪುನ ಖಡ್ಗ' ಏನೇ ಹೇಳಲಿ, ಈ ಕಾದಂಬರಿಯಲ್ಲಿ ಅವನ ನಿಜರೂಪ ಮೂಡಿ ನಿಂತಿದೆ. 'ಟಿಪ್ಪು ವಿನ ಕ್ರೂರ ನಿರಂಕುಶ ಪ್ರಭುತ್ವ, ಜಾತ್ಯಂಧತೆ, ರಾಜ್ಯದಾಹ ಜಗುಪ್ಸೆ' (ಪುಟ 77) ತಂದಿದ್ದುವೆಂದೇ ಕೊಡವರು ಅವನ ವಿರುದ್ಧ ದಂಗೆಯೆದ್ದಿದ್ದರು. ಇದಲ್ಲದೆ ಪುಟ 25 ಮತ್ತು 27ರಲ್ಲಿ ಬಂದಿರುವ ಭೀಭತ್ಸಕರ ಘಟನೆಗಳೂ ಅವನೊಬ್ಬ ಸ್ವಾತಂತ್ರ್ಯ ವೀರನೆಂಬುದು ಬರಿ ನಟನೆಯೆಂಬುದನ್ನೇ ಸ್ಥಿರೀಕರಿಸುತ್ತವೆ. ಜೊತೆಗೆ ಇಸ್ಮಾಯಿಲ್ ಖಾನ್, ಖಾದರ್‌ಖಾನ್ ಕೈಸಗಿ, ಭೈರಾಮಜೀಯಂಥವರ ಚಿತ್ರಗಳೂ ಬಂದು ಮಾನವೀಯತೆ ಯಾವ ಒಂದು ಸಮಾಜದ ಸೊತ್ತೂ ಅಲ್ಲ, ಗುತ್ತಿಗೆಯೂ ಅಲ್ಲ– ಎಲ್ಲ ಸಮಾಜಗಳಲ್ಲೂ ಮಾನವರೂ ದಾನವರೂ ಇದ್ದೇ ಇರುತ್ತಾರೆಂಬುದನ್ನು ನಿಚ್ಚಳಗೊಳಿಸುತ್ತವೆ.

ಇಂಥ ಕೋಲಾಹಲಮಯ ಕಾಲದಲ್ಲಿಯೂ ಪ್ರಣಯಲೀಲೆಗಳು ಸಾಗಿಯೇ ಇರುತ್ತವೆ. ಸೆರೆಮನೆಯಲ್ಲಿಯೇ ನಂಜಮ್ಮಾಜಿಯ ಪಾಣಿಗ್ರಹಣ, ಆಮೇಲೆ ಗಿರಿಜೆಯ ಪದಾರ್ಪಣೆ, ಆಮೇಲೆ ನಂಜಮ್ಮಾಜಿಯೇ ಶಾರದೆಯ ಕೈಯನ್ನು ಗಂಡನ ಕೈಯಲ್ಲಿರಿಸಿ ಕಣ್ಮುಚ್ಚುವುದು ಇನ್ನೂ ಕೆಲವು ಮೋಜಿನ ಮದುವೆಗಳು ಕೊಡಗಿನ ಕಾಡುಗಳಿಗೆ ಕಂಪು ನೀಡುತ್ತವೆ.

ಕಾದಂಬರಿಯ ಭಾಷೆಯ ಬಗ್ಗೆ ಒಂದು ಮಾತು. ಶ್ರೀನಿವಾಸರಾಯರು ಕೆಲಸ ಮಾಡಿದುದು ಕಾರಖಾನೆಯಲ್ಲಾದರೂ ಕನ್ನಡ ನುಡಿಯ ಜಾಯಮಾನವನ್ನು ಚೆನ್ನಾಗಿ ಅರಿತುಕೊಂಡು ಅದರ ಸಾಧ್ಯತೆಗಳನ್ನು ಸೂರೆಗೊಳ್ಳುವುದರಲ್ಲಿ ಯಶಸ್ವಿ ಯಾಗಿದ್ದಾರೆ. ಹಿತಮಿತವಾದ ಮಾತುಗಳಲ್ಲಿ ಬಗೆ ಮುಟ್ಟುವ ಬಗೆಯನ್ನು ಅಳವಡಿಸಿ ಕೊಂಡಿದ್ದಾರೆ. ಪುಟ್ಟ ಪುಟ್ಟ ವಾಕ್ಯಗಳು ಕೆಲವು ಹಸಿಗೋಡೆಯ ಮೇಲೆ ಹರಳಿಟ್ಟ ಹಾಗೆ ಮನದಲ್ಲಿ ಮನೆ ಮಾಡುತ್ತವೆ. "ಆಸುಮಾನಕ್ಕೆ ರೆಕ್ಕೆಪುಕ್ಕ ಬೆಳೆಯಲು ಬಿಟ್ಟರೆ ಅದು ಹಾರದ ಸ್ಥಳವಾವುದು ?", "ಅಗಲ ಕಪ್ಪುಕಣ್ಣಿನಲ್ಲಿ ಆಕರ್ಷಣೀಯ ಚಂದ್ರ ಅರಳಿದ್ದಾನೆ", "ತಿಂದು ಬೆಳೆದಲ್ಲೇ ಕ್ರಿಮಿ ಉತ್ಪಾದಿಸುವ ಹೊಲಸು ಜೀವಿ", "ನಾಡಿನಲ್ಲಿ ಕೊಡವರು ಅಜೇಯರು", "ಹುರುಪು ಉಡುಗಿ, ಉತ್ಸಾಹ ಒಣಗಿ, ಚೈತನ್ಯಕ್ಕೆ ಗೆದ್ದಲು ಹತ್ತತೊಡಗಿದೆ", "ನೆಲೆ ನಿಲ್ಲದ ಯೋಜನೆಗಳು ಕಪ್ಪೆ ಗಳಾಗಿವೆ : ಯೋಜನೆಗಳು ಸೊಣಗಳಾಗಿವೆ", "ಜೊತೆಯಲ್ಲಿದ್ದ ಹೆಂಗಳೆಯರು ಮತ್ತಿಗೇ ಮಾದಕತೆ ಉಣಿಸಿದ್ದರು", "ಕೈಬಳೆ ಖಂಜರಿ ಬಾರಿಸಿದುವು", "ತೂಗು ದೀಪ ತುಯ್ಯಲಾಡಿ ನೆರಳಿಗೆ ನರ್ತನ ಕಲಿಸತೊಡಗಿತ್ತು", "ನಾಯಿ ಮೂಳೆಗೆ

ಬಾಯಿ ಬಿಡುತ್ತದೆ : ಚಿರತೆ ಬಿಸಿರಕ್ತಕ್ಕೆ ಹಾತೊರೆಯುತ್ತದೆ", "ನಿಮ್ಮ ಆತ್ಮ ವಂಚನೆಯ ಮಾತಿಗೆ ನಿಮ್ಮ ಕಣ್ಣು ಸಹಕರಿಸುತ್ತಿಲ್ಲ", "ಮನಸ್ಸು ಮೂಕ ಹುತ್ತವಾಗಿತ್ತು" ಇತ್ಯಾದಿ, ಇತ್ಯಾದಿ ;

ಈ ಕಾದಂಬರಿಯ ಎರಡನೆಯ ಭಾಗವೂ ಇಷ್ಟೇ ಕಲಾತ್ಮಕವಾಗಿ ಹೊರಬರಲೆಂದು ಹಾರೈಸುತ್ತೇನೆ. ಹಾಗೆ ಆದಲ್ಲಿ ಈ ಐತಿಹಾಸಿಕ ಕಾದಂಬರಿ ಒಂದು ಮಹತ್ವದ ಕಾದಂಬರಿಯಾಗುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.



# ಓದಿ ಸಂತೋಷ ಪಡುವ ಕಾದಂಬರಿ

ಡಾ|| ವಿ. ಕೃ. ಗೋಕಾಕ್

ಇದೊಂದು ಒಳ್ಳೆಯ ಸಂವಿಧಾನಕ ಹಾಗೂ ಪರಿಸರದ ಕಾದಂಬರಿ. ಅದರ ಚಾರಿತ್ರಿಕ, ಐತಿಹಾಸಿಕ, ಭೌಗೋಲಿಕ ವಿವರಗಳನ್ನು ಇವರು ಚೆನ್ನಾಗಿ ಜೀರ್ಣಿಸಿ ಕೊಂಡಿದ್ದಾರೆ. ಇವರು ಸ್ವೀಕರಿಸಿದ ತಂತ್ರ ಕಥಾನಕವನ್ನು ರಸವತ್ತಾಗಿಸಿದೆ. ಆದರೆ ಈ ಕಾರಣದ ಸಲುವಾಗಿ ಪಾತ್ರಗಳು *types* ಆಗಿ ಉಳಿದಿವೆ. ವೀರರಾಜೇಂದ್ರ ಸಹ ಒಂದು ದೊಡ್ಡ *type* ಅಷ್ಟೆ.

ಆದರೆ ಕಥಾನಕವನ್ನು ಆಕರ್ಷಕವಾಗಿ ಮಾಡಿರುವುದಲ್ಲದೆ ಕೊಡಗು ಕನ್ನಡ, ಕೊಡಗರ ರೂಢಿ ಸಂಪ್ರದಾಯ-ಭಾಷೆ ಕೂಡ ಚೆನ್ನಾಗಿ ಬಂದಿದೆ. ನೈಸರ್ಗಿಕ ನಿರೂಪಣೆಯೂ *interesting* ಆಗಿ ಬರುತ್ತದೆ. ಪೆರಿಮಾರಿನ ಗಡಿನಾಡನ್ನು ದಾಟುವಾಗ ಇದ್ದ ಏರು-ಪೇರುಗಳು ಎದೆ ತಟ್ಟುವಂತೆ ನಿರೂಪಿತವಾಗಿವೆ. ಅಂತಹ ಕೆಲವು ಸನ್ನಿವೇಶಗಳಿವೆ.

ಒಟ್ಟಾರೆ ಕಾದಂಬರಿಯು ಕೊಡುವ ಆ ಕಾಲದ ಚಿತ್ರಣವೆಂದರೆ ಕೆಡುಕಿನ ಪ್ರಾಧಾನ್ಯ. ಅಲ್ಲಲ್ಲಿ ಒಳ್ಳೆಯತನದ ಹೋರಾಟ. ರಾಜನೇ ಸಾತ್ವಿಕ-ರಾಜಸಿಕ ನಾದುದರಿಂದ ಈ ಎಲ್ಲ ಗೊಂದಲಮಯತೆಯನ್ನು ನಿಯಂತ್ರಿಸುತ್ತಾನೆ. ಈ ಚಿತ್ರಣ ಆ ಯುಗದ ಜೀವನದಂತೆ ಇದೆ.

'ಪ್ರೌಢ ಪ್ರತಾಪ ವೀರರಾಜೇಂದ್ರ' ಓದಿ ಸಂತೋಷ ಪಡುವ ಕಾದಂಬರಿ.



# ಕಲಾತ್ಮಕ ಕೃತಿ

ಎಲ್. ಎಸ್. ಶೇಷಗಿರಿರಾವ್

ಪ್ರೌಢ ಪ್ರತಾಪ ವೀರರಾಜೇಂದ್ರ ಕಾದಂಬರಿಯನ್ನು ಬಹು ಆಸಕ್ತಿಯಿಂದ ಓದಿದೆ. ನಾನು ಎಂಟು ವರ್ಷ ಮಡಿಕೇರಿ ಸರ್ಕಾರಿ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದುದರಿಂದ ನನಗೆ ಕೊಡಗಿನ ಚರಿತ್ರೆಯ ಆಧಾರದ ಮೇಲೆ ಶ್ರೀನಿವಾಸರಾವ್ ಬರೆದ ಕಾದಂಬರಿಯಲ್ಲಿ ವಿಶೇಷ ಆಸಕ್ತಿ.

ಪ್ರಾರಂಭದಲ್ಲಿ ಎರಡು ಸಾಧನೆಗಳಿಗಾಗಿ ಅವರನ್ನು ಅಭಿನಂದಿಸಬೇಕು. ಮೊದಲನೆಯದು, ಆಸಕ್ತಿಯಿಂದ ಕಾದಂಬರಿ ಓದಿಸಿಕೊಂಡು ಹೋಗುತ್ತದೆ. ಪ್ರಾರಂಭದಿಂದ ವೀರರಾಜೇಂದ್ರನ ಪಾತ್ರ ಕೇಂದ್ರದಲ್ಲಿ ನಿಲ್ಲುತ್ತದೆ. ಕಥಾವಸ್ತು ಹಲವಾರು ತಿರುವುಗಳ ಮೂಲಕ ಮುಂದೆ ಸಾಗಿದಂತೆ ಉದ್ದಕ್ಕೂ ವೀರರಾಜೇಂದ್ರನ ಮತ್ತು ಅವನ ಬೆಂಬಲಿಗರ ದೇಶಪ್ರೇಮ, ಸ್ವಾತಂತ್ರ್ಯ ಪ್ರೇಮ, ಸಾಹಸಪ್ರೇಮ ಇವು ನಮ್ಮ ಮನಸ್ಸಿನ ಮೇಲೆ ಅಚ್ಚೊತ್ತಿ ಅವರ ಏಳುಬೀಳುಗಳು ಮನಸ್ಸನ್ನು ಸೆರೆ ಹಿಡಿಯುತ್ತವೆ. ಎರಡನೆಯದಾಗಿ, ಕೊಡಗಿನ ಅಂದಿನ ಚರಿತ್ರೆಯ ನೂರಾರು ವಿವರಗಳನ್ನು ಅಧ್ಯಯನ ಮಾಡಿ ಕಲಾತ್ಮಕವಾಗಿ ಬಳಸಿಕೊಂಡಿದ್ದಾರೆ. ಕೊಡವರ ಜೀವನದ ನೂರಾರು ವಿವರಗಳನ್ನು ಅರ್ಥ ಮಾಡಿಕೊಂಡು ಆ ವಿಶಿಷ್ಟ ಜನತೆಯ ವಿಶಿಷ್ಟ ಬದುಕಿನ ರೀತಿಯನ್ನು ಪುನಸ್ಸೃಷ್ಟಿಸಿದ್ದೀರಿ. ಚಾರಿತ್ರಿಕ ಕಾದಂಬರಿ ಒಂದು ಸಮುದಾಯದ ಏಳುಬೀಳುಗಳನ್ನು ಚಿತ್ರಿಸುತ್ತದೆ, ಹಾಗೆ ಚಿತ್ರಿಸುವಾಗ, ಯಾವುದೇ ಸಮುದಾಯ ಉನ್ನತಿಗೇರುವುದು ಹೇಗೆ, ಅವನತಿಗೆ ಈಡಾಗುವುದು ಹೇಗೆ, ಎಂಬ ಮೂಲಭೂತ ಪ್ರಶ್ನೆಗಳನ್ನು ನಮ್ಮ ಮುಂದಿರಿಸಿ. ಕಾದಂಬರಿ ಸಾರ್ವಕಾಲಿಕ ಪ್ರಾಧಾನ್ಯವನ್ನು ಪಡೆದುಕೊಳ್ಳುತ್ತದೆ. ಭಾರತವನ್ನು ಒಡೆಯುವ ಹತ್ತಾರು ಶಕ್ತಿಗಳು, ಗುಂಪುಗಳು ಗರಿಗೆದರುತ್ತಿರುವ ಇಂದು, ಕೊಡಗಿನ ಅಂದಿನ ಚರಿತ್ರೆ ಪ್ರಸ್ತುತವಾಗಿದೆ. ಒಂದು ಯುಗದ, ಒಂದು ಸಮುದಾಯದ ಹಲವು ಶಕ್ತಿಗಳ ಮತ್ತು ಪ್ರವೃತ್ತಿಗಳ ಘರ್ಷಣೆಯಲ್ಲಿ ವ್ಯಕ್ತಿಗಳ ಕನಸುಗಳು ನಿರಾಸೆಗಳು, ಸ್ನೇಹ ಪ್ರೇಮ ದ್ವೇಷಗಳು ಇವುಗಳ ತುಯ್ತಗಳನ್ನು ನಿರೂಪಿಸುವುದರಲ್ಲಿ ಶ್ರೀನಿವಾಸರಾವ್ ಯಶಸ್ವಿಯಾಗಿದ್ದಾರೆ.

ಈ ಸ್ವಾರಸ್ಯವಾದ ಕೃತಿಯ ವಿಷಯದಲ್ಲಿ ನನಗಿರುವ ಒಂದು ಅನುಮಾನ

ವನ್ನು ಸೂಚಿಸಬಯಸುತ್ತೇನೆ. ಘಟನೆಗಳು ಕಥೆಗೆ ಹಲವು ತಿರುವುಗಳನ್ನು ಒದಗಿಸಿ ಓದುಗರ ಕುತೂಹಲವನ್ನು ಹರಿತವಾಗಿ ಉಳಿಸುತ್ತವೆ. ಆದರೆ ಘಟನೆಗಳ ಸಮೃದ್ಧಿಯಿಂದ ಪಾತ್ರಗಳನ್ನು ಸಾಕಷ್ಟು ಅರಳಿಸಲು ಅವಕಾಶವಾಗಿಲ್ಲವೊ ಎಂಬ ಸಂದೇಹ ನನಗಿದೆ. ಪಾತ್ರಗಳಲ್ಲಿನ ದ್ವಂದ್ವಗಳು ಮತ್ತು ಒಳತೋಟಿಗಳು ಇವು ಇನ್ನಷ್ಟು ರೂಪುಗೊಂಡಿದ್ದರೆ ಕಾದಂಬರಿ ಇನ್ನಷ್ಟು ಮಾನವೀಯ ಆಸಕ್ತಿಯನ್ನು ಬೆಳೆಸಿಕೊಳ್ಳಬಹುದಾಗಿತ್ತು. ಪ್ರಾಯಶಃ ಕಾದಂಬರಿ ಇನ್ನು ವಿಸ್ತಾರವಾಗುವ ಆತಂಕದಿಂದ ಸಮುದಾಯದ ಏಳು-ಬೀಳುಗಳ ಹಿಂದಿನ ಶಕ್ತಿಗಳನ್ನು ಇನ್ನೂ ವಿಶ್ಲೇಷಿಸಲು ಸಾಧ್ಯವಾಗಿಲ್ಲ.

ಈಗಿರುವಂತೆ ಅವರ ಸಾಧನೆ ಕಡಿಮೆಯಲ್ಲ. ನಮ್ಮ ಹಿಂದಿನ ಇತಿಹಾಸವನ್ನು ಸಾಕ್ಷಾತ್ಕಾರ ಮಾಡಿಕೊಂಡು ಜೊತೆಗೇ ಇತಿಹಾಸವನ್ನು ಅರ್ಥ ಮಾಡಿಕೊಳ್ಳುವುದು ತೀರ ಅಗತ್ಯವಾಗಿರುವ ಕಾಲದಲ್ಲಿ ಐತಿಹಾಸಿಕ ಕಾದಂಬರಿ ಪ್ರಕಾರವೇ ಹಿಂದುಳಿಯುತ್ತಿದೆ. ಹದಿನೇಳು ಕಾದಂಬರಿಗಳನ್ನು ಬರೆದು ಸಾಕಷ್ಟು, ಈ ಪ್ರಕಾರವನ್ನು ಅರ್ಥ ಮಾಡಿಕೊಂಡು ಇದೀಗ ಈ ಪ್ರಕಾರವನ್ನು ಇತಿಹಾಸದ ದರ್ಶನಕ್ಕಾಗಿ ಬಳಸಿದ್ದಾರೆ. ಅವರ ಲೇಖನಿಯಿಂದ ಬರುವ ಹಲವಾರು ಉತ್ಕೃಷ್ಟ ಐತಿಹಾಸಿಕ ಕಾದಂಬರಿಗಳಿಗೆ ಇದು ನಾಂದಿಯಾಗಲಿ.



# ಇತಿಹಾಸ ಪ್ರಜ್ಞೆ ಮೂಡಿಸುವ ಸಾಹಿತ್ಯ

ಕೃ. ನಾರಾಯಣರಾವ್

ಕೊಡಗಿನ ರಾಜರ ಇತಿಹಾಸದ ಹಿರಿಮೆ ಗರಿಮೆ ಅಪಾರ. ಶಕ್ತಿ-ಸಾಹಸ, ಪ್ರೇಮ-ತ್ಯಾಗ, ದೇಶಾಭಿಮಾನ ಇವುಗಳಿಗೆ ಮೊದಲಿಂದಲೂ ಅಲ್ಲಿನ ಪ್ರಜಾ ಪಾಲಕರು, ಪ್ರಜೆಗಳು ಹೆಚ್ಚಿನ ಬಲಿದಾನ ಮಾಡಿರುವರೆಂಬುದು ಸತ್ಯ ಸಾಕ್ಷ್ಯ.

ಕನ್ನಡದಲ್ಲಿ ಐತಿಹಾಸಿಕ ಗ್ರಂಥಗಳು ಕಡಿಮೆಯೇ. ಅದರಲ್ಲೂ ಕಾದಂಬರಿಗಳು ಇನ್ನೂ ಕಡಿಮೆ. ವೀರಕೇಸರಿ ಸೀತಾರಾಮಶಾಸ್ತ್ರಿಗಳ ಕಾಲದ ನಂತರ ಈ ಪರಂಪರೆಯು ಕಳೆದೇ ಹೋಯಿತೇನೋ ಎನ್ನುವಷ್ಟರ ಮಟ್ಟಿಗೆ ಐತಿಹಾಸಿಕ ಕಾದಂಬರಿಗಳು ಕಂಡು ಬಂದಿವೆ. ಇದರ ಕಾರಣ ಸಾಮಾಜಿಕ ಕಾದಂಬರಿಗಳ ರಚನೆ ಗಿಂತಲೂ ಇದು ಶ್ರಮಸಾಧ್ಯ. ಸಾಕ್ಷ್ಯಾಧಾರದ ಅಂಕಿ ಅಂಶಗಳನ್ನು ಸಂಗ್ರಹಿಸಲು ಆಳ-ಅಧ್ಯಯನ, ದೀರ್ಘಕಾಲೀನ ಚಿಂತನೆ, ಸ್ಥಿರ ಮನಸ್ಕತೆ ಅತ್ಯಗತ್ಯ.

ಮೇಲ್ಕಂಡ ಅಂಶಗಳನ್ನು ಅವಲೋಕಿಸಿದಾಗ ಸೋದರರೂ, ಸಹೃದಯರೂ ಆದ ಶ್ರೀಯುತ ಎಸ್. ವಿ. ಶ್ರೀನಿವಾಸರಾವ್ ಅವರ 'ಪ್ರೌಢ ಪ್ರತಾಪ ವೀರ ರಾಜೇಂದ್ರ' ಕಾದಂಬರಿ ಕನ್ನಡ ಸಾಹಿತ್ಯದ ಇತಿಹಾಸ-ವಿಭಾಗಕ್ಕೆ ಒಂದು ಕನಕ ಕೌಸ್ತುಭ ಕಾಣಿಕೆ. ಮೈಸೂರಿನ ಹುಲಿ ಎಂದು ಹೆಸರು ಪಡೆದಿರುವ ಟಿಪ್ಪು ಮೈಸೂರಿನ ಇತಿಹಾಸದಲ್ಲಿ ವಿಖ್ಯಾತನೆನಿಸಿರುವುದು ಸಹಜ. ಆಂಗ್ಲೇಯರನ್ನು ಹತ್ತಿಕ್ಕಲು ಅವನು ಮಾಡಿರುವ ಸಾಹಸ ನಿಜಕ್ಕೂ ಪ್ರಶಂಸನೀಯ. ಆದರೆ "ನಾನು, ನನ್ನ ಪೌರುಷ" ಅಹಂನಲ್ಲಿ ತಪ್ಪಿತಸ್ಥರಲ್ಲದ, ಸ್ವಾಭಿಮಾನಗಳೆನಿಸಿದ ಸಾಕಷ್ಟು ರಾಜರ ಸ್ವತಂತ್ರ ಹಾಗೂ ಜನಪ್ರಿಯ ಆಡಳಿತ ಅವನಿಗೆ ಹಿಡಿಸಿರಲಿಲ್ಲ. ಅವರಿವರ ಚಾಡಿ ಮಾತಿಗೂ ಗಮನ ಹರಿಸಿ ಹಿತ್ತಾಳೆ ಕಿವಿ ಆಗಿದ್ದುದು ಸ್ವಲ್ಪ ಮಟ್ಟಿಗೆ ಅಸತ್ಯವೇನಲ್ಲ. ಹಾಗೆಯೇ ವೀರರಾಜೇಂದ್ರನಂತಹ ಧೀರ,ವೀರ, ಗಂಭೀರ ಗುಣದ ರಾಜನನ್ನು ಎದುರು ಹಾಕಿಕೊಂಡ. ಅವನ ತಮ್ಮನಾದ ಲಿಂಗರಾಜನಲ್ಲಿ ದುರ್ಯೋಧನೆಯ ಬೀಜ ಹಾಕಿ, ಗಿಡ ಬೆಳೆಸಿ, ರಾಜೇಂದ್ರನನ್ನೇ ಕೊನೆಗೊಳಿಸಲು ಕುಹಕ ರೀತಿಯ ಕುಕೃತ್ಯಕ್ಕೆ ಕೈ ಹಾಕಿದ. ದೈವ-ದೇಶಭಕ್ತನೆನಿಸಿದ್ದ ರಾಜೇಂದ್ರ ಮೈಸೂರಿನ ಹುಲಿಯನ್ನು ಸೋಲಿಸಿದ ಹೆಬ್ಬುಲಿ ಆದ ಎಂಬುದರ ಭಯಾನಕ-ರೋಮಾಂಚಕಾರಿ, ಐತಿಹಾಸಿಕ ಸಂಗತಿಗಳು ಕಾದಂಬರಿಯಲ್ಲಿ ರಮ್ಯ-ಭವ್ಯ ಎನಿಸುವಂತೆ ಸ್ವರೂಪ ತಾಳಿವೆ.

ಕಾದಂಬರಿಯ ಮುಖ್ಯ ಉದ್ದೇಶ ಕೊಡಗಿನ ರಾಜರ ವೀರೋಚಿತ, ಉದಾರ ಗುಣಗಳ, ಉದಾತ್ತ ಜೀವನವನ್ನು ಚಿತ್ರಿಸುವುದಾಗಿದೆ. ಕಾದಂಬರಿಕಾರರು ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಮಾತು–ಮಾತಿನಲ್ಲೂ ರಾಜಭಕ್ತಿ ಹಾಗೂ ಸ್ವಾಭಿಮಾನದ ಬೆಳಕನ್ನು ಬೆಳ್ಳಿಯ ರೀತಿಯಲ್ಲಿ ಬೆಳಗಿದ್ದಾರೆ. ಸಾಕಷ್ಟು ಕಟು ಸತ್ಯ ಸಂಗತಿಗಳನ್ನು ಕಾದಂಬರಿಕಾರರು ಹೊರಗೆಡುಹುವಾಗ ಎದೆ ಝಲ್ಲೆನಿಸದಿರದು. ಇಂತಹ ಎದೆಗಾರಿಕೆಯನ್ನು ದಿವಂಗತ ಎಂ. ಆರ್. ಶ್ರೀನಿವಾಸಮೂರ್ತಿ ಅವರ 'ಬಸವಣ್ಣನವರು' ಗ್ರಂಥದಲ್ಲಿ ಬಹು ಹಿಂದೆ ನಾನು ಗುರುತಿಸಿದ್ದೆ.

ಈ ಕಾದಂಬರಿ ಕೇವಲ ಕೊಡಗರ ಪ್ರಸಿದ್ಧ ರಾಜನೆನಿಸಿದ್ದ ವೀರರಾಜೇಂದ್ರನ ಜೀವನ ಚರಿತ್ರೆಯೇ ಅಲ್ಲ, ಕೊಡಗರ ಸಂಸ್ಕೃತಿ, ಸಭ್ಯತೆ ಸಂಪ್ರದಾಯಗಳ ಸಂಗಮವೇ ರಮ್ಯವೆನಿಸುವ ರೀತಿಯಲ್ಲಿ ಸಾಹಿತ್ಯದ ರೂಪ ತಾಳಿದೆ.

ಕಾದಂಬರಿಯಲ್ಲಿ ಚರಿತ್ರೆಯ ಚಿತ್ರಣಕ್ಕೆ ಪ್ರಮುಖ ಸ್ಥಾನವಿದೆ. ಮುಖ ವರ್ಚಸ್ಸೂ ಸಹ ಬಹು ಮಟ್ಟಿಗೆ ವ್ಯಕ್ತಿಯ ಚರಿತ್ರೆಯ ಚಿತ್ರಣಕ್ಕೆ ಸೂಕ್ಷ್ಮದೃಷ್ಟಿಯಲ್ಲಿ ಸಹಕಾರಿ ಎನಿಸಿರುತ್ತದೆ.

"ಘಲ್ ಘಲ್ ಎಂದು ಗೆಜ್ಜೆಯ ಸದ್ದಾದಾಗ ವೀರರಾಜೇಂದ್ರನ ಕಣ್ಣು ಬಾಗಿಲತ್ತ ಹೊರಳಿತು. ಹಸಿರು ಜರಿಯ ಕೆಂಪು ರೇಷ್ಮೆ ಸೀರೆ ಉಟ್ಟು, ತೆಳು ಹುಡುಗಿ ನಿಧಾನವಾಗಿ ಬಂದಳು. ಹಿಂದೆ ತಂದೆ ಸೋಮಯ್ಯ ಆಕೆಯ ಭುಜ ಹಿಡಿದು ಬರುತ್ತಿದ್ದ.

ಸೋಮಯ್ಯ ರಾಜಮನೆತನಕ್ಕೆ ಪರಿಚಿತ ವ್ಯಕ್ತಿಯೇ ಆಗಿದ್ದರೂ ಆತನ ಮಗಳನ್ನು ಕಂಡದ್ದು ಇದೇ ಮೊದಲೆನಿಸಿತು. ಸುಂದರ ಬಿಳಿಯ ಮುಖ, ಹೊಳೆಯುವ ಅಗಲ ಕಣ್ಣು, ಜೇನು ತುಟಿ, ಮಾಟದ ಅಂಗ ಸೌಷ್ಟವ.

ರಾಜೇಂದ್ರ ಮತ್ತೆ ಮತ್ತೆ ನೋಡಿದ. ಅವನ ನೋಟವನ್ನು ಎದುರಿಸಲಾರದೆ ಆಕೆ ತಲೆ ತಪ್ಪಿಸಿ ಹೆಬ್ಬೆರಳಿಂದ ನೆಲದಮೇಲೆ ಗೆರೆ ಮೂಡಿಸತೊಡಗಿದ್ದಳು." (ಪುಟ 21)

ಹೆಣ್ಣಿನ ಶೀಲದ ವರ್ಣನೆಗೆ ಇದಕ್ಕಿಂತಲೂ ಮಿಗಿಲೆನಿಸುವ ವಿಚಾರ ಇಲ್ಲ.

ಕಾದಂಬರಿಯಲ್ಲಿನ ಇನ್ನೊಂದು ಅಗ್ಗಳಿಕೆ ಎಂದರೆ ಓದುಗರನ್ನು ಭಾವ ಪರವಶತೆಯಲ್ಲಿ ಮುಳುಗಿಸುವುದು. ವಿಚಾರದಲ್ಲಿ ಮೈಮರೆಸುವುದರೊಂದಿಗೆ ತಲ್ಲೀನತೆಯ ತಳ ಮುಟ್ಟಿಸುವುದು. ಉದಾಹರಣೆಗೆ ಓಡಿ ಬಂದ ಸೇವಕನೊಬ್ಬ

"ಮಾತೋಶ್ರೀಯವರು ಮರಣ ಹೊಂದಿದರು" ಎಂದು ತಿಳಿಸಿದೊಡನೆ ರಾಜೇಂದ್ರನು ಕೈಯಲ್ಲಿದ್ದ ಸೀಟಿಕತ್ತಿಯನ್ನು ರೊಯ್ಯನೆ ಎಸೆದ. ಕಲ್ಲು ಗೋಡೆಗೆ 'ಚನ್' ಎಂದು ತಾಕಿ ಕೆಳಗೆ ಬಿತ್ತು. ಹುಮ್ಮಸ್ಸು ಒಮ್ಮೆಗೇ ಆವಿ ಆಯಿತು. ಆವೇಶ ಬತ್ತಿ ಹೋಯಿತು. ಉಕ್ಕಿ ಬಂದ ಅಳಲನ್ನು ತಡೆಯಲಾರದೆ ತಲೆಯ ಮೇಲೆ ಕೈಹೊತ್ತು ಕುಳಿತ. (ಪುಟ 26)

ಎಂತಹ ದುರುಳ–ಕುಡುಕ ಹಾಗೂ ಮ್ಲೇಚ್ಛರಲ್ಲಿಯೂ ಕಿಂಚಿತ್ತಾದರೂ ಮಾನವೀಯತೆ ಇದೆ ಎಂಬುದನ್ನು ಇಸ್ಮಾಯಿಲ್ ಖಾನ್ ಪಾತ್ರದಲ್ಲಿ ನಾವು ಕಾಣಬಹುದು. ಹಾಗೆಯೇ ರಾಜೇಂದ್ರ ಶೂರನಾದರೂ "ಎನಗಿಂತ ಕಿರಿಯರಿನ್ನಿಲ್ಲ" ಎನ್ನುವಂತಹ ಸದ್ಭಾವನೆಗಳು ಕಾದಂಬರಿಯಲ್ಲಿ ಹಲವೆಡೆ ಮೂಡಿ ಬಂದಿದೆ.

ಹಲವಾರು ಜೇನ್ನುಡಿಗಳು ಕಾದಂಬರಿಯಲ್ಲಿ ವಾಚಕರ ಹೃದಯಕ್ಕೆ ಇಂಪು-ತಂಪು-ಸೊಂಪು ಮೂರು ಭಾವಗಳ ಸಂಗಮವನ್ನುಂಟು ಮಾಡಿವೆ.
ಉದಾಹರಣೆಗೆ :—

1. ಹೆಂಡತಿಗೆ ಗಂಡನ ಗೆಲುವಿನಲ್ಲೇ ತೃಪ್ತಿ. ಸೋಲಿನಲ್ಲಿ ಸಮಾಧಾನ. (ಪುಟ 71)
2. ಮೆಹರುನ್ನೀಸಾ : ಬೆಣ್ಣೆಯ ಮುದ್ದೆಯಲ್ಲಿ ಕಡೆದ ದೇಹದಲ್ಲಿ ಜೇನು ಹರಿದಿದೆ. (ಪುಟ 33)
3. ಕಷ್ಟ ಪಟ್ಟ ನಂತರವೇ ಸುಖ, ಉಂಡರೆ ಅದರ ರುಚಿ ಹೆಚ್ಚು ಮಗು. (ಪುಟ 21)
4. ಮನಸ್ಸು ಮೂಕ ಹುತ್ತವಾಗಿತ್ತು. (ಪುಟ 230)
5. ಸತ್ತು ಮಲಗಿದೆ ನನ್ನ ಶಾಂತಿ. (ಪುಟ 124)

ಕಾದಂಬರಿಯಲ್ಲಿ ನೀಡಿರುವ ಉಪಮಾನಗಳೂ ಸಂದರ್ಭೋಚಿತ ಸೂಕ್ತ ಸಾರ್ಥಕ ಎನಿಸಿವೆ.

1. ನಾಯಿ ಮೂಳೆಗೆ ಬಾಯಿ ಬಿಡುತ್ತದೆ, ಚಿರತೆ ಬಿಸಿ ರಕ್ತಕ್ಕೆ ಹಾತೊರೆಯುತ್ತದೆ. (ಪುಟ 219)
2. ಎದುರು ಗೋಡೆಯ ಬಳಿ ದೊಡ್ಡ ಮೇಜಿನ ಮೇಲೆ ದೊಡ್ಡದು ಆದೊಂದು ತನ್ನ ಅಗಲ ಬಾಯಲ್ಲಿ ಹುಲ್ಲೆಮರಿ ಹಿಡಿದು ನಿಂತಿರುವುದು ಕಾಣಿಸಿತು. (ಪುಟ 34)

ಟಿಪ್ಪು ಮೈಸೂರಿನ ಹುಲಿ ಎಂಬುದು ನಿಜ ಆದರೆ ಅವನಲ್ಲೂ ತನ್ನ ಪ್ರಭುತ್ವದ ಸ್ವಾರ್ಥ ಇತ್ತೆಂಬುದರ ಬಗ್ಗೆ ಸುವಿಸ್ತಾರವಾಗಿ ವಿವರಿಸಿದ್ದಾರೆ. ಐತಿಹಾಸಿಕ ವಿಚಾರಗಳಲ್ಲಿ ಪುರಾವೆಗಳೊಂದಿಗೆ ಹೊಸ ತಿರುವು ನೀಡಿದ್ದಾರೆ. ವಿಚಾರ ಪ್ರಿಯರಿಗೆ ಈ ಗ್ರಂಥ ಮೆಲುಕು ಹಾಕಲು ಯೋಗ್ಯ, ಆರೋಗ್ಯದಾಯಕ ತಿಂಡಿ. ಗಾಢ ಚಿಂತನೆಗೆ, ವಿಚಾರ ವಿಮರ್ಶೆಗೆ ಅರ್ಹ, ಜೊತೆಗೆ ಸಂಗ್ರಹ ಯೋಗ್ಯ.

ಭಾಷೆ ಪಳಗಿದೆ, ಶಬ್ದ ಸವೆದಿದೆ. ರಸ ತುಂಬಿದ್ದು ಓದುವಾಗ ನೀರಸತೆ ಬಾರದಂತೆ ಮಾಡಿದೆ, ಮೂಡಿದೆ-ಪ್ರಾಸಂಗಿಕ ವಿಚಾರಗಳು ಸಾಂದರ್ಭಿಕವಾಗಿ, ಸೂಕ್ತ ರೀತಿಯಲ್ಲಿ ಮಿಲಿತಗೊಂಡಿವೆ. ಸಂಭಾಷಣೆಯ ಶಬ್ದಗಳು ಸರಳ–ಸುಂದರ ವೆನಿಸಿರುವುದರೊಂದಿಗೆ ಸಂಕಲನತ್ರಯ (ಕಾಲ–ದೇಶ–ವರ್ತಮಾನ) ರೀತ್ಯಾ ಪೂ ಕಳಪೆ ಎನಿಸಿಲ್ಲ. ಸಾಹಿತ್ಯರಂಗದಲ್ಲಿ ಪ್ರಶಸ್ತಿಗೆ ಯೋಗ್ಯವಾದ ಒಂದು ಕೃತಿ ಈ "ಪ್ರೌಢಪ್ರತಾಪ ವೀರರಾಜೇಂದ್ರ". ಈ ಕೃತಿಕಾರರ ಶ್ರಮ ಅಪಾರವಿದ್ದರೂ, ಕೈಗೊಂಡ ಕಾರ್ಯಸಾರ್ಥಕ ಎಂಬುದೇ ಸಮಾಧಾನ. ಮುಂಬರಲಿರುವ 'ಪ್ರೌಢ ಪ್ರತಾಪ ವೀರರಾಜೇಂದ್ರ ಭಾಗ-2' ಕೃತಿಯನ್ನು ಓದಲೇಬೇಕೆಂಬ ಕುತೂಹಲ ವನ್ನು ಈ ಮೊದಲ ಕೃತಿ ಓದುಗರಲ್ಲಿ ಕೆರಳಿಸುತ್ತದೆ.



# ಮಹತ್ವದ ಐತಿಹಾಸಿಕ ಕಾದಂಬರಿ

ಎನ್. ಎನ್. ಹರಿ

ನಮ್ಮಲ್ಲಿ ಇತಿಹಾಸದ ಬಗ್ಗೆ ಬರೆಯುವ ಜನ ಬಹಳ ಕಡಿಮೆ. ಇತಿಹಾಸವನ್ನೇ ಮುಖ್ಯ ವಿಷಯವನ್ನಾಗಿ ಓದಿಕೊಂಡ ಅನೇಕರೂ ಐತಿಹಾಸಿಕ ಕೃತಿಗಳ ರಚನೆಗೆ ಕೈ ಹಾಕಿಲ್ಲ, ಹಾಕುವುದೂ ಇಲ್ಲ. ಇದಕ್ಕೆ ಕಾರಣಗಳೇನಾದರೂ ಇರಲಿ, ನಮ್ಮಲ್ಲಿ ಈತನಕ ಚಾರಿತ್ರಿಕ ಕೃತಿರಚನೆ ಮಾಡಿರುವವರಲ್ಲಿ ಇತಿಹಾಸದ ವಿದ್ಯಾರ್ಥಿಗಳು ಶೇಕಡಾ ತೊಂಬತ್ತೊಂಬತ್ತು ಶೂನ್ಯ. ಆದರೂ ಇವರೆಲ್ಲಾ ಇತಿಹಾಸದ ಅದ್ಭುತ ಪುನರ್‌ಸೃಷ್ಟಿ ಮಾಡಿದ್ದಾರೆ.

ಎಸ್. ವಿ. ಶ್ರೀನಿವಾಸರಾವ್ ಕೂಡ ಸಾಮಾಜಿಕ, ವೈಜ್ಞಾನಿಕ, ಪತ್ತೇದಾರಿ ಹಾಗೂ ವೈಚಾರಿಕ ಸಾಹಿತ್ಯ ರಚನೆಯಲ್ಲಿ ಅಗ್ರಗಣ್ಯರಾಗಿದ್ದಾರೆ. ಛಲ, ಸಾಧನೆಯ, ಮನೋಭಾವ ವ್ಯಕ್ತಿತ್ವದ ಇವರು ಈ ಸಲ ಕೊಡಗಿನ ಇತಿಹಾಸದತ್ತ ತಮ್ಮ ಗೃಧ್ರ ದೃಷ್ಟಿ ಹರಿಸಿ ಬಹುಮಟ್ಟಿಗೆ ಸಫಲರಾಗಿದ್ದಾರೆ.

ಇತಿಹಾಸ ಎಂದರೆ ಹೀಗೆ ನಡೆದದ್ದು ಎಂದಾದರೂ ಕಥಾದೃಷ್ಟಿಯಿಂದ ನಡೆದದ್ದಷ್ಟನ್ನೇ ದಾಖಲೆ-ಪುರಾವೆಗಳ ಮೂಲಕ ಬರೆದಿಡಲಾಗದು. ಸಿಕ್ಕ ದಾಖಲೆಗಳೊಂದಿಗೆ ಕಲ್ಪನೆಯ ಹೂರಣ ಬೆರೆಸಿ ಒಂದು ಮನೋಜ್ಞ, ಸಮಕಾಲೀನ ದೃಷ್ಟಿಯ ಕೃತಿರಚನೆ ಮಾಡುವುದು ಐತಿಹಾಸಿಕ ಕಾದಂಬರಿಕಾರನ ನೈಜಕರ್ತವ್ಯ. ವಿಮರ್ಶಕರು ಚಾರಿತ್ರಿಕ ಲೋಪ-ದೋಷಗಳ ಬಗ್ಗೆ ಆಕ್ಷೇಪಣೆ ಎತ್ತಿದರೂ ಆ ಕೃತಿ ಓದುಗನ ಸಹೃದಯವನ್ನು ಗೆದ್ದರಷ್ಟೇ ಸಾಕ್ಕೆನಿಸುತ್ತದೆ. ಕಾರಣ 'ಇತಿಹಾಸ' ಶಾಲಾಕಾಲೇಜುಗಳಲ್ಲಿ ಓದಲು ಸಿಗುತ್ತದೆ. ಆದರೆ ಸಾವಿಲ್ಲಿ ಇತಿಹಾಸದೊಂದಿಗೆ ಮಾನವ ಜೀವನದ ಬಹುಮುಖಗಳ ಆಡಂಬರ-ನಿರಾಡಂಬರಗಳನ್ನು ಸ್ಥೂಲವಾಗಿಯೂ ಕೂಲಂಕುಷವಾಗಿಯೂ ಅಧ್ಯಯನ ಮಾಡಬಹುದು. ಹಾಗೆಯೇ ಸಮಕಾಲೀನ ನೆಲೆಗಟ್ಟಿಗೆ ಈ ಇತಿಹಾಸ ಕೃತಿಯಿಂದಾಗಬಹುದಾದ ಅನುಕೂಲಸಿಂಧುತ್ವವನ್ನು ಕುರಿತು ಯೋಚನೆ ಮಾಡಬಹುದು.

ಕೊಡಗಿನ ಇತಿಹಾಸದ ಬಗ್ಗೆ ಅನೇಕರು ಬರೆದಿರಬಹುದು. ಆದರೆ ಕೊಡಗಿನ

ದೊಡ್ಡ ವೀರರಾಜೇಂದ್ರನ ಬಗ್ಗೆ ಯಾರೂ ಬರೆದಿಲ್ಲವೆನಿಸುತ್ತದೆ. ಈ ಕಾರಣದಿಂದ ಈ ಕಾದಂಬರಿ ಮಹತ್ವದ್ದೆನಿಸಿಕೊಳ್ಳುತ್ತದೆ. ತನ್ನ ದೇಶ, ತನ್ನ ಜನ, ತನ್ನ ತನ-ಇವೆಲ್ಲವುಗಳ ಸ್ವಾತಂತ್ರ್ಯಕ್ಕಾಗಿ ಒಬ್ಬ "ಸಣ್ಣ" ವ್ಯಕ್ತಿ ಹೇಗೆ "ಬೆಳದು" ಬಲಿಷ್ಟನಾದ, ಪರಿಸರ ನಿರ್ಮಾಣದಲ್ಲಿ ಘನಪಾತ್ರವಹಿಸಿದ ಎಂಬುದನ್ನು ಕಾದಂಬರಿ ಸ್ವಾರಸ್ಯವಾಗಿ, ತಾತ್ತ್ವಿಕವಾಗಿ, ಸಾತ್ವಿಕವಾಗಿ ವರ್ಣಿಸುತ್ತಾ ಹೋಗುತ್ತದೆ. ಕಾದಂಬರಿಯ ಸತ್ಯಾಸತ್ಯಗಳ ಬಗ್ಗೆ ಕೊಡಗಿನ ಇತಿಹಾಸ ಬಲ್ಲವರು ಹೇಳಬೇಕೇ ವಿನಾ ಸಹೃದಯಿ ಓದುಗನಲ್ಲ.

ಸಮಗ್ರ ದೃಷ್ಟಿಯಿಂದ ಈ ಕಾದಂಬರಿ ಒಂದು ಐತಿಹಾಸಿಕ ದಾಖಲೆಯಾಗಿದೆ. ಕಾಲ್ಪನಿಕ ಹೆಣಿಗೆ ಸಾಕಷ್ಟು ನಡೆದಿದ್ದರೂ ಅದರ ಅನುಭವ ಓದುಗನಿಗಾಗದೆ ಅವನೂ ಒಬ್ಬ ಐತಿಹಾಸಿಕ ಪಾತ್ರವಾಗುವ ಜಾಣ್ಮೆ ನಿರೂಪಣೆಯಲ್ಲಿದೆ. ಹುತ್ತರಿಹಬ್ಬ, ವಿವಾಹ ಸಮಾರಂಭ ಹಾಗೂ ಹುಲಿಬೇಟೆಯ ವೀರನಿಗೆ ಮಾಡುವ ಸನ್ಮಾನ-ಇತ್ಯಾದಿ ನಾಡಸಂಸ್ಕೃತಿಯ ಶಿಷ್ಟ ಆಚರಣೆಗಳು ಇಂದಿಗೂ ಅದ್ಭುತ ಅನ್ನಿಸುವಷ್ಟರ ಮಟ್ಟಿಗೆ ಕಾದಂಬರಿಕಾರರು ಪ್ರತ್ಯಕ್ಷದರ್ಶಿಗಳಂತೆ ಹಿಡಿದಿಟ್ಟಿರುವುದು ಮೆಚ್ಚಿಗೆಗೆ ಪಾತ್ರವಾಗುತ್ತದೆ.

ಇತಿಹಾಸದ ಸಾಮಾನ್ಯ ಅಂಶವಾದ "ದೇಶದ್ರೋಹಿ" ಈ ಕಾದಂಬರಿಯಲ್ಲೂ ಇದೆ. ನಾಗಪ್ಪಯ್ಯ, ಲಿಂಗರಾಜ, ಅಪ್ಪಾಜಿರಾಯರಂತಹ ಕೆಟ್ಟ ಪ್ರಭೃತಿಗಳು ವೀರರಾಜೇಂದ್ರನ "ಪ್ರಾಬಲ್ಯ"ಕ್ಕೆ ಮಸಿ ಬಳೆಯಲು ಯತ್ನಿಸಿ ತಮ್ಮ ಸೋಲನ್ನು ಕಾಣುತ್ತವೆ. ಆದರೆ ಟಿಪ್ಪುವಿನ ಕಡೆಯವರಾದ ಇಸ್ಮಾಯಿಲ್‌ಖಾನ್, ಖಾದರ್ ಖಾನ್ ಕೈಸಗಿಯುವರಂಥ ಮುಸಲ್ಮಾನರು ಕೊಡಗಿನ ಹಿರಿಯರು ತಮಗೆ ಮಾಡಿದ ಉಪಕಾರವನ್ನು ಮರೆಯದೆ ನಿಯತ್ತಿನಿಂದ ವೀರರಾಜೇಂದ್ರನಿಗೆ ಬಹಳಷ್ಟು ಸಹಾಯ ಮಾಡುತ್ತಾರೆ. ಅನ್ಯರಿಗೆ ಇರಬಹುದಾದ ಈ "ನಿಯತ್ತು" ಸ್ವಂತ ಜನರಲ್ಲಿ ಇರುವುದಿಲ್ಲ ಎಂಬುದು ಇಂದಿಗೂ ಒಂದು ಐತಿಹಾಸ ಸತ್ಯವೇ ಆಗಿದೆ.

ಇಷ್ಟೆಲ್ಲ ರಾಗ-ದ್ವೇಷಗಳೊಡನೆ ಪ್ರಬಲ ಟಿಪ್ಪುವಿನ ವಿರುದ್ಧ ಸಿಡಿದೆದ್ದು, ಬ್ರಿಟಿಷರ ಸಹಕಾರವನ್ನು ಜಾಣತನದಿಂದ ಪಡೆದು ತನ್ನ ಕೊಡಗನ್ನು ಪ್ರತಿಷ್ಠಿತವಾಗಿ ಕಟ್ಟಿದ ದೊಡ್ಡ ವೀರರಾಜೇಂದ್ರನ ಪಾತ್ರ ಕಾದಂಬರಿಯುದ್ದಕ್ಕೂ ಮೈನವಿರೇಳಿಸುತ್ತದೆ. ಶಾರದೆಯನ್ನು ಬಿಡಿಸಿ ತರುವಾಗಿನ ಆತನ ವ್ಯಕ್ತಿತ್ವವಂತೂ ಶ್ರೇಷ್ಠ ಮಟ್ಟದಾಗಿದೆ. "ವೀರ"ದಲ್ಲೆಷ್ಟೋ "ರಸಿಕತೆ"ಯಲ್ಲೂ ಅಷ್ಟೇ ಮಿಂಚುತ್ತಾನೆ, ಶ್ರೀಸಾಮಾನ್ಯರೊಂದಿಗೆ ಆತ ಬೆರೆಯುವ ಸನ್ನಿವೇಶಗಳಂತೂ ಇಂದಿಗೂ "ಆಡಳಿತಪ್ರಭು"ಗಳಿಗೆ ಮಾದರಿಯಾಗಿವೆ. ಅವನಿಗೆ ಪೂರಕವಾಗಿ ರಾಣಿ

ನಂಜಮ್ಮಾಜಿಯ ಪಾತ್ರವೂ ಅಷ್ಟೇ ಸೊಗಸಾಗಿ ಕೆತ್ತನೆಗೊಂಡಿದೆ. ತನ್ನ ನಾಡಿಗಾಗಿ, ದೊರೆಗಾಗಿ, ತನ್ನನ್ನೇ ಬಲಿಗೊಡುತ್ತಾಳೆ. ಕೆಲವು ಸಣ್ಣ ಪುಟ್ಟ ಪಾತ್ರಗಳೂ ತಮಗೆ ಸಿಕ್ಕ ಅವಕಾಶಗಳಲ್ಲಿ ತಮ್ಮ ಪರಿಧಿಯೊಳಗೆ ಮಿಂಚಿ ಮನದಲ್ಲಿ ಸ್ಥಾಯಿ ಗೊಳ್ಳುತ್ತದೆ. (ರಾಜ್ಯದ್ರೋಹಿ ಕೋಟೆ ವೀರವರ್ಮ ಹಾಗೂ ಅವನ ಸಂಚು ಉದಾಹರಣೆಗೆ).

ಏನೇ ಕಾರಣ ಆದರೂ, ಇತಿಹಾಸದ ವ್ಯಕ್ತಿಗಳ ಬಗ್ಗೆ ಬರೆಯ ಹೊರಟಿರುವ ಕಾದಂಬರಿಕಾರರು ತಾವೂ ಒಂದು "ಐತಿಹಾಸಿಕ ಪಾತ್ರ"ವಾಗಿರುವುದರಿಂದ ಪ್ರಸ್ತುತ ಕಾದಂಬರಿ ಚಾರಿತ್ರಿಕವಾಗಿ ಮಹತ್ವದ್ದೆನಿಸಿಕೊಳ್ಳುತ್ತದೆ. ಇತಿಹಾಸದ ಬಗ್ಗೆ ಅವರು ಮಾಡಿರುವ ಕಾರ್ಯ ನಿಜಕ್ಕೂ ಶ್ಲಾಘನೀಯ.



# ಮಕ್ಕಳೇ, ಇವರನ್ನು ನೀವು ಬಲ್ಲಿರಾ ?

—ಡಾ॥ ವಿ. ಕೃ. ಗೋಕಾಕ್

ಶ್ರೀಮಾನ್ ಎಸ್. ವಿ. ಶ್ರೀನಿವಾಸರಾಯರು ಇನ್ನೂ ಮೀಸಲಾಗಿ ಉಳಿದು ಕೊಂಡಿದ್ದ 'ಮಕ್ಕಳ ಸಾಹಿತಿ'ಗಳ ವಿಷಯವನ್ನು ಎತ್ತಿಕೊಂಡು ಕನ್ನಡದ ಮಕ್ಕಳ ಸಾಹಿತಿಗಳನ್ನು ಕುರಿತು ತುಂಬ ಪರಿಶ್ರಮ ಪಟ್ಟು ಮಾಹಿತಿ ಸಂಗ್ರಹಿಸಿ ಸಂಕ್ಷೇಪವಾಗಿ ಒಂದು ಪುಸ್ತಕವನ್ನು ಬರೆದಿದ್ದಾರೆ. ವಿಷಯವೂ ಹೊಸತು. ಒಬ್ಬೊಬ್ಬರ ಜನ್ಮ ತಿಥಿ ಹಾಗು ಛಾಯಾಚಿತ್ರವನ್ನು ದೊರಕಿಸುವುದೇ ಕಠಿಣವಿದ್ದಾಗ ಸಾಕಷ್ಟು ವಿವರ ಗಳನ್ನು ಸಂಗ್ರಹಿಸಿ ಕನ್ನಡಿಗರ ಅಭಿನಂದನೆಗೆ ಪಾತ್ರರಾಗಿದ್ದಾರೆ. ಹಿಂದೆಂದೂ ಇಷ್ಟು ಮೊತ್ತದಲ್ಲಿ ವಿಷಯ ಸಂಗ್ರಹೀತವಾಗಿರಲಿಲ್ಲವೆಂದು ತೋರುತ್ತದೆ.

ಮಕ್ಕಳ ಸಾಹಿತ್ಯವೆಂದರೆ ಬಹು ಸುಲಭವಾಗಿ ಮಕ್ಕಳಿಗೆ ತಿಳಿದು ಬರುವ ಕೃತಿ ಗಳೆಂದು ನಾವು ಗ್ರಹಿಸಬಾರದು. ಮಕ್ಕಳ ಸಾಹಿತ್ಯ ತನ್ನದೇ ಆದ ಮನೋಧರ್ಮ ವನ್ನು, ವಸ್ತುವನ್ನು, ಶೈಲಿಯನ್ನು ಪಡೆದಿರುತ್ತದೆ. ಇದು ಸಾಧಿಸಿದೆಯೋ ಎಂದು ನಾವು ತಿಳಿದುಕೊಳ್ಳಬೇಕು.

ಎರಡನೆಯದಾಗಿ, ಮಕ್ಕಳ ವಿಶಿಷ್ಟ ಅನುಭವದ ವ್ಯಾಪ್ತಿಯಲ್ಲಿ ನಾವು ಬಣ್ಣಿಸಿದ ವಸ್ತು ಬರುವದೋ ಹೇಗೆಂದು ನೋಡಿಕೊಳ್ಳಬೇಕು, ಗದ್ಯವೇ ಇರಲಿ, ಪದ್ಯವೇ ಇರಲಿ, ಆ ವಸ್ತು ಅವರ ಅನುಭವದ ವ್ಯಾಪ್ತಿಯೊಳಗೆ ಬಂದಿದೆಯೇ? ಎಂಬುದನ್ನು ತಿಳಿದುಕೊಳ್ಳಬೇಕು.

ಮೂರನೆಯದಾಗಿ ಮಕ್ಕಳ ಸಾಹಿತ್ಯವನ್ನು ಕುರಿತ ಸಂಕಲನ ಇಲ್ಲವೆ ಇತಿಹಾಸ ದಲ್ಲಿ, ನಾವು ಆಯ್ದ ಲೇಖಕನು ಆ ಕೃತಿಯಲ್ಲಿ ಮಕ್ಕಳ ಮೇಲಿನ ತನ್ನ ಪ್ರೀತಿ. ಹಾಗು ಅವರಿಗಾಗಿ ತನ್ನ ಪ್ರತಿಭೆಯ ಮುಖ್ಯಾಂಶವನ್ನು ಯೋಜಿಸಿದ್ದಾನೆಯೇ ? ಎಂಬುದನ್ನು ನಾವು ಶೋಧಿಸಬೇಕು. ಉಳಿದ ಸಾಹಿತ್ಯ ವಿಭಾಗಗಳಲ್ಲಿ ಆತನು ಹೆಸರು ಸಂಪಾದಿಸಿರಲಿ, ಇದರಲ್ಲಿಯೂ ಹೆಸರಿಸುವಂತೆ ಬರೆದಿದ್ದಾನೆಯೋ ನೋಡಬೇಕು.

ನಾಲ್ಕನೆಯದಾಗಿ ಮಕ್ಕಳ ಸಾಹಿತಿಗಳಾಗಿ ಬರೆದರೂ ಆ ಕೃತಿ ಪ್ರೌಢರೂ ಓದಿ ಅಭ್ಯಸಿಸಲು ಯೋಗ್ಯವಾಗಿದೆಯೆಂದು ಹೇಳುವಂತೆ ಒಂದು ಉತ್ತಮ ಕಲಾಕೃತಿ

ಯಾಗಿರುತ್ತವೆ. ಸ್ವಿಫ್ಟನ, 'ಗಲಿವರ್ಸ್ ಟ್ರಾವಲ್ಸ್' ಲ್ಯೂಯಿಸ್ ಕ್ಯಾರೆಲ್‌ನ, 'ಏಲಿಸ್ ಇನ್ ವಂಡರ್‌ಲ್ಯಾಂಡ್'ಗಳು ಇಂತಹ ಶ್ರೇಷ್ಠತೆಯನ್ನು ಗಳಿಸಿರುತ್ತವೆ. ಇಂಥ ಕೃತಿಗಳನ್ನು ಎತ್ತಿ ತೋರಿಸಿ ವಿವರಗಳನ್ನು ಕೊಡಬೇಕು. ಲೇಖಕರ ಹೆಸರುಗಳ ಬರಿ ಒಂದು ಮಾಲೆಯಾಗದೆ ಇಂತಹ ಗ್ರಂಥದಲ್ಲಿ ಮಕ್ಕಳ ಸಾಹಿತ್ಯದ ಏರಿಳಿತಗಳನ್ನು ತೋರಿಸುವ ಇತಿಹಾಸವಿರಬೇಕು.

ಇವೆಲ್ಲ ಅಂಶಗಳನ್ನು ಒಮ್ಮೆಲೇ ನಿರೀಕ್ಷಿಸುವದು ತಪ್ಪಾದೀತು. ಕ್ರಮೇಣ ಇವು ಗ್ರಂಥದ ಭಾಗವಾಗಬೇಕು.

ಲೇಖಕರು ಎಷ್ಟು ಪರಿಶ್ರಮಪಟ್ಟರೂ ಎಲ್ಲ ಮಕ್ಕಳ ಸಾಹಿತಿಗಳೂ ಇಲ್ಲಿ ಕಾಣಿಸುವುದಿಲ್ಲ. ಕರ್ನಾಟಕದ ಎಲ್ಲ ಭಾಗಗಳಿಗೆ ಹೋಗಿ ಅವರು ಇಂಥ ಮಾಹಿತಿ ಸಂಗ್ರಹಿಸಬೇಕಾದೀತು. ಉದಾಹರಣಾರ್ಥ, ಉತ್ತರ ಕರ್ನಾಟಕದ ಶಾಂತ ಕವಿ, ಕಾವ್ಯಾನಂದರ ಉಲ್ಲೇಖ ಇಲ್ಲಿಲ್ಲ. ಅವರು ಮಕ್ಕಳಿಗಾಗಿ ಕವಿತೆಗಳನ್ನು ಬರೆದರು. ಗವಿಗೆಯ್ಯ ಹೊನ್ನಾಪುರಮಠದ ಹೆಸರಿಲ್ಲ. ಅವರು 'ನೀತಿ ಮಂಜರಿ' ಎಂದು ಮಕ್ಕಳಿಗಾಗಿ ಒಂದು ಪುಸ್ತಕ ಬರೆದರು. ವಲ್ಲಭ ಮಹಾಲಿಂಗತಟ್ಟೆ ಎಂಬವರ ಉಲ್ಲೇಖವಿಲ್ಲ. ಅವರು 1924ರ ಸುಮಾರು 'ಬಾಲಮಿತ್ರ' ಎಂದು ಮಕ್ಕಳಿಗಾಗಿ ಒಂದು ಮಾಸಿಕವನ್ನು ನಡೆಯಿಸಿದ್ದರು.

ಆದರೆ ಹೊಸ ದಿಕ್ಕಿನಲ್ಲಿ ಹೆಜ್ಜೆಯಿಡುವ ಸಾಹಸ ಮಾಡಿದ ಕೃತಿ ಇದು. ಪ್ರಥಮ ಕೃತಿಯಲ್ಲಿಯೇ ಎಲ್ಲ ಮಾಹಿತಿ ಇರಬೇಕೆಂದು ಹೇಳಲಾರೆವು. ಆದ್ಯ ಕೃತಿಗೆ ಅದರ ಸೀಮಿತಗಳು ಇದ್ದೇ ಇರುತ್ತವೆ. ಅಲ್ಲದೆ ಈ ಲೇಖಕರು ತಮ್ಮ ಅಭ್ಯಾಸ ಹಾಗು ವೃತ್ತಿಯ ವಿಷಯ ವಿಜ್ಞಾನ-ತಂತ್ರಶಾಸ್ತ್ರವಾಗಿದ್ದರೂ ವಿಷಯ ಪ್ರೀತಿಯಿಂದ ಇದನ್ನು ಬರೆದವರು. ಅಂತೇ ಅಭಿನಂದನಾರ್ಹರು.



# ಹಿರಿಯರಿಗೂ ಸಲ್ಲುವ ಮಕ್ಕಳ ಪುಸ್ತಕ

—ಎಲ್. ಎಸ್. ಶೇಷಗಿರಿ ರಾವ್

ಎಸ್. ವಿ. ಶ್ರೀನಿವಾಸರಾಯರ "ಮಕ್ಕಳೇ ಇವರನ್ನು ನೀವು ಬಲ್ಲಿರಾ ?" ಒಂದು ವಿಶಿಷ್ಟ ಪ್ರಕಟಣೆ. ಮಕ್ಕಳ ಸಾಹಿತ್ಯಕ್ಕೆ ಕನ್ನಡ ನಾಡಿನಲ್ಲಿ ಏಕೋ ತಕ್ಕಷ್ಟು ಮನ್ನಣೆ ದೊರೆತಿಲ್ಲ. ದೇವುಡು ನರಸಿಂಹಶಾಸ್ತ್ರಿ, ಜಿ. ಪಿ. ರಾಜರತ್ನಂ, ಶಿವರಾಮ ಕಾರಂತ, ಕುವೆಂಪು ಇಂತಹ ಸಾಹಿತ್ಯದಿಗ್ಗಜಗಳೆನ್ನಿಸಿಕೊಳ್ಳುವವರು ಈ ಕ್ಷೇತ್ರದಲ್ಲಿ ಅಪಾರ ಕೆಲಸ ಮಾಡಿದ್ದಾರೆ ; ಚ. ವಾಸುದೇವಯ್ಯ, ಟಿ. ಎಂ. ಆರ್. ಸ್ವಾಮಿ, ಬಿ. ಶ್ರೀ. ಪಾಂಡುರಂಗರಾವ್ ಮೊದಲಾದವರು ನಮ್ಮ ಸ್ಮರಣೆಯಲ್ಲಿ ಉಳಿದಿರುವುದೇ ಮುಖ್ಯವಾಗಿ ಅವರು ಸೃಷ್ಟಿಸಿದ ಮಕ್ಕಳ ಸಾಹಿತ್ಯದಿಂದ. ಇಷ್ಟಾದರೂ ಮಕ್ಕಳ ಸಾಹಿತ್ಯಕ್ಕೆ ಸಿಕ್ಕಬೇಕಾಗಿದ್ದ ಪ್ರಾಧಾನ್ಯ ಸಿಕ್ಕಿಲ್ಲ.

ಶ್ರೀನಿವಾಸರಾಯರ ಪುಸ್ತಕವು ಕನ್ನಡದಲ್ಲಿರುವ ಮಕ್ಕಳ ಸಾಹಿತ್ಯದ ಹರಹನ್ನು ನಮ್ಮ ಕಣ್ಣ ಮುಂದೆ ನಿಲ್ಲಿಸುತ್ತದೆ. ಸುಮಾರು ಒಂದು ವರ್ಷಕಾಲ "ಪ್ರಜಾಮತ" ವಾರಪತ್ರಿಕೆಯಲ್ಲಿ ಪ್ರಕಟವಾದ ಲೇಖನಮಾಲೆ ಈಗ ಪುಸ್ತಕವಾಗಿ ಹೊರಬಂದಿದೆ. ನಲವತ್ತೊಂದು ಮಂದಿ ಲೇಖಕರನ್ನು ವಿವರವಾಗಿ ಪರಿಚಯ ಮಾಡಿ ಕೊಟ್ಟು, ಕಡೆಯ ಮೂರು ಅಧ್ಯಾಯಗಳಲ್ಲಿ ಒಂದೊಂದು ಗುಂಪಿನ ಲೇಖಕರನ್ನು ಈ ಪುಸ್ತಕ ಪರಿಚಯ ಮಾಡಿ ಕೊಡುತ್ತದೆ. ಡಾ॥ ಗೋಕಾಕರು ತಮ್ಮ ಮುನ್ನುಡಿಯಲ್ಲಿ, ಇಲ್ಲಿ ಶಾಂತಕವಿ, ಗದಿಗೆಯ್ಯ ಹೊನ್ನಾಪುರಮಠ ಮೊದಲಾದವರ ಪ್ರಸ್ತಾಪವಿಲ್ಲ ಎಂಬುದನ್ನು ಹೇಳಿದ್ದಾರೆ. ("ಆದರೆ, ಹೊಸ ದಿಕ್ಕಿನಲ್ಲಿ ಹೆಜ್ಜೆ ಇಡುವ ಸಾಹಸ ಮಾಡಿದ ಕೃತಿ" ಎಂದೂ ಹೇಳಿದ್ದಾರೆ. ಲೇಖಕರು ಔಪಚಾರಿಕವಾಗಿ ವಿಜ್ಞಾನ-ತಂತ್ರ ಜ್ಞಾನಗಳನ್ನು ಅಭ್ಯಾಸ ಮಾಡಿದವರು, ವಿಷಯದ ಪ್ರೀತಿಯಿಂದ ಈ ಪುಸ್ತಕವನ್ನು ಬರೆದರು ಎನ್ನುವ ಮಾತನ್ನು ಹೇಳಿದ್ದಾರೆ.)

ನಮ್ಮಲ್ಲಿ ಯಾವುದೇ ಕ್ಷೇತ್ರವನ್ನಾದರೂ-ಸಾಹಿತ್ಯವಾಗಲಿ, ಸಂಗೀತವಾಗಲಿ, ಚಿತ್ರಕಲೆ ಆಗಲಿ, ಪತ್ರಿಕೋದ್ಯಮ ಆಗಲಿ, ವಿಜ್ಞಾನವಾಗಲಿ–ಈಗ ನಾವು ಅಭ್ಯಾಸ ಮಾಡಲು ಹೊರಟಾಗ, ಲಭ್ಯವಿರುವ ಮಾಹಿತಿ ಎಷ್ಟು ಸ್ವಲ್ಪ ಎಂದು ವಿಷಾದವಾಗುತ್ತದೆ. ಆಯಾ ಕ್ಷೇತ್ರಗಳಲ್ಲಿ ಕೆಲಸ ಮಾಡಿದವರ ಜೀವನದ ವಿವರಗಳು, ಮುಖ್ಯ ಸಾಧನೆಗಳ ವರ್ಷ, ಅವರ ಮೇಲಾದ ಪರಿಣಾಮಗಳು ಇಂತಹ ವಿವರಗಳು ಬಹು

ಮಟ್ಟಿಗೆ ದುರ್ಲಭ (ಡಿ.ವಿ.ಜಿ. ಹುಟ್ಟಿದ ವರ್ಷ 1889 ಎಂದು ಮೈಸೂರು ವಿಶ್ವವಿದ್ಯಾನಿಲಯದ ವಿಶ್ವಕೋಶ ಹೇಳುತ್ತದೆ. 1985 ರ ಕಡೆಯ ಭಾಗದಲ್ಲಿ ನನಗೆ ಶ್ರೀ ಸಿಟ್ಟೂರು ಶ್ರೀನಿವಾಸರಾಯರಿಂದ ತಿಳಿದದ್ದು, ಡಿ.ವಿ.ಜಿ. ಒಂದು ಕಡೆ ತಾವು 1887 ರ ಮಾರ್ಚ್‌ನಲ್ಲಿ ಹುಟ್ಟಿದ್ದು ಎಂದು ಬರೆದಿಟ್ಟಿದ್ದಾರೆ ಎಂದು). ಈಗಲಾದರೂ ಇಂತಹ ಮಾಹಿತಿಯನ್ನು ಸಂಗ್ರಹಿಸಿಡುವುದು ಅಗತ್ಯ. ಹಾಗೆ ಮಾಡಿದವರು ಉಪಕಾರ ಮಾಡುತ್ತಾರೆ. ಶ್ರೀನಿವಾಸರಾಯರು ಇಷ್ಟೆಲ್ಲ ವಿವರ ಗಳನ್ನು ಸಂಗ್ರಹಿಸಬೇಕಾದರೆ ಸಾಕಷ್ಟು ಶ್ರಮ ಪಟ್ಟಿರಬೇಕು. ಪರಿಚಯಗಳು ಹ್ರಸ್ವವಾದರೂ ಸಾಕಷ್ಟು ವಿವರಗಳನ್ನು ಒಳಗೊಂಡಿವೆ. ಯೋಚಿಸಿ ಬರೆದವಾಗಿವೆ. ಪ್ರತಿ ಸಾಹಿತಿಯ ಕೃತಿಯಿಂದ ಸಣ್ಣ ಸಣ್ಣ ಭಾಗಗಳು ಉದ್ಧೃತವಾಗಿವೆ. ಇವನ್ನು ಆರಿಸುವಾಗ ಶ್ರೀನಿವಾಸರಾಯರು ಜಾಣ್ಮೆ ತೋರಿಸಿದ್ದಾರೆ. ಶಿವರಾಮ ಕಾರಂತರ "ಕಪ್ಪೆ ಭಟ್ಟರು" ಕವನದಿಂದ, "ಬಾಲಪ್ರಪಂಚ"ದಿಂದ, "ಘೋಣೆಯಪ್ಪ, ಗಿಡ್ಡಪ್ಪ" ಕತೆಯಿಂದ, ಕುವೆಂಪು ಅವರ "ಕಿಂದರ ಜೋಗಿ", "ಅಮಲನ ಕಥೆ", "ಹಾಳೂರು", "ಮೂರ್ತಿಯ ಬೆಳ್ಮಿಗಿಲು"ಗಳಿಂದ ಭಾಗಗಳನ್ನು ಆರಿಸಿದ್ದಾರೆ. ಶೈಲಿ ಸರಳವಾಗಿದೆ.

ಪುಸ್ತಕ ಮಕ್ಕಳಿಗಾಗಿ ಬರೆದದ್ದು. ಈ ವಿಸ್ತಾರವಾದ ಕ್ಷೇತ್ರದಲ್ಲಿ ಮಗು ಇಲ್ಲಿನ ಪರಿಚಯಗಳನ್ನು ಓದಿ ತನಗೆ ರುಚಿಸಿದ ಬರಹವನ್ನು ಹುಡುಕಿಕೊಂಡು ಹೋಗಬಹುದು. ಆದರೆ, ಮಕ್ಕಳಾಗಿದ್ದವರಿಗೂ ಇದರ ಪ್ರಯೋಜನವಿದೆ. ತಾವು ಮಕ್ಕಳಾಗಿದ್ದಾಗ ಕೇಳಿದ, ಓದಿದ ರಚನೆಗಳನ್ನು ಮೆಲುಕು ಹಾಕುವುದೊಂದು. ಇದಕ್ಕಿಂತ ಮುಖ್ಯವಾದದ್ದೆಂದರೆ, ಮಕ್ಕಳ ಸಾಹಿತ್ಯದ ಶಾಸ್ತ್ರೀಯ ಅಭ್ಯಾಸ. ಈ ಸಾಹಿತ್ಯ ಹೇಗೆ ಬೆಳೆದು ಬಂದಿದೆ, (ಜನಪದ ಸಾಹಿತ್ಯದಲ್ಲಿ ಇದರ ಭಾಗ ಯಾವುದು ?), ಇದರಲ್ಲಿ ಅಂತರ್ಗತವಾದ ಮೌಲ್ಯಗಳು ಯಾವುವು, ಉದ್ದೇಶಿತ ಮೌಲ್ಯಗಳು ಯಾವುವು, ಇವುಗಳಲ್ಲಿ ಹೊಂದಾಣಿಕೆ ಉಂಟೆ, ಇವು ಬೆಳೆಯುವ ಮನಸ್ಸುಗಳ ಮೇಲೆ ಹೇಗೆ ಪ್ರಭಾವ ಬೀರುತ್ತವೆ, ಮಕ್ಕಳ ಸಾಹಿತ್ಯಕ್ಕೆ ಆರಿಸಿಕೊಂಡಿ ರುವ ವಸ್ತುಗಳು ಯಾವುವು, ಭಾಷೆ ಎಂಥದು, ಮಕ್ಕಳ ಮನೋವಿಜ್ಞಾನದ ದೃಷ್ಟಿ ಯಿಂದ ಇವು ಎಷ್ಟು ಒಪ್ಪಿಗೆಯಾಗುವಂಥವು–ಇಂತಹ ಹಲವಾರು ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡು ಹಿಡಿಯಬೇಕು. ಶಿಶು ಸಾಹಿತ್ಯವನ್ನು ಮಕ್ಕಳ ಸಾಹಿತ್ಯ ದಿಂದ ಬೇರ್ಪಡಿಸಬೇಕು, ಎರಡನ್ನೂ ಪ್ರತ್ಯೇಕವಾಗಿ ಅಧ್ಯಯನ ಮಾಡಬೇಕು. ಮಕ್ಕಳ ಸಾಹಿತ್ಯದಲ್ಲಿ ವಯೋಮಾನಕ್ಕೆ ಅನುಗುಣವಾಗಿ ವಿಂಗಡನೆ ಮಾಡಬೇಕು. ನಾವು ನಮಗೆ ಸರಿಕಂಡ ಮೌಲ್ಯಗಳನ್ನು ಎಷ್ಟರ ಮಟ್ಟಿಗೆ ಮಕ್ಕಳ ಮೇಲೆ ಹೊರಿಸಿ ದ್ದೇವೆ, ಎಷ್ಟರ ಮಟ್ಟಿಗೆ ನಮ್ಮ ಬರಹ ಮಗುವಿನ ಮನಸ್ಸು ಅರಳಲು ನೆರವಾಗಿದೆ ಎಂಬುದನ್ನು ಗುರುತಿಸಬೇಕು. ಈ ಎಲ್ಲ ಕೆಲಸಕ್ಕೆ ಶ್ರೀನಿವಾಸ ರಾಯರ ಶ್ರಮ, ಭದ್ರ ಬುನಾದಿ ಹಾಕಿದೆ.



# ಮಣಿಗಳ ಗಣಿ

ಡಾ॥ ಸಿದ್ಧಯ್ಯ ಪುರಾಣಿಕ

ನನ್ನ ಗೆಳೆಯರಾದ ಶ್ರೀ ಎಸ್. ವಿ. ಶ್ರೀನಿವಾಸರಾಯರು ಮಕ್ಕಳ ಸಾಹಿತ್ಯದ ಸಂವರ್ಧನೆಗಾಗಿ ಶ್ರಮಿಸುತ್ತಿರುವ ಸಾಹಿತಿಗಳಲ್ಲಿ ಗಣ್ಯರು. ಬಹು ಭಾಷಾ ಪಾರಂಗತ ರಾದ ಇವರು ಮಕ್ಕಳಿಗಾಗಿ ಜೀವನ ಚರಿತ್ರೆ, ರೇಡಿಯೋ ನಾಟಕಗಳು, ಕಥೆ ಕಾದಂಬರಿಗಳನ್ನು ಬರೆದಿರುವುದಲ್ಲದೆ ಮಕ್ಕಳ ಸಾಹಿತ್ಯದ ಕಾರ್ಯ ಎಲ್ಲಿಯೇ ನಡೆ ದಿರಲಿ, ಅದರಲ್ಲಿ ಕೈಗೂಡಿಸಿ ಅದರ ಯಶಸ್ಸಿಗಾಗಿ ದುಡಿಯುತ್ತ ಬಂದಿದ್ದಾರೆ. ಮಕ್ಕಳ ಸಾಹಿತ್ಯ ಕ್ಷೇತ್ರ ಇವರಿಂದ ಇನ್ನೂ ಬಹಳಷ್ಟು ನಿರೀಕ್ಷಿಸುತ್ತಿದೆ.

ಕನ್ನಡದಲ್ಲಿ ಮಕ್ಕಳ ಸಾಹಿತ್ಯದ ಮೊದಲಿಗರಿಂದ ಮೊದಲು ಮಾಡಿ ಇಂದಿನ ವರೆಗೆ ಎಲ್ಲ ಪ್ರಮುಖ ಮಕ್ಕಳ ಸಾಹಿತಿಗಳ ಕೃತಿಗಳೆಲ್ಲವನ್ನೂ ಅವಲೋಕಿಸಿ, ಅವರ ಜೀವನ ಪರಿಚಯದೊಂದಿಗೆ ಅವರ ಕೃತಿ ಪರಿಚಯವನ್ನು ನಮ್ಮ ಮಕ್ಕಳಿಗೆ ಒದಗಿ ಸಲು "ಮಕ್ಕಳೇ, ಇವರನ್ನು ನೀವು ಬಲ್ಲಿರಾ ?" ಎಂಬ ಈ ಸಕಾಲಿಕ ಕೃತಿಯನ್ನು ರಚಿಸಿರುವ ಇವರಿಗೆ ಕನ್ನಡ ಮಕ್ಕಳ ಲೋಕದ ಜೊತೆಗೆ ಬಾಲ ಸಾಹಿತ್ಯ ಪ್ರಿಯ ರೆಲ್ಲರೂ ಕೃತಜ್ಞರು.

ಬಾಲ ಸಾಹಿತ್ಯಾಸಕ್ತರ ಕಣ್ಣು ತೆರೆಸಬಲ್ಲ ಕೃತಿಯಿದು. ಎಂಥೆಂಥ ವಾಗ್ದೇವಿಯ ವರಪುತ್ರರು ನಮ್ಮ ಮಕ್ಕಳನ್ನು ಮರೆಯದೆ, ಅವರಿಗಾಗಿ ಮುತ್ತು ರತ್ನಗಳಂಥ ಕವಿತೆ, ಕಥೆ, ನಾಟಕಗಳನ್ನು ಬರೆದು ಹೋಗಿದ್ದಾರೆ. ಈಗಲೂ ಬರೆಯುತ್ತಿದ್ದಾರೆ; ಅವರೆಲ್ಲರ ಸಮೀಚೀನವಾದ ಪರಿಚಯ ಸುಕುಮಾರ ಶೈಲಿಯಲ್ಲಿ ಈ ಕೃತಿಯಲ್ಲಿ ಬಂದಿದೆ. ನಮ್ಮ ಮಕ್ಕಳಿಗೆ ಕಲ್ಲು ಸಕ್ಕರೆ ಈ ರಸಿವತ್ಪರಿಚಯಗಳು.

ಇಲ್ಲಿ ಉಲ್ಲೇಖಿತವಾಗಿರುವ ಮಕ್ಕಳ ಸಾಹಿತಿಗಳಲ್ಲಿ ಕೆಲವರ ಪರಿಚಯ ನನಗೇ ಇರಲಿಲ್ಲ. ಗೆಳೆಯರಾದ, ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಹಳೆಯರಾದ ಶ್ರೀ ಬಿ. ಶ್ರೀ ಪಾಂಡುರಂಗರಾಯರು ಬರೆದಿರುವ, ಇನ್ನೂ ಅಚ್ಚಾಗದ-ಆದರೆ ಅಚ್ಚಾಗಲೇಬೇಕಾದ -ಕನ್ನಡ ಬಾಲಸಾಹಿತ್ಯ ಚರಿತ್ರೆಯನ್ನೋದಿ, ಮೈಸೂರು ವಿಶ್ವವಿದ್ಯಾಲಯವು ಮಕ್ಕಳ ವರ್ಷದ ಸವಿನೆನಪಿಗಾಗಿ ಪ್ರಕಟಿಸಿರುವ ಆಕರ ಗ್ರಂಥವನ್ನೋದಿ ಕನ್ನಡ

ಮಕ್ಕಳ ಸಾಹಿತಿಗಳ ಬಗ್ಗೆ ಅಷ್ಟಿಷ್ಟು ತಿಳಿದುಕೊಂಡಿದ್ದೇನಾದರೂ ಇಲ್ಲಿ ಬಂದಿರುವ ಕೆಲವು ಸಾಹಿತಿಗಳ ಬಗ್ಗೆ ನಾನೋದಿದುದು ಇದೇ ಮೊದಲು. ಈ ಬಗ್ಗೆ ಓದದೇ ಇರುವವರಿಗಂತೂ ಇದೊಂದು ಮಣಗಳ ಗಣಿ.

"ಸಾಹಿತಿಗಳ ಮಹಾಪೂರ" ಎಂಬ ಪ್ರಕರಣವಂತೂ ಅನೇಕ ಉದಿತೋದಿತ ಮಕ್ಕಳ ಸಾಹಿತಿಗಳ ಕಿರು ಪರಿಚಯಗಳನ್ನೊಳಗೊಂಡು ಆಸಕ್ತರಿಗೆ ಹೆಚ್ಚಿನ ಓದಿನ ಆಹ್ವಾನ ನೀಡುತ್ತಲಿದೆ. ಲೇಖಕರು ಮಕ್ಕಳ ಸಾಹಿತ್ಯವನ್ನು ಸಂಪಾದಿಸಿರುವ ಸಾಹಿತಿಗಳನ್ನು, ಮಕ್ಕಳ ಸಾಹಿತ್ಯವನ್ನು ಪ್ರಕಟಿಸುವ ಪತ್ರಿಕೆಗಳನ್ನೂ, ಪ್ರಕಾಶಕರನ್ನೂ ಮರೆತಿಲ್ಲ. ಅವರ ಬಗ್ಗೆ ಸಾಕಷ್ಟು ಮಾಹಿತಿಯನ್ನು ಒದಗಿಸಿದ್ದಾರೆ. ಆದರೆ ಒಂದೇ ವಿಷಾದನೀಯ ಅಂಶವೆಂದರೆ ಈ ಕೃತಿಯನ್ನು ಇನ್ನೂ ಒಳ್ಳೆಯ ಕಾಗದದಲ್ಲಿ, ಒಳ್ಳೆಯ ಚಿತ್ರಗಳೊಡನೆ ಪ್ರಕಟಿಸಲು ಅವರಿಗೆ ಸಂಪನ್ಮೂಲಗಳು ಸಾಲದೆ ಹೋಗಿರುವುದು. ಈ ಕೃತಿ ಬೇಗ ಮಾರಾಟವಾಗಿ, ಅದರಿಂದ ಬರುವ ಹಣದಿಂದ ಇವರ ಮುಂದಿನ ಬಾಲ ಸಾಹಿತ್ಯ ಕೃತಿಗಳು ಅಂದವಾಗಿ ಅಚ್ಚುಗೊಂಡು ಕನ್ನಡ ಮಕ್ಕಳ ಬುದ್ಧಿ ಭಾವಗಳನ್ನು ಅರಳಿಸಲೆಂದು ಹಾರೈಸುತ್ತೇನೆ.



# ಕನ್ನಡ ಸಾಹಿತಿ ದರ್ಶನ–ದಶಕದ ಸಾಧನೆ

ಎಲ್. ಎಸ್. ಶೇಷಗಿರಿ ರಾವ್

ಶ್ರೀ ಎಸ್. ವಿ. ಶ್ರೀನಿವಾಸರಾಯರು ಈಗಾಗಲೇ ಮಕ್ಕಳಿಗಾಗಿ ಹಲವು ಪುಸ್ತಕಗಳನ್ನು ಬರೆದು ಕನ್ನಡ ಓದುಗರಿಗೆ ಪರಿಚಿತರಾಗಿದ್ದಾರೆ. ಕನ್ನಡದಲ್ಲಿ ಮಕ್ಕಳಿಗಾಗಿ ಕೃತಿಗಳನ್ನು ಬರೆದವರನ್ನೂ, ಪ್ರಕಟಿಸಿದವರನ್ನೂ ಪರಿಚಯ ಮಾಡಿ ಕೊಡುವ ಪುಸ್ತಕ 'ಮಕ್ಕಳೇ ಇವರನ್ನು ನೀವು ಬಲ್ಲಿರಾ ?' ಈಚೆಗೆ ಪ್ರಕಟ ವಾಯಿತು. ಮಕ್ಕಳಿಗಾಗಿಯೇ ಅವರು 'ಕನ್ನಡ ಸಾಹಿತಿ ದರ್ಶನ' ಪುಸ್ತಕವನ್ನು ಹೊರತಂದಿದ್ದಾರೆ.

ಒಂದು ಸಂಜೆ ತಾತ ವ್ಯಾಸರಾಯರನ್ನು ಮಕ್ಕಳು ಮುತ್ತಿಕೊಂಡು ತಮ್ಮ ಜಗಳಗಳ ವಿವರಗಳನ್ನು ವರದಿ ಮಾಡುತ್ತಾರೆ ದೊಡ್ಡವರು ಪದ್ಮಮ್ಮ, ಇವರು 'ಭೀಮ ದುರ್ಯೋಧನರ ಹಾಗೆ ಜಗಳ ಆಡುತ್ತಾರೆ' ಎನ್ನುತ್ತಾರೆ. 'ಭೀಮ ದುರ್ಯೋಧನ ಯಾರು, ಕುರುಕ್ಷೇತ್ರ ಎಲ್ಲಿದೆ' ಎಂದು ಮಕ್ಕಳು ಪ್ರಶ್ನೆ ಕೇಳುತ್ತಾರೆ. ವ್ಯಾಸಭಾರತ, ಪಂಪ ಭಾರತಗಳ ಪ್ರಸ್ತಾಪ ಬರುತ್ತದೆ. ಪಂಪ ಕನ್ನಡದ ಮೊದಲ ನೆಯ ಕವಿ ಎಂದರೆ ಅವನಿಗೆ ಮೊದಲು ಕನ್ನಡದಲ್ಲಿ ಕವಿಗಳೇ ಇರಲಿಲ್ಲವೇ ಎಂಬ ಪ್ರಶ್ನೆ ಏಳುತ್ತದೆ. ಪಂಪ, ರನ್ನ, ಕುಮಾರವ್ಯಾಸರ ಭಾರತಗಳ ವಿಷಯದಿಂದ ಮಾತು ಸಹಜವಾಗಿ ರಾಮಾಯಣದತ್ತ ಹೊರಳುತ್ತದೆ. ಅನಂತರ ಇತರ ಪುರಾಣ ಗಳು, ಭಕ್ತಿ ಕಾವ್ಯಗಳತ್ತ ಮನಸ್ಸು ಹರಿದು ಅಲ್ಲಿಂದ ಮುಂದಿನ ಸಾಹಿತ್ಯದ ಮಾತು ಬಂದು ಸಮಕಾಲೀನ ಸಾಹಿತ್ಯದವರೆಗೆ ಕಥನ ಮುಂದುವರಿಯುತ್ತದೆ.

ಆದರೆ ಪುಸ್ತಕ ಕನ್ನಡ ಸಾಹಿತ್ಯ ದರ್ಶನವಲ್ಲ, ಕನ್ನಡ ಸಾಹಿತಿ ದರ್ಶನ. ತಾತ ಮೊಮ್ಮಕ್ಕಳ ಸಂಭಾಷಣೆಯ ಚೌಕಟ್ಟಿನಲ್ಲಿ ಶ್ರೀನಿವಾಸರಾಯರು ಕನ್ನಡ ಸಾಹಿತಿಗಳ ವಿಷಯವನ್ನು ತಿಳಿಸಿಕೊಡುತ್ತಾರೆ. ಪ್ರಾಸಂಗಿಕವಾಗಿ ಪ್ರತಿ ಸಾಹಿತಿಯ ಕೃತಿಗಳನ್ನು ಹೆಸರಿಸುತ್ತಾರೆ. 'ಮೇಜರ್' ಅಥವಾ ಮಹಾಕೃತಿಯಾದರೆ ಅದರ ವಿಷಯವನ್ನು ತಿಳಿಸಿಕೊಡುತ್ತಾರೆ. ಇದೆಲ್ಲ ಮಕ್ಕಳ ದೃಷ್ಟಿಯಿಂದ ನಿರೂಪಿತವಾಗುವುದರಿಂದ ಸೂಕ್ಷ್ಮವಾದ ಸಾಹಿತ್ಯ ವಿಮರ್ಶೆ, ಕೃತಿಯ ಮೌಲ್ಯ ಮಾಪನ ಇವನ್ನು ನಿರೀಕ್ಷಿಸು ವಂತಿಲ್ಲ. ಆದರೆ ಕೃತಿಗೆ ನಿರೂಪಣೆಯಲ್ಲಿ ಕೊಟ್ಟ ಪ್ರಾಮುಖ್ಯತೆಯೇ ಅದರ

ಮಹತ್ವವನ್ನು ಮಕ್ಕಳ ಮನಸ್ಸಿನಲ್ಲಿ ಮೂಡಿಸುತ್ತದೆ. ಉದಾಹರಣೆಗೆ ಮಕ್ಕಳಿಗೆ ಪಂಪಭಾರತದ ಪರಿಚಯ ಸಾಕಷ್ಟು ವಿಸ್ತಾರವಾಗಿ ಆಗುತ್ತದೆ. ಅರ್ಜುನ ಅವನ ಕೃತಿಯ ನಾಯಕ ಎಂದು ತಿಳಿಯುತ್ತದೆ. ಪಂಪ ಮಾಡಿಕೊಂಡ ಬದಲಾವಣೆಗಳ ಪರಿಚಯವಾಗುತ್ತದೆ. "ಜಲದೊಳ್ ದುರ್ಯೋಧನಂ" ಮತ್ತು "ಜಾಗದ ಭೋಗದಕ್ಕರದ ಗೇಯದ" ಎರಡು ಪದ್ಯಗಳು ಕಿವಿಗೆ ಬೀಳುತ್ತವೆ. ಮುದ್ದಣ-ಮನೋರಮೆಯರ ಸಂಭಾಷಣೆ ಕಿವಿಗೆ ಬೀಳುತ್ತದೆ. ಕುವೆಂಪು ಅವರ "ಶ್ರೀ ರಾಮಾಯಣ ದರ್ಶನಂ" ಮಹಾಕಾವ್ಯಕ್ಕೆ 2 ಪುಟ ದೊರೆತಿದೆ. ಪ್ರಾರಂಭದ ಪಂಕ್ತಿಗಳನ್ನು ಉದ್ಧರಿಸಿದೆ. ಮಂಥರೆಯ ಅಂತರಂಗದ ದರ್ಶನವಾಗುತ್ತದೆ. ರಾವಣನ ವ್ಯಕ್ತಿತ್ವ ಬೆಳಗುತ್ತದೆ. ಸುಮಾರು 1500 ಜನರನ್ನು ಪರಿಚಯಿಸಲು ಪ್ರಯತ್ನಿಸಿರುವುದಾಗಿ ಲೇಖಕರು ಹೇಳಿದ್ದಾರೆ. ತರುಣ ಸಾಹಿತಿಗಳ ಪರಿಚಯವೂ ಇಲ್ಲಿ ಸೇರಿದೆ.

## ಒಂದು ದಶಕದ ಕೆಲಸ

ನನಗೇ ತಿಳಿದಂತೆ ಶ್ರೀನಿವಾಸರಾಯರು ಈ ಕೃತಿಗಾಗಿ ಹತ್ತು ವರ್ಷ ಶ್ರಮಿಸಿದರು. ಅಲ್ಲೊಂದು ಕಡೆ ಇಲ್ಲೊಂದು ಕಡೆ ವಿವರ ಸ್ವಲ್ಪ ತಪ್ಪಿರಬಹುದು. ಆದರೆ ನಮ್ಮ ನಾಡಿನಲ್ಲಿ ಖಚಿತವಾದ ಮಾಹಿತಿಯನ್ನು ಸಂಗ್ರಹಿಸುವುದರ ಶ್ರಮವನ್ನು ಅರಿತವರೆಲ್ಲ ಶ್ರೀನಿವಾಸರಾಯರ ಸಾಧನೆಯನ್ನು ಮೆಚ್ಚುತ್ತಾರೆ. ನೂರಾರು ಜನರಿಗೆ ಶ್ರೀನಿವಾಸರಾಯರು ಪತ್ರ ಬರೆದರೂ ಉತ್ತರ ಕೊಟ್ಟವರು ಕೈ ಬೆರಳುಗಳಲ್ಲಿ ಎಣಿಸಬಹುದಾದಷ್ಟು ಸಂಖ್ಯೆಯವರು. ಕನ್ನಡದ ಬರಹಗಾರರ ಕೃತಿಗಳನ್ನು ಓದಿ "ಇವರು ಯಾರು ?" ಎಂದು ಮಗು ಕೇಳುವುದಿರಲಿ, ದೊಡ್ಡವರೇ ಕೇಳಿಕೊಂಡರೂ ಎಷ್ಟೋ ಬಾರಿ ಏನೂ ತಿಳಿದಿರುವುದಿಲ್ಲ. ಇಂಗ್ಲಿಷಿನ "ಆಕ್ಸ್‌ಫರ್ಡ್ ಕಂಪ್ಯಾನಿಯನ್ ಟು ಇಂಗ್ಲಿಷ್ ಲಿಟರೆಚರ್" ನಂತಹ ಕೃತಿ ಕನ್ನಡಕ್ಕೆ ಅಗತ್ಯವಾಗಿದೆ. ಸುಮಾರು ಹದಿನೆಂಟು ವರ್ಷಗಳ ಹಿಂದೆ ಇಂತಹ ಕೃತಿಯನ್ನು ಸಿದ್ಧಗೊಳಿಸಬೇಕೆಂದು ಒಂದು ಸಾಹಿತ್ಯಸಂಸ್ಥೆಗೆ ನಾನು ಸೂಚಿಸಿದ್ದೆ. ಶ್ರೀನಿವಾಸರಾಯರು ಮಕ್ಕಳ ಮಟ್ಟಿಗೆ ಮಾಡಿದ ಈ ಕೆಲಸ ದೊಡ್ಡವರಿಗೂ ಉಪಯುಕ್ತವಾದದ್ದು.



# ಅಪರೂಪದ ಕೃತಿ

ಬಿ. ಎ. ವೈಕುಂಠರಾಜು

ನಮ್ಮಲ್ಲಿ ಸಾಹಿತ್ಯ ಚರಿತ್ರೆಗಳು ಬಂದಿವೆ. ಆದರೆ ಸಾಹಿತಿಗಳ ಪರಿಚಯವನ್ನು ಸಂಕ್ಷಿಪ್ತವಾಗಿ ನೀಡುವಂತಹ ಪರಿಚಯ ಗ್ರಂಥಗಳು ಬಂದಿರುವುದು ತೀರಾ ಕಡಿಮೆ. ಇಲ್ಲ ಎಂದರೂ ಸರಿಹೋದೀತು. ಇಂಗ್ಲಿಷ್‌ನಲ್ಲಿ ಡೈರೆಕ್ಟರಿ ಎನ್ನುವುದಕ್ಕೆ ಸಮಾನ ಅರ್ಥದಲ್ಲಿ ಪರಿಚಯ ಗ್ರಂಥ ಎಂದು ಉಪಯೋಗಿಸಿದ್ದೇನೆ. ಒಬ್ಬ ಲೇಖಕನ ವಿಷಯವನ್ನು ತಿಳಿದುಕೊಳ್ಳುವುದಕ್ಕೆ ಡೈರೆಕ್ಟರಿಗಳು ತುಂಬಾ ಅನುಕೂಲ. ಸಾಮಾನ್ಯವಾಗಿ ಕರ್ನಾಟಕದ ಎಲ್ಲ ಕಡೆಗಳಲ್ಲಿಯೂ ವಿವಿಧ ಸಂದರ್ಭಗಳಲ್ಲಿ ಲೇಖಕರು ಮತ್ತು ಕಲಾವಿದರನ್ನು ಆಹ್ವಾನಿಸಲಾಗುತ್ತದೆ. ರಾಜ್ಯೋತ್ಸವ, ಕಾಲೇಜು ವಿದ್ಯಾರ್ಥಿ ಸಂಘಗಳ ಉದ್ಘಾಟನೆ ಮತ್ತು ಮುಕ್ತಾಯ ಸಮಾರಂಭಗಳು, ವಿಚಾರಗೋಷ್ಠಿಗಳು ಮುಂತಾದುದಕ್ಕೆ ಲೇಖಕರು ಮತ್ತು ಕಲಾವಿದರು ಬೇಕೇಬೇಕಲ್ಲ. ಆದರೆ ಅನೇಕ ಸಂದರ್ಭಗಳಲ್ಲಿ ಸ್ವಾಗತ ಭಾಷಣ ಮತ್ತು ಪರಿಚಯ ಭಾಷಣಗಳನ್ನು ಮಾಡುವವರಿಗೆ ಅತಿಥಿಗಳ ಬಗೆಗೆ ಏನೂ ತಿಳಿದಿರುವುದಿಲ್ಲ. ಒಬ್ಬ ಸಾಹಿತಿಯನ್ನು ಸಭಿಕರಿಗೆ ಪರಿಚಯ ಮಾಡಿಕೊಡುವ ಹೊಣೆ ಹೊತ್ತವರು ಸರಿಯಾಗಿ ವಿಷಯ ತಿಳಿದುಕೊಳ್ಳದಿದ್ದರೆ ಹೇಗೆ ? ಆಗ ಏನೇನು ಅನಾಹುತಗಳಾಗ ಬೇಕೋ ಅವೆಲ್ಲವೂ ಆಗುತ್ತವೆ. ಯಾರದೋ ಕೃತಿಗಳನ್ನು ಮತ್ತೆ ಯಾರ ತಲೆಗೋ ಕಟ್ಟುತ್ತಾರೆ. ಯಾರಿಗೋ ಬಂದ ಪ್ರಶಸ್ತಿಗಳನ್ನು ಇನ್ನು ಯಾರಿಗೋ ಅಂಟಿಸು ತ್ತಾರೆ. ಅತಿಥಿ ಯಾವ ಕೆಲಸ ಮಾಡುತ್ತಿದ್ದಾರೆ ಎನ್ನುವುದು ಕೂಡ ಆತಿಥೇಯರಿಗೆ ತಿಳಿದಿರುವುದಿಲ್ಲ. ಉಪನ್ಯಾಸಕರನ್ನು ಪ್ರೊಫೆಸರ್ ಎಂದು ಕರೆಯುತ್ತಾರೆ. ಡಾಕ್ಟರೇಟ್ ಇಲ್ಲದವರಿಗೆ ಡಾಕ್ಟರ್ ಎಂದು ಸಂಬೋಧಿಸುತ್ತಾರೆ. ಹೀಗೆ ವೇದಿಕೆಯ ಮೇಲೆ ಕುಳಿತಿರುವ ವ್ಯಕ್ತಿ ತನಗೆ ಸಂಬಂಧಿಸಿದಂತೆ ನಡೆಯುತ್ತಿರುವ ಅನಾಹುತ ಗಳನ್ನು ನೋಡಿ ತಲೆ ತಗ್ಗಿಸಬೇಕಾಗುತ್ತದೆ. ಸುಮಾರು ನೂರಕ್ಕೆ ಎಪ್ಪತ್ತರಷ್ಟು ಸಮಾರಂಭಗಳಲ್ಲಿ ಅತಿಥಿಗಳನ್ನು ತಪ್ಪಾಗಿ ಪರಿಚಯ ಮಾಡಿಕೊಡಲಾಗುತ್ತದೆ ಎಂದರೆ ಉತ್ಪ್ರೇಕ್ಷೆಯಲ್ಲ. ತಪ್ಪು ಮಾಡಕೂಡದು ಎನ್ನುವ ಅರಿವಿರುವ ಕೆಲವರು ಅತಿಥಿಗಳು ಆ ಊರಿಗೆ ಕಾಲಿಡುತ್ತಿದ್ದಂತೆಯೇ ಅವರ ಬಳಿ ಹೋಗಿ "ನಿಮ್ಮ ವಿಷಯ ಸ್ವಲ್ಪ ಹೇಳಿ ಸಾರ್, ನಾನು ನಿಮ್ಮ ಪರಿಚಯ, ಭಾಷಣ ಮಾಡಬೇಕಾಗಿದೆ" ಎಂದು

ಕೇಳುತ್ತಾರೆ. ಇಂಥ ಪ್ರಶ್ನೆ ಎದುರಾದಾಗ ಅತಿಥಿ ಎನಿಸಿಕೊಂಡಿರುವ ವ್ಯಕ್ತಿಗೆ ಎಷ್ಟು ಮುಜುಗರವಾಗಬಹುದು ?

ಒಂದೊಂದು ಕ್ಷೇತ್ರದಲ್ಲಿ ಕೆಲಸ ಮಾಡಿದವರ, ಮಾಡುತ್ತಿರುವವರ ಬಗೆಗೆ ಡೈರಕ್ಟರಿಗಳಿದ್ದರೆ ಸಭೆ ಸಮಾರಂಭಗಳಲ್ಲಿ ಅತಿಥಿಗಳು ಎನಿಸಿಕೊಂಡವರಿಗೆ ಮುಜುಗರ ವಾಗುವುದು ತಪ್ಪುತ್ತದೆ. ಬೇರೆ ಬೇಕಾದಷ್ಟು ಸಮಯಗಳಲ್ಲಿಯೂ ಡೈರೆಕ್ಟರಿಗಳು ಕೆಲಸಕ್ಕೆ ಬರುತ್ತವೆ. ಆದರೆ ನಮ್ಮಲ್ಲಿ ಡೈರೆಕ್ಟರಿಗಳನ್ನು ಪ್ರಕಟಿಸುವ ಕೆಲಸ ಸಮರ್ಪಕವಾಗಿ ನಡೆಯುತ್ತಿಲ್ಲ. ಈಗ ಪ್ರಕಟವಾಗಿರುವ ಕೆಲವು ಡೈರೆಕ್ಟರಿಗಳೂ ಸಮರ್ಪಕವಾಗಿಲ್ಲ.

ಎಸ್. ವಿ. ಶ್ರೀನಿವಾಸರಾಯರ 'ಕನ್ನಡ ಸಾಹಿತಿ ದರ್ಶನ' ಕನ್ನಡ ಲೇಖಕರ ಬಗೆಗೆ ಸಾಕಷ್ಟು ತಿಳಿವಳಿಕೆಯನ್ನು ನೀಡುವ ಗ್ರಂಥ. ಇದನ್ನು ಡೈರಕ್ಟರಿ ಎಂದು ಹೇಳುವಂತಿಲ್ಲ. ಏಕೆಂದರೆ ಡೈರಕ್ಟರಿಯ ವ್ಯಾಪ್ತಿಗಿಂತ ಶ್ರೀನಿವಾಸರಾಯರ ಉದ್ದೇಶ ದೊಡ್ಡದು. ಒಬ್ಬ ಲೇಖಕನ ಹೆಸರು, ಹುಟ್ಟಿದ ವರ್ಷ, ತಂದೆತಾಯಿಗಳ ಹೆಸರು ಮತ್ತು ಕೃತಿಗಳ ಹೆಸರುಗಳನ್ನು ಮಾತ್ರ ನಮೂದಿಸುವುದರಲ್ಲಿ ತೃಪ್ತಿಪಟ್ಟುಕೊಳ್ಳದೆ ಲೇಖಕ ಮತ್ತು ಆತನ ಕೃತಿಗಳ ಬಗೆಗೆ ಓದುಗನಿಗೆ ಒಂದು ಅಭಿಪ್ರಾಯ ಬರುವಂತೆ ಮಾಡಿದ್ದಾರೆ. ಈ ಕೆಲಸವನ್ನು ಶ್ರದ್ಧೆಯಿಂದ ಅವರು ಸಾಧಿಸಿದ್ದಾರೆನ್ನುವುದು ಈ ಪುಸ್ತಕವನ್ನು ಓದಿದರೆ ಅರ್ಥವಾಗುತ್ತದೆ. ಒಬ್ಬ ವ್ಯಕ್ತಿ ಮಾಡಲು ಅಸಾಧ್ಯ ಎನ್ನುವ ಕೆಲಸವನ್ನು ಶ್ರೀನಿವಾಸರಾಯರು ಒಂಟಿಯಾಗಿ ಸಾಧಿಸಿರುವುದು ನಮ್ಮ ಮೆಚ್ಚುಗೆಯನ್ನು ಗಳಿಸುತ್ತದೆ.

'ಕನ್ನಡ ಸಾಹಿತಿ ದರ್ಶನ' ಪರಿಷ್ಕೃತಗೊಂಡು ಎರಡನೆಯ ಮುದ್ರಣವನ್ನು ಕಾಣಬೇಕು ಎನ್ನುವುದು ನನ್ನ ಆಸೆ. ಏಕೆಂದರೆ ಶ್ರೀನಿವಾಸರಾಯರು ದೊಡ್ಡ ಕೆಲಸ ಮಾಡಿದ್ದಾರೆ. ಆ ಕೆಲಸ ಸರಿಯಾದ ರೂಪಕ್ಕೆ ಬಂದರೆ ಅವರ ಶ್ರಮ ಸಾರ್ಥಕ ವಾಗುತ್ತದೆ. ಅವರಿಂದಲೇ ಇದರ ಪರಿಷ್ಕರಣದ ಕೆಲಸವನ್ನು ಕನ್ನಡಿಗರು ಮಾಡಿಸ ಬೇಕು. ಅದು ಸಾಧ್ಯವಾಗುತ್ತದೆಯೋ ಇಲ್ಲವೋ ? ಅದಾಗಲಿ ಬಿಡಲಿ ಶ್ರೀನಿವಾಸರಾಯರು ಇಂಥಹ ಒಳ್ಳೆಯ ಕೆಲಸ ಮಾಡಿರುವುದಕ್ಕಾಗಿ ನಾನು ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.



# "ಗೊಂಚಲು"

ಈಶ್ವರಚಂದ್ರ

ಸ್ವಾರಸ್ಯಪೂರ್ಣ ಕಥಾಸಂಕಲನ 'ಗೊಂಚಲು'ವನ್ನು ಓದಿ ಮುಗಿಸಿದೆ. ಒಳ್ಳೆಯ ಕಥೆಗಳನ್ನು ನೀಡಿದ್ದಕ್ಕೆ ಶ್ರೀನಿವಾಸರಾಯರಿಗೆ ಅಭಿನಂದನೆಗಳು.

ಮಕ್ಕಳ ಮನೋಲೋಕದ ಚಿತ್ರವನ್ನು ಆಶ್ಚರ್ಯವೆನಿಸುವಷ್ಟು ಸಹಜವಾಗಿ ಹಾಗೂ ಪರಿಣಾಮಕಾರಿಯಾಗಿ ಚಿತ್ರಿಸಿರುವ ಮೊದಲ ನಾಲ್ಕು ಕಥೆಗಳು ('ತುಮುಲ', 'ಮೂಕನೋಟ' 'ಮಾಡು ಸಿಕ್ಕದಲ್ಲಾ' ಮತ್ತು 'ನಿರೀಕ್ಷಣೆ') ಯಶಸ್ವಿಯಾಗಿವೆ. 'ಮಾಡು ಸಿಕ್ಕದಲ್ಲಾ' ಕಥೆಯಲ್ಲಿ ಸತೀಶನ ಮುಗ್ಧ ಮನಸ್ಸು ಮತ್ತು ಆಧುನಿಕ ಜೀವನದ ಕರಾಳತೆ ಜೊತೆಜೊತೆಗೇ ಓದುಗನನ್ನು ಕಲಕುತ್ತವೆ. 'ವೃತ್ತಿನೀತಿ'ಯಲ್ಲಿನ ವ್ಯಂಗ್ಯ, ಬೆಣ್ಣೆಯಲ್ಲಿ ಕೂದಲು ತೆಗೆದಷ್ಟು ನಯ. 'ತೀರ್ಪು' ಕಥೆಯಲ್ಲಿ ವಸ್ತು ಚದುರಿದಂತನಿಸುತ್ತದೆ. 'ಹರಕೆ'ಯಲ್ಲಿ ಪ್ರಾಮಾಣಿಕತೆ ಮತ್ತು ಭ್ರಷ್ಟಾಚಾರಗಳ ನಡುವಣ ಅಂತರ ನಿಚ್ಚಳವಾಗಿ ಮೂಡಿ ಬಂದಿದೆ. 'ಚಿಕಿತ್ಸೆ'ಯಲ್ಲಿ ನರ್ಸಿಂಗ್‌ಹೋಂಗಳಲ್ಲಿನ ಅಮಾನವೀಯತೆಯ ಚಿತ್ರಣ ಬಂದಿದ್ದರೂ ವಸ್ತುವಿನಲ್ಲಿ ಹೊಸತನವಿಲ್ಲ. ಕೊನೆ ಚಿರಪರಿಚಿತ. ಕಥೆಯುದ್ದಕ್ಕೂ ಬದುಕಿನ ವ್ಯಂಗ್ಯವನ್ನು ಗುರುತಿಸುತ್ತ ಹೋಗಬಹುದು. 'ಗುದ್ದಲಿ ಪೂಜೆ' ಕಥೆಯಲ್ಲಿ ಶೋಷಿತರೇ ಶೋಷಕರಾದ ಪರಿಸ್ಥಿತಿಯ ಚಿತ್ರಣವಿದೆ. ಮಧ್ಯಮ ವರ್ಗದವರ ಸಮಸ್ಯೆಗಳಿಗೆ ಇಲ್ಲಿ ಅಭಿವ್ಯಕ್ತಿ ದೊರೆತಿದೆ, 'ಆಗಂತುಕ'ದಲ್ಲಿನ ನಿರ್ಘೃಣತೆ ಹೃದಯ ಹಿಂಡು ವಂತಹದು. ಪ್ರಾಣ ಉಳಿಸಿದ ರುಕ್ಮಾಯಿಯನ್ನೇ ಸ್ವಾರ್ಥಕ್ಕಾಗಿ ಬಲಿ ತೆಗೆದುಕೊಂಡ ಆಗಂತುಕ ಆಧುನಿಕ ಪ್ರಪಂಚದ ಕರಾಳತೆಗೆ ಸಂಕೇತವಾಗುತ್ತಾನೆ. 'ನಂದಾ ದೀಪ' ತನ್ನ ಪ್ರಾದೇಶಿಕತೆಯ ಸೊಗಡಿನಿಂದ ಆಕರ್ಷಿಸುತ್ತದೆ. ಕೊಡಗಿನ ಜನಜೀವನದ ಹಿನ್ನೆಲೆ ಇಲ್ಲಿ ದಟ್ಟವಾಗಿ, ಆಶ್ಚರ್ಯ ಹುಟ್ಟಿಸುವಷ್ಟು ಅಥೆಂಟಿಕ್ಕಾಗಿ ಮೂಡಿ ಬಂದಿದೆ. 'ಧರ್ಮೋದಕ' ಸಣ್ಣ ಎಳೆಯೊಂದನ್ನು ಆಧರಿಸಿದೆ. 'ತಪ್ಪು ಯಾರದು' ಕಥೆಯಲ್ಲಿ ನೆರವು ನೀಡಲು ಹೋಗಿ ನೋವಿಗೆ ಕಾರಣವಾದ ಕರುಣ ಕಥೆ ಇದೆ. ವೈದ್ಯರ ಬೇಜವಾಬ್ದಾರಿ ನಡವಳಿಕೆಗೂ ಕಥೆ ಕನ್ನಡಿ ಹಿಡಿದಿದೆ. 'ನಿರ್ಣಯ' ಗಂಭೀರ ವಾದ ದುರಂತ ಕಥೆ. ಬದಲಾಗುತ್ತಿರುವ ಸಾಮಾಜಿಕ ಪರಿಸ್ಥಿತಿ ಜನರ ಮೇಲೆ ಬೀರುವ ಪರಿಣಾಮಗಳಲ್ಲಿ ಒಂದು ಎಸಳು ಇಲ್ಲಿ ಮೂಡಿದೆ. ಮನ ಕರಗಿಸುವ ವಸ್ತು.

ಒಟ್ಟಿನಲ್ಲಿ ಎಲ್ಲ ಕಥೆಗಳಲ್ಲೂ ನೋವೇ ಎಳೆಎಳೆಯಾಗಿ ಮಿಡಿದಿದೆ. ನಿರೂಪಣೆಯ ಶೈಲಿ, ಭಾಷೆ ಆಕರ್ಷಕವಾಗಿವೆ. ಕಥೆಗಳಿಗೆ ಆಗತ್ಯವಾದ ಓದಿಸಿ ಕೊಂಡು ಹೋಗುವ ಗುಣ ಇಲ್ಲಿ ಎದ್ದು ಕಾಣುತ್ತದೆ.

ಶ್ರೀನಿವಾಸರಾಯರಿಂದ ಹೀಗೆಯೇ ಉತ್ತಮೋತ್ತಮ ಕೃತಿಗಳು ಮೂಡಿ ಬರಲಿ ಎಂದು ಹಾರ್ದಿಕವಾಗಿ ಹಾರೈಸುತ್ತೇನೆ.





# ಮನೋಜ್ಞ ಚಿತ್ರಣ

—ರತ್ನ ಎಸ್. ರಾವ್, ಎಂ.ಎ.

ಕನ್ನಡ ನಾಡಿನಲ್ಲಿ ಜನಿಸಿ ಕಸ್ತೂರಿ ಕನ್ನಡದ ಕಂಪಿನ ಸೊಂಪನ್ನು ಲೇಖನಗಳ ಮೂಲಕ ಬಿತ್ತರಿಸಿ ಆ ಸವಿಯ ಸೊಬಗನ್ನು ಪ್ರಿಯ ಓದುಗರಿಗೆ ಉಣ ಬಡಿಸುತ್ತಿರುವ ಕನ್ನಡಮ್ಮನ ಕಲಶಪ್ರಾಯದಂತಿರುವ ಶ್ರೀಯುತ ಎಸ್. ವಿ. ಶ್ರೀನಿವಾಸ ರಾಯರ ಲೇಖನಗಳನ್ನು ಮೆಚ್ಚಿರುವ ಮುಕ್ಕೋಟಿ ಕನ್ನಡಿಗರೆಷ್ಟೋ.

ರಾಯರ ಲೇಖನಗಳಲ್ಲಿ ನನಗೆ ಮೆಚ್ಚಿಗೆಯಾದುದು ಅವರ ಸಣ್ಣ ಕಥಾ ಸಂಕಲನಗಳಾದ "ಗೊಂಚಲು" ಮತ್ತು "ಕಾಗೆಯ ಗೂಡಿನಲ್ಲಿ ಕೋಗಿಲೆ ಹಾಡಿತು" ಇವುಗಳಲ್ಲಿ ಬರುವ ಒಂದೊಂದು ಪಾತ್ರಗಳು ಸನ್ನಿವೇಶಗಳನ್ನು ಕಣ್ಣಿಗೆ ಕಟ್ಟಿದಂತೆ ಬಿತ್ತರಿಸಿದ್ದಾರೆ. ಹೆಚ್ಚಾಗಿ ಎಸ್. ವಿ. ಶ್ರೀರವರು ಮಕ್ಕಳ ಮನೋಭಾವನೆಯನ್ನರಿತು ಮುಗ್ಧತೆ, ನಿಷ್ಕಲ್ಮಷ ಮತ್ತು ನಿರ್ಮಲ ಮನಸ್ಸನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಅಷ್ಟೇ ಅಲ್ಲದೆ ನವರಸಗಳಲ್ಲೊಂದಾದ ಶೃಂಗಾರ ರಸವನ್ನು ಭಟ್ಟಿ ಇಳಿಸಿದ್ದಾರೆ ಕೂಡ. ಕಥೆಗಳನ್ನು ಓದುತ್ತಾ ಹೋದಂತೆ ಕನ್ನಡ ಸಾಹಿತ್ಯ ಭಂಡಾರವೇ ಇವರಿಗೆ ಸಿದ್ಧಿಸಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಎಸ್.ವಿ.ಶ್ರೀರವರು ನನಗೆ ಆತ್ಮೀಯ ಬಂಧುವೆಂದು ಹೇಳಿಕೊಳ್ಳಲು ನನಗೆ ಹೆಮ್ಮೆ ಎನಿಸುತ್ತದೆ. ಅದಕ್ಕಿಂತ ಹೆಚ್ಚಾಗಿ ಒಂದು ರೀತಿಯಲ್ಲಿ ನನಗೆ ಗುರುಗಳೂ ಕೂಡ. "ಕಾಗೆಯ ಗೂಡಿನಲ್ಲಿ ಕೋಗಿಲೆ ಹಾಡಿತು" ಇದರಲ್ಲಿ ಬರುವ ಪಾತ್ರಗಳೆಂದರೆ ಸುಂದರ ಪುಷ್ಪದಂತಿರುವ ಪ್ರಭ ಮತ್ತು ದುರಭಿಮಾನಿಯಾದ ಅವಳ ಇನಿಯ ಮತ್ತು ಕುಡಿಮೀಸೆಯ ಭೀಮಕಾಯ ವ್ಯಕ್ತಿತ್ವಗಳು ಸುಂದರವಾಗಿ ಮೂಡಿಬಂದಿವೆ. ಅದರಲ್ಲೂ ಹೆಣ್ಣಿಗಿರುವ ಸಹನಶೀಲತೆ ಮತ್ತು ಹೃದಯ ವೈಶಾಲ್ಯತೆಯನ್ನು ಗುರುತಿಸುತ್ತೇವೆ. ಮಧುಚಂದ್ರಕ್ಕೆಂದು ಬಂದ ಹೊಸ ಹರೆಯದ ನವಜೋಡಿ ಮನದಲ್ಲಿ ಕೋಗಿಲೆಯ ಇಂಚರವಿರಬೇಕೆ ಹೊರತು ಕಾಗೆಯ ಕೂಗಲ್ಲ ಎಂದು ಅಚ್ಚುಕಟ್ಟಾಗಿ ಜೇನು ತುಂಬಿದ ಬಟ್ಟಲಲ್ಲಿ ನೊಣವನ್ನು ಬದಿಗೆ ತೆಗೆದಿಟ್ಟಿದ್ದಾರೆ.

ಶ್ರೀರವರು 'ಅನುಮಾನಂ ಪೆದ್ದರೋಗಂ' ಎಂಬ ತೆಲುಗಿನ ಗಾದೆಯಂತೆ

ಮಾನವನ ಹೃದಯ ವೈಶಾಲ್ಯತೆ ಮತ್ತು ಸಂಕುಚಿತ ಮನೋಭಾವದ ಪರಿಚಯ ವಿತ್ತಿದ್ದಾರೆ. ಅನುಮಾನವೆಂಬ ದೊಡ್ಡ ರೋಗ ಮಧುಚಂದ್ರಕ್ಕೆಂದು ಬಂದ ಹೊಸ ದಂಪತಿಗಳ ಆದರಲ್ಲೂ ಪ್ರಿಯಕರನ ಮರ್ಕಟ ಮನದಿಂಗಿತವನ್ನರಿತ ಪ್ರೇಯಸಿ ಪರಿತಪಿಸುತ್ತಾಳೆ.

ಅಪ್ಸರೆಯಂತಿರುವ ಅವಳ ಮನದಲ್ಲಿ ಅಪಸ್ವರವನ್ನು ಹಾಡಲು ಬಂದ ಮದನ ಮೋಹನಾಂಗವನ್ನು ಪ್ರೀತಿ ಎಂಬ ಪನ್ನೀರಿನಲ್ಲಿ ಮೀಯಿಸಿ ಚೆಂದುಟಿಯ ಅಂಚಿನಿಂದ ಕಲ್ಮಶವನ್ನು ಹೊರ ತೆಗೆದು ಅವರ ಸಂತಸದ ದಿನಗಳನ್ನು ಮಧುಮಯ ವಾಗಿಸುತ್ತಾಳೆ. ಎಷ್ಟಾದರೂ ಹೆಣ್ಣು ಸಹನೆಯ ಪ್ರತೀಕವಲ್ಲವೇ, ಆದರೂ ಎಲ್ಲ ಹೆಣ್ಣಗಳನ್ನು ಆ ರೀತಿ ಕರೆಯಲು ಸ್ವಲ್ಪ ಕಷ್ಟಕರವೆಂದೂ 'ಭ್ರಮರ'ದಲ್ಲಿ ಭ್ರಮರಾಂಬೆ ಯರ ಪರಿಚಯದೊಂದಿಗೆ ಮುಗ್ಧ ಮನದ ನಳಿನಿಯನ್ನು ಬಕಪಕ್ಷಿಯ ಕೈಯಿಂದ ಬಿಡುಗಡೆ ಹೊಂದಿಸಿರುತ್ತಾರೆ. ಕಾಮಾಂಧನಾದ ಮುಕುಂದನಿಗೆ ಮಣ್ಣು ಮುಕ್ಕಿಸಿ ದ್ದರೆ ಈ ಜನ್ಮದಲ್ಲಾದರೂ ಹೆಣ್ಣಿನ ಬೆಲೆ ಗೊತ್ತಾಗುತ್ತಿತ್ತು.

ಮುಕುಂದನಿಗೆ ಇಷ್ಟೆಲ್ಲಾ ಬೆಡಗಿಯರ ಪರಿಚಯವಿದ್ದಾಗ್ಯೂ ಹೊರ ನೋಟ ಕ್ಕೊಂದು ಮದುವೆಂಬ ನಾಟಕದಲ್ಲಿ ನಳಿನಿಯ ಬಾಳನ್ನು ಬೆಳಗಿಸುವ ಬದಲು ನಸುಕಿ ಹಾಕಿದಂತ ಧೂರ್ತ ದಾನವನಾಗಿ ಕಾಣುವಂತೆ ಬೆಣ್ಣೆಯಲ್ಲಿ ಕೂದಲನ್ನು ತೆಗೆದಂತೆ ಮನೋಜ್ಞವಾಗಿ ರೂಪಿಸಿದ್ದಾರೆ. ಇಲ್ಲಿ ಬರುವ ಮೋಹನಾಂಗಿಯರಲ್ಲಿ ಗುಲಾಬಿ ಮುಕುಂದನಿಗೆ ರತಿಸುಖದ ಸಾಕಾರ ರೂಪ! ಬಯಕೆಯ ತೆರದ ಬಟ್ಟಲು! ಆ ತೃಪ್ತಿಯ ಹಿತ ಕಳ್ಳಿನಂತೆ ಕಂಡರೆ ವಸುಂಧರಬಾಳೆಯ ಪ್ರೇಮ ವ್ಯವಹಾರದಲ್ಲಿ ಮತ್ತು ಸರ್ವ ವಿಧದಲ್ಲೂ ಪೇಯಿಂಗ್ ಗೆಸ್ಟ್ ಆಗಿ ಉಳಿಯುತ್ತಾನೆ. "ಕಂತೆಗೆ ತಕ್ಕ ಬಂತೆ" ಎಂಬ ಕನ್ನಡದ ಗಾದೆಯಂತೆ ಎರಡೂ ಪಾತ್ರಗಳು ಮೂಡಿ ಬಂದಿದೆ.

ಭ್ರಮರದ ಇನ್ನೊಂದು ಪುಷ್ಪವೆಂದರೆ ಟೈಪಿಸ್ಟ್ ಪುಷ್ಪಾ ಥಾಮಸ್. ನಾಲ್ಕು ಜನರಲ್ಲಿ ಎದ್ದು ಕಾಣುವ ಸೌಂದರ್ಯವತಿ. ಮುಕುಂದನ ಮುದ್ದು ಮುಖಕ್ಕೆ ಮುಖ ಪ್ರಕ್ಷಾಳನ ಮಾಡಿದ ಮರ್ಯಾದಸ್ಥೆ. ಆದರೂ ಅಸಹಾಯಕ ಹೆಣ್ಣು. ಹುಲಿಯ ಬಾಯಲ್ಲಿ ಸಿಕ್ಕಿ ನಲುಗಿದ ಹೆಣ್ಣಾದರೆ, ಕಾಮಾಂಧನಾದ ಮುಕುಂದ ಅವಳ ಕೌಮಾರ್ಯ ವನ್ನು ಭಂಜಿಸಿ ತೇಗಿ ತೃಪ್ತನಾಗುತ್ತಾನೆ.

ಇವರುಗಳ ಪರಿಚಯವನ್ನು ಮಾಡುತ್ತಾ ಎಸ್. ವಿ. ಶ್ರೀಯವರು ಅವನ ಮನದಲ್ಲಾಗುತ್ತಿದ್ದ ಹೊಯ್ದಾಟಗಳನ್ನು ಕಣ್ಣಿಗೆ ಕಟ್ಟಿದಂತೆ ಚಿತ್ರಿಸಿದ್ದಾರೆ.

ಎಸ್.ವಿ.ಶ್ರೀರವರ ಈ ಭ್ರಮರದಲ್ಲಿ ಮನ ಮಿಡಿವ ಅಂಶವೆಂದರೆ ಮುಕುಂದನ ಪಾತ್ರ. ಪಾಪಿ ಕೊನೆಗೂ ತನ್ನ ಜೀವನವನ್ನು, ಅರ್ಥಪಸ್ಟೇ ಮಾಡಿ ಕೊಳ್ಳದ ಮೂಢನಾಗಿದ್ದಾನೆ. ಕೊನೆಗೆ ಹೆಂಡತಿ ಸತ್ತರೂ ಕನ್ನಡದ ಗಾದೆಯಂತೆ 'ಹೆಂಡತಿ ಸತ್ತ ಆರು ತಿಂಗಳಿಗೆ ಸೋಬಸ' ಎನ್ನುವಂತೆ ಅವಳ ಸಾವು ಕೂಡ ಅವನ ಜೀವನದ ಗತಿಯನ್ನು ಬದಲಿಸಲಾರದಷ್ಟು ಕಾಮುಪಶುವಾಗಿದ್ದಾನೆ. ಮುಕುಂದನ ಪಾತ್ರವನ್ನು ಪರಿಚಯಿಸಿರುವ ರೀತಿ ಬಹಳ ಚೆನ್ನಾಗಿ ಮೂಡಿ ಬಂದಿದೆ.

ಸುಂದರವಾದ ಸಂಸಾರಗಳಲ್ಲಿ ಕೆಲವು ಬಾರಿ 'ಪ್ರೇಮ ಕಲಹ'ಗಳ ಪರಿಚಯ ಬಹಳ ಚೆನ್ನಾಗಿದೆ. ಓದುತ್ತಿದ್ದರೆ ಹೇಳಿಯ ನೆನಪೇ ಬಾರದಷ್ಟು ತವಮಾಷೆ ಮತ್ತು ಗಂಡ ಹೆಂಡಿರ ಒಳ ಆಂತರ್ಯದ ಪ್ರೀತಿಯ ಬೇಗೆಯನ್ನು ಬಹಳ ಚೆನ್ನಾಗಿ ಬೆಸೆದಿದ್ದಾರೆ. ಮದುವೆಯಾದ ಮೂರು ವರ್ಷದೊಳಗೆ ಮುದ್ದಾದ ಮಗುವನ್ನು ಪಡೆದ ದಂಪತಿಯರಲ್ಲಿ ಇಂದೇಕೋ ಇರಿಸುಮುರಿಸು. ಮಡದಿಯನ್ನು ಕಂಡೊಡನೆ ಕಾತುರನಾಗಿ ಓಡಿ ಬಂದು ಬರಸೆಳೆಯುತ್ತಿದ್ದವನು ಇಂದು ಸಿಡಿಮಿಡಿಗೊಂಡಿದ್ದಾನೆ, ಕೇವಲ ಆಣೆಯ ಸಲುವಾಗಿ ಅದೂ ಹುಸಿ ಕೋಪದೊಂದಿಗೆ ಚೆಲುವಾದ ಮುದ್ದು ಮಡದಿಯೊಂದಿಗೆ ಕೋಪಗೊಂಡು ಹೊರಗೆ ಛಳಿಗಾಳಿಗೂ ಹೆದರದೆ ಹೊರಗೆ ಮಲಗುವ ಪ್ರಿಯತಮನನ್ನು ಛೇಡಿಸುವ ಲಲನಾಂಗಿಯ ಪಾತ್ರ ಚೆನ್ನಾಗಿದೆ. ಗಂಡ ಎಷ್ಟೇ ಸಿಟ್ಟಾದರೂ ಕೊನೆಗೆ ಫಟಾರ್ ... ! ಎಂದು ಕೆನ್ನೆಗೆ ಹೊಡೆದರೂ ಸಿಟ್ಟಾಗದ ಸಂಪನ್ನೆ. ಇತ್ತ ಹೆಂಡತಿಯ ನಗೆಪಾಟಲಿಗೆ ಸಿಟ್ಟಾಗಿ ಬೈದಾಗ ಪಕ್ಕದ ಮನೆಯವರು ಕೇಳಿಸಿಕೊಂಡಾರೆಂಬ ಭಯವನ್ನು ತಿಳಿ ಹೇಳುತ್ತಾಳೆ. ಯಾವುದಕ್ಕೂ ಅಂಜದ ಗಂಡನನ್ನು ಅನುಮಾನಾಸ್ಪದವಾಗಿ ಕಾಣುತ್ತಾಳೆ. ಹೊರಗೆ ಮಲಗಿದ ಪತಿರಾಯ ಹಿಂದಿನ ದಿನಗಳನ್ನೆಲ್ಲಾ ನೆನೆದು ಹಂಗಿಸುತ್ತಾನೆ. 'ಇಬ್ಬರ ಜಗಳದಲ್ಲಿ ಕೂಸು ಬಡವಾಯ್ತು' ಎಂಬಂತೆ ಪಾಪ ಮಗುವಿನ ಪಾಡು ನಗು ಬರಿಸುತ್ತದೆ. ಏನೇ ಈ ಮಹಾ ಅನ್ಯಾಯದ್ದು ಏನಂದದ್ದು ? ಏನೋ ಹೇಳ್ದೆ 'ಮೈ ಮುಟ್ಟಿದರೆ ನನ್ನಾಣೆ' ಅಂತ ಅಷ್ಟಕ್ಕೆ ಇಷ್ಟು ಕೋಪಾನಾ ? ಅಥವಾ ಚೆಲ್ಲು ಹುಡುಗಿ ಕಾಮಿನಿ, ಟೈಪಿಸ್ಟ್ ನೆನಪಿಗೆ ಬಂದು ದೇವರಿಗೆ ಹರಸಿಕೊಳ್ಳುವಾಗ ಇವಳಿಗಿರುವ ಪತಿಪ್ರೇಮ ಹೊರ ಬೀಳುತ್ತದೆ. ಬೆಳಗಾದರೂ ಜಗಳ ಕೊನೆಗೆ ಬಂದಿರಲಿಲ್ಲ. 'ಒಬ್ಬರ ಮುಖ ಅತ್ತ ಒಬ್ಬರ ಮುಖ ಇತ್ತ' ಎಂಬಂತೆ ಮಗುವಿನ ಮಧ್ಯಸ್ತಿಕೆಯಲ್ಲಿ ಊಟ ಬಿಡುವುದು ಮತ್ತು ಇಬ್ಬರಿಗೂ ತಿಳಿಯದಂತೆ ವಾಪಸ್ ಬಂದಿರುತ್ತಾರೆ. ಇಲ್ಲಿ ಗಂಡ ಹೆಂಡಿರ ಪ್ರೀತಿಯ ಬಂಧನವೇನೆಂದು ಚೆನ್ನಾಗಿ ಅರ್ಥ ಮಾಡಿಕೊಂಡ ದಂಪತಿಗಳು ಎಂದೂ ದೂರಾಗರೆಂದು ಒತ್ತಿ ಒತ್ತಿ ತಿಳಿಸಿದ್ದಾರೆ. ಮಕ್ಕಳಿಗೆ ಮನೆಯು ನಗುನಗುತ್ತಿದ್ದರೆ ಸಂತಸ

ಇಲ್ಲವೆಂದರೆ ಏನೋ ಮುಜುಗುರ. ಮಕ್ಕಳಿಗೆ ಪ್ರೀತಿಯೆಂಬ ಅಮೃತವನ್ನುಣಿಸಿ ಸಲಹಿದರೆ ಅವರು ಸತ್ಪ್ರಜೆಯಾಗಲು ಅನುಮಾನವೇ ಇಲ್ಲ. ಬರೀ ಗಂಡಹೆಂಡಿರೆಂಬ ಕಾಮುಕ ದೃಷ್ಟಿಯಿಂದ ನೋಡದೆ ಮನುಷ್ಯತ್ವದ ಸವಿ ಕಂಡು ಜೀವಿಸಿದರೆ ಜೀವನ ರಸಮಯವಾಗುತ್ತದೆ ಎಂದು ಪರಿಚಯಿಸಿದ್ದಾರೆ.

'ಗಂಡ ಹೆಂಡತಿ ಜಗಳ ಉಂಡು ಮಲಗುವವರೆಗೆ' ಎಂಬಂತೆ ಶ್ರೀರವರು ಕಲಹದಿಂದ ಇದ್ದವರನ್ನು ಉಂಡು ಮಲಗಿಸಿ ಶ್ಯಾಮಾಚಾರ್ಯರನ್ನು ಪರಿಚಯಿಸುತ್ತಾರೆ. ಪಾಪ ಇವರಿಗೆ ಹೆಂಡತಿ ಸತ್ತು ಅವಳ ವೈದೀಕದಲ್ಲಿ ನಿರತರಾಗಿದ್ದಾರೆ. ಇನ್ನೂ ವಯಸ್ಸಿನ ಆದಕ್ಕಿಂತ ಚಪಲ ಚನ್ನಿಗರಾಯರಾದ ಶ್ಯಾಮಾಚಾರ್ಯರಿಗೆ. ಕಾವೇರಮ್ಮನನ್ನು ಕಂಡು ಕಾವೇರಿದರೆ 'ಮುತ್ತೈದೆ' ಹಾಗೆ ಕುಳಿತಿದ್ದ ಮಹಾಲಕ್ಷ್ಮಮ್ಮನವರನ್ನು ಕಂಡು ಗೌರವದಿಂದ ತಲೆ ಬಾಗುತ್ತಾರೆ. ಚಂಚಲವಾದ ಮನವನ್ನು ಹತ್ತಿಕ್ಕಲಾಗದ ಆಚಾರ್ಯರು ಸೀತಾಬಾಯಿಯ ಸದೃಢ ಶರೀರವನ್ನು ಕಂಡು ತನ್ನ ಹೆಂಡತಿಯನ್ನು ನೆನಪಿಸಿಕೊಳ್ಳುತ್ತಾರೆ. ಬಚ್ಚಲು ಮನೆಗೆ ಹೋದರೂ ಪಾಪ ಆದೇ ತಾನೇ ಸ್ನಾನ ಮಾಡಿದ ಭಾಗೀರಥಮ್ಮನ ಬಿಗಿ ಮೈಯ ಕಂಡು ಮನಸ್ಸಿನ ಶಾಂತಿಯೇ ಏಕೋ ಕದಡಿದಂತೆನಿಸಿ ಪಕ್ಕದಲ್ಲಿ ಸರಿದ ಭಾಗೀರಥಮ್ಮನ ಮೇಲೆ ಹರಿದ ಕಣ್ಣು ಹೊರಗಿನ ಸೀತಾಬಾಯಿಯನ್ನು ಅರಸಿದಾಗ ಮನಸ್ಸು ಹದ್ದು ಮೀರುತ್ತಿದೆ ಎಂದು ಸಿಡಿಮಿಡಿಗೊಂಡು ಮಾರನೇ ದಿನವೇ ತೀರ್ಥಯಾತ್ರೆಗೆ ಹೊರಟರೆ ಬರೀ ಮೈಲಿಗೆ. ಒಂದು ತೊಟ್ಟು ನೀರು ಕುಡಿಯಲೂ ಮನ ಬಾರದೆ, ಹೋಟೆಲ್ ಕಡೆ ತಿರುಗುತ್ತಾರೆ. ಕುಲ ಜಾತಿ ಹನ್ನೆರಡೂ ತಿಂದು ಉಗುಳುವ ಹೋಟೆಲಿನಲ್ಲಿ ನೀರು ಕೇಳಲು ವೈದಿಕ ಪ್ರವೃತ್ತಿ ಅಡ್ಡ ಬರುತ್ತದೆ. ಪಾಪ, ಆಚಾರ್ಯರಿಗೆ ಮನಸ್ಸು ಮೈಲಿಗೆಯಾದರೂ ಹೊರ ಮೈ ಮೈಲಿಗೆಯಾಗಬಾರದು. ತಿರುಪತಿಗೆ ಹೋದ ಆಚಾರ್ಯರ ಕಣ್ಗಳಿಗೆ ಪಾಪನಾಶಿನಿಯಲ್ಲಿ ಗೋಪಿಕಾಸ್ತ್ರೀಯರ ಜಲಕ್ರೀಡೆ ! ಬೇಲೂರ ಶಿಲಾಬಾಲಿಕೆಯರು, ದೇವಕನ್ಯೆಯರ ದಿವ್ಯದರ್ಶನ. ಮತ್ತೇನಿದರೂ ಮನಸ್ಸು ತಹಬದಿಗೆ ಬಂದಾಗ ಸ್ನಾನಕ್ಕೆಂದು ಇಳಿದವರಿಗೆ ತಮ್ಮ ಹೆಂಡತಿ ನೆನಪಿಗೆ ಬರುತ್ತಾಳೆ. ಅವಳು ಇದ್ದಿದ್ದರೆ ತಿದ್ದುತ್ತಿದ್ದಳು. 22 ವರ್ಷ ಅವಳು ಕೊಡದಿದ್ದುದೇನು ? ರತಿಯ ದೇಹ ಇಲ್ಲದೆ ಇದ್ದರೂ ಸತಿ ಸುಖವನ್ನು ಕೊಟ್ಟಿರಲಿಲ್ಲವೇ ? ಎಂದು ನೆನಪಿಸಿಕೊಂಡು ಓದುಗರ ಮನದಲ್ಲಿ ಉಳಿಯುತ್ತಾರೆ.

ಆದರೂ ಆಚಾರ್ಯರ ಯಾತ್ರೆ ಅವರಂದುಕೊಂಡಂತೆ ಮನಸ್ಸಿಗೆ ಸಮಾಧಾನ ನೀಡಲಿಲ್ಲ, ದೇಹವನ್ನು ಮಣಿಸಗೊಳಿಸಿನೆಯಾ ಭಗವಂತಾ ಎಂದು ನೊಂದುಕೊಂಡು "ಇದೇ ನಿನ್ನ ಲೀಲೆ" ಎಂದು ಮರುಗುತ್ತಾರೆ.

ಎಸ್.ವಿ.ಶ್ರೀರವರ "ಕಿಸ್ಮಿ", "ಗಾಳಿಪಟ", "ನಿರೀಕ್ಷಣೆ", "ಸೋತವರು ಯಾರು", "ಥರ್ಮೋ ಗ್ರಾಫ್", "ಮನಕೆ ಜಯವಿಲ್ಲ", "ದುರಭಿಮಾನ", "ರಕ್ತ ಕಾರಂಜಿ"—ಇವುಗಳಲ್ಲಿ ಬರುವ ಒಂದು ಸನ್ನಿವೇಶಗಳು ಮತ್ತು ಪಾತ್ರಗಳು ವಿಭಿನ್ನ ರೀತಿಯಲ್ಲಿ ಮೂಡಿ ಬಂದಿವೆ. "ಕಿಸ್ಮಿ" ಇದರಲ್ಲಿ ಸ್ನೇಹಿತರಿಬ್ಬರು ಇಂಟರ್‌ವ್ಯೂಗೆ ಹೋಗಿ ಬರುವಾಗ ಅದೂ ಸರಕಾರಿ ಹಣದಲ್ಲಿ. ಡೆಲ್ಲಿಗೆ ಹೋಗಿ ಅವರುಗಳು ಪಡುವ ಅವಸ್ಥೆ ಮತ್ತು ಹಿಪ್ಪಿಗಳ ನಡುವೆ ಸಿಕ್ಕಿ ಬಳಲಿ ಬರಿಗೈ ಮಾಡಿಕೊಂಡು ಎದ್ನೋ ಬಿದ್ನೋ ಎಂದು ಊರು ಸೇರುವ ಯೋಚನೆಗಳನ್ನು ತಿಳಿಸಿ ಅರಿಯದೆ ಹೋಗುವ ಪ್ರಯಾಣಿಕರಿಗೆ ಬುದ್ಧಿ ಮಾತನ್ನು ಬಹಳ ಚೆನ್ನಾಗಿ ಹೇಳಿದ್ದಾರೆ. ಇನ್ನು "ಗಾಳಿಪಟ" ಇದರಲ್ಲಿ ಬರುವ ಪಾತ್ರವರ್ಗಗಳೆಂದರೆ ಹೊಸದಾಗಿ ಬಂದ ಆನಂದನಿಗೆ ಎಲ್ಲೆಲ್ಲೂ ಸುಂದರ ಮತ್ತು ಆನಂದಮಯವಾದರೆ ಮಾಲಿನಿ, ನಳಿನಿ, ಹೆಲನ್ ಮುಂತಾದವರಿಗೆ ಅವನನ್ನು ಪಡೆವ ಕುತೂಹಲ. ಎಲ್ಲರಿಗೂ ಗಗನ ಕುಸುಮವಾದ ಆನಂದನನ್ನು ಸೆರೆ ಹಿಡಿದವಳೆಂದರೆ ಮೇನಕ. ಒಲಿದು, ನಲಿದು ಕೈಹಿಡಿಯೆ ಕಾಯುತ್ತಿರುವ ಕಾಮಿನಿ. ಆನಂದ ಮತ್ತು ಮೇನಕೆಯರ ಮದುವೆಯ ಸಮಾಚಾರದಿಂದ ಉಳಿದವರ ಮನ ಒಂದೊಂದು ರೀತಿ ಕಿಚ್ಚೆಬ್ಬಿಸುತ್ತಿತ್ತು. ಹೆಲನ್ನಳು ಕೋಪದಿಂದ ಹೆಣ್ಣು ಹುಲಿಯೇ ಆಗಿದ್ದಳು. ಆದರೆ ಒಂದೇ ನಿಮಿಷದಲ್ಲಿ ಎಲ್ಲರನ್ನೂ ದಿಗ್ಭ್ರಮೆಗೊಳಿಸಿದ್ದೆಂದರೆ ತನ್ನ ಸಂಬಂಧಿಯೇ ಆದ ಜಯಶ್ರೀಯೊಡನೆ ವಿವಾಹದ ಪತ್ರಿಕೆ ಕಂಡೊಡನೆ ಮಹದಾಶ್ಚರ್ಯ ! ಬ್ರಹ್ಮಚಾರಿಯಾಗಂತೂ ಉಳಿಯದಿದ್ದರೂ ಮ್ಯಾನೇಜರನ ವಕ್ರದೃಷ್ಟಿ ತಾಗಿ ಕೆಲಸ ಕಳೆದುಕೊಂಡರೂ ಉಲ್ಲಸಿತನಾಗಿ ತನ್ನ ಮುಂದಿನ ಜೀವನಕ್ಕಾಗಿ ಸಿದ್ಧನಾಗುತ್ತಾನೆ. ಜಯಶ್ರೀಯ ಸನಿಹ ಸಮಾಧಾನ ತರುತ್ತದೆ.

ಮೊದಲೇ ತಿಳಿಸಿದಂತೆ ಶ್ರೀರವರು ಮಕ್ಕಳ ಕಥೆಗಳನ್ನು ಅಚ್ಚುಕಟ್ಟಾಗಿ, ರಸವತ್ತಾಗಿ, ಸ್ನೇಹ ತುಂಬಿದ ಮಕ್ಕಳ ಕಿಲಕಿಲ ನಗುವಿನಲ್ಲಿ ಮೀಯಿಸುತ್ತಾರೆ. ನಿರೀಕ್ಷಣೆಯೂ ಹಾಗೆ ಚಿಕ್ಕ ಮಕ್ಕಳ ಮನದಲ್ಲಿ ಸಾವು ನೋವುಗಳ ಅರಿವಿಲ್ಲದ ಮಕ್ಕಳ ಮುಗ್ಧ ಮನಗಳೆರಡನ್ನು ಮುದ್ದಾಗಿ ಮುಂದಿಟ್ಟಿದ್ದಾರೆ. ಅದರಲ್ಲೂ ಆನಂದನ ನಿರೀಕ್ಷಣೆ ಕರುಳು ಕಿತ್ತು ಬರಿಸುತ್ತದೆ. ಗೆಳತಿಗಾಗಿ ಕಾದ ಆನಂದ ನಿರಾಶೆಯಿಂದ ನಿರೀಕ್ಷಿಸುವುದು ಅರ್ಥಗರ್ಭಿತವಾಗಿದೆ.

"ಸೋತವರು ಯಾರು", "ಮುಟ್ಟಿದರೆ ನನ್ನಾಣೆ"—ಈ ಎರಡರಲ್ಲೂ ಮನದಿಂಗಿತವನ್ನರಿತ ದಂಪತಿಗಳ ಪ್ರೇಮ ಕಲಹವಾಗಿದೆ. 'ಸೋತವರು ಯಾರು' ಇದರಲ್ಲಿ ತವರಿನಲ್ಲಿ ತನ್ನಿನಿಯನನ್ನು ನಿರೀಕ್ಷಿಸಿ, ಕೊನೆಗೆ ಬರದೆ ಇದ್ದ ಗಂಡನನ್ನು ಕರೆಸಿಕೊಳ್ಳುವ ಬಗೆ ಬಂಗಾರದಂತಿದೆ. 'ಥರ್ಮೋಗ್ರಾಫ್' ಇದರಲ್ಲಿ ಮನ

ಹುದುಗಿಸಿ ಓದುತ್ತಿದ್ದರೆ ಶ್ರೀರವರು ನಿಜವಾಗಿಯೂ ಒಂದೊಂದು ಹಂತದಲ್ಲೂ ಪ್ರಸಿದ್ಧ ವಿಜ್ಞಾನಿಗಳೋ ಎಂಬಂತೆ ಭಾಸವಾಗುತ್ತದೆ.

ಪ್ರತಿಯೊಂದು ಕಾರ್ಯಗಳಲ್ಲೂ ಎಸ್.ವಿ.ಶ್ರೀರವರ ಅಚ್ಚುಕಟ್ಟುತನ, ಸಹೃದಯತೆ ಮತ್ತು ಸಹನಶೀಲತೆಗಳು ಗೋಚರಿಸುತ್ತವೆ. ನನಗೊಂದು ಬಾರಿ ಅವರ ಜೊತೆ ಅಂಡಮಾನ್‌ಗೆ ಹೋಗುವ ಪುಣ್ಯ ಒದಗಿತ್ತು. ಹೋಗುವಾಗ ವಿಮಾನ. ಬರುವಾಗ ಹಡಗಿನ ಯಾನ. ಆ ದಿನಗಳಲ್ಲಿ ಎಸ್.ವಿ.ಶ್ರೀರವರು 'ಹ್ಯೂಯನ್‌ತ್ಸಾಂಗ್' ಕನ್ನಡಕ್ಕೆ ಭಾಷಾಂತರಿಸುತ್ತಿದ್ದರು. ನಮಗೆಲ್ಲಾ ಹಡಗಿನ ಯಾನದಿಂದ ಸುಸ್ತಾಗಿದ್ದರೆ ಒಂದು ನಿಮಿಷವೂ ವ್ಯರ್ಥ ಮಾಡದೆ ಸ್ಥಿತಪ್ರಜ್ಞರಾಗಿ ತಮ್ಮ ಕೆಲಸದಲ್ಲಿ ನಿರತರಾಗಿರುತ್ತಿದ್ದರು. ಹಾಗೆಂದ ಮಾತ್ರಕ್ಕೆ ಅವರೇನು ರಸಿಕರಲ್ಲ ವೆಂದಲ್ಲ. ನಾವೆಲ್ಲ ಜೊತೆ ಸೇರಿದಾಗ ದಂಪತಿಗಳಿಬ್ಬರೂ ನಕ್ಕು ನಲಿಸಿ ಪ್ರವಾಸದ ಆಯಾಸವನ್ನು ಮರೆಸಿ ನಕ್ಕು ನಗಿಸುತ್ತಿದ್ದ ಆ ದಂಪತಿಗಳನ್ನು ಎಷ್ಟು ಹೊಗಳಿ ದರೂ ಸಾಲದೆಂದೇ ಹೇಳಿ ಈ ನನ್ನ ಅನಿಸಿಕೆಯೊಂದಿಗೆ ಅವರ ಆಶೀರ್ವಾದಗಳನ್ನು ಬೇಡುತ್ತೇನೆ.



# ವಾಸ್ತವಿಕ ಸುಂದರ ಚಿತ್ರಣ

—ಎ. ಪಂಕಜ

ಮೂರು ದಶಕಗಳಿಂದ ಸಾಹಿತ್ಯ ಸೇವೆ ನಡೆಸಿಕೊಂಡು ಬರುತ್ತಿರುವ ಶ್ರೀ ಎಸ್. ವಿ. ಶ್ರೀನಿವಾಸರಾಯರು ಸಾಹಿತ್ಯ ಲೋಕಕ್ಕೆ ಚಿರಪರಿಚಿತರು. ವೃತ್ತಿಯಲ್ಲಿ ಇಂಜನೀಯರ್ (ಈಗ ನಿವೃತ್ತರು) ಆದರೂ ಪ್ರವೃತ್ತಿಯಲ್ಲಿ ಸಾಹಿತಿಗಳು. ಈವರೆಗೆ ಅವರು ಕಥೆ, ಕಾದಂಬರಿ, ನಾಟಕ, ಮಕ್ಕಳ ಪುಸ್ತಕಗಳು ಎಂದು, ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ರಚಿಸಿದ್ದಾರೆ. ಅದರಲ್ಲೂ ಹೆಸರಾಂತ ಸಾಹಿತಿಗಳನ್ನು ಗುರ್ತಿಸಿ ಅವರ ವಿಚಾರಗಳನ್ನೆಲ್ಲಾ ಸಂಗ್ರಹಿಸಿ, "ಕನ್ನಡ ಸಾಹಿತಿ ದರ್ಶನ" ಎಂಬ ಬೃಹತ್ ಕೃತಿಯನ್ನು ರಚಿಸಿ, ಕನ್ನಡದ ಜನತೆಗೆ ಮಹದುಪಕಾರ ಮಾಡಿದ್ದಾರೆ.

ಇವರ ಸಾಹಿತ್ಯವನ್ನು ಅವಲೋಕಿಸಿದಾಗ, ಇದು ಎಸ್. ವಿ. ಶ್ರೀನಿವಾಸ ರಾಯರು ಬರೆದದ್ದೇ ಎಂದು ಆಶ್ಚರ್ಯ ಆಗುತ್ತೆ. ಪ್ರಶ್ನೆ ಕೇಳುವಂತಾಗುತ್ತದೆ. ಸುಲಭವಾಗಿ ಅರ್ಥ ಆಗುವಂತೆ ಸರಳ ಸುಂದರ ರಚನೆಯಲ್ಲಿ ಉತ್ತಮ ವಿಚಾರಗಳ ಸತ್ವಪೂರ್ಣ ಬರೆಹ. ಹೇಳಬೇಕು ಅನಿಸಿದ್ದನ್ನು ತಮ್ಮ ಲೇಖನಿಯ ಮೂಲಕ ನೇರವಾಗಿ, ಖಚಿತವಾಗಿ ಹೇಳುವ ಸಾಮರ್ಥ್ಯ ಎಲ್ಲವೂ ಇವರಿಗೆ ದೈವದತ್ತವಾಗಿ ಒಲಿದು ಬಂದಿದೆ ಎನ್ನುವುದರಲ್ಲಿ ಸಂಶಯವಿಲ್ಲ.

ಇಲ್ಲಿ ಅವರ ಅನೇಕ ಕೃತಿಗಳಲ್ಲಿ ಒಂದಾದ "ಗೊಂಚಲು" ಎಂಬ ಕಥಾಸಂಕಲನ ವನ್ನು ಕುರಿತು ನಾಲ್ಕು ಮಾತು ಹೇಳುವ ಬಯಕೆ ನನ್ನದು.

ಈ ಗೊಂಚಲು ವೈವಿಧ್ಯಮಯವಾದ ಕಥೆಗಳನ್ನು ಸೇರಿಸಿ ಕಟ್ಟಿದ ಮಾಲೆ. ಹದಿನಾಲ್ಕು ವಿವಿಧ ಹೂಗಳು ಇಲ್ಲಿ ಬೆರೆತಿವೆ. ಈ ಹೂಗಳು ಇಲ್ಲಿ ಕಲೆತು ಒಂದಾಗುವ ಮೊದಲೇ ಬೇರೆ ಬೇರೆ ಪ್ರಮುಖ ಪತ್ರಿಕೆಗಳಲ್ಲಿ, (ಪಕ್ಷಪತ್ರಿಕೆ, ವಾರ ಪತ್ರಿಕೆ, ಮಾಸ ಪತ್ರಿಕೆಗಳಲ್ಲಿ) ಅರಳಿ ಪ್ರಕಟಗೊಂಡಿದ್ದವು.

ಇವರ ಕಥೆಗಳನ್ನು ಓದಿದಾಗ ನಮ್ಮ ಬದುಕಿನ ಸುತ್ತ ನಡೆಯುತ್ತಿರುವ ಸಣ್ಣ

ಸಣ್ಣ ಘಟನೆಗಳನ್ನು ನಾವು ಅವಲೋಕಿಸಿದರೆ ಅದು ಒಂದೊಂದೂ ಒಂದೊಂದು ಮೇರುಕೃತಿ ಆಗಬಹುದು ಎಂದು ಅನಿಸುತ್ತದೆ. ಆದರೆ ಆ ಪರಿಸರದ ಸಮಾಜದ ಆಗುಹೋಗುಗಳನ್ನೇ ಗಮನಿಸುವ ದೃಷ್ಟಿ ನಮ್ಮದಾಗಬೇಕು. ಆಗಲೇ ಇಲ್ಲಿ ನಡೆಯುತ್ತಿರುವ ಮುಗ್ಧತೆಯು, ದೌರ್ಜನ್ಯತೆಯು, ಶೋಷಣೆಯು ವಿವಿಧ ಮುಖ ಗಳನ್ನು ನಾವು ಕಾಣಲು ಸಾಧ್ಯವಾಗುತ್ತದೆ.

ಶ್ರೀ ಶ್ರೀನಿವಾಸರಾಯರು ಮಕ್ಕಳನ್ನು ಬಹಳವಾಗಿ ಪ್ರೀತಿಸುತ್ತಾರೆ ಎಂಬ ಭಾವನೆ ಅವರ ಕಿರುಗತೆಗಳಾದ ತುಮಲ, ಮೂಕನೋಟ, ಮಾಡು ಸಿಕ್ಕದಲ್ಲಾ, ನಿರೀಕ್ಷಣೆ ಮೊದಲಾದ ಕಥೆಗಳಿಂದ ವ್ಯಕ್ತವಾಗುತ್ತದೆ. “ತುಮಲ” ಗೊಂಚಲಿನ ಮೊದಲ ಕುಸುಮ. ಇದರಲ್ಲಿ ಬಾಲ್ಯದಲ್ಲಿ ಗಂಡನನ್ನು ಕಳೆದುಕೊಂಡು, ತಾನು ದುಡಿದು ಮಗನನ್ನು ಪಾಲಿಸಿ, ಪೋಷಿಸಿ, ವಿದ್ಯಾಬುದ್ಧಿಗಳನ್ನು ಕಲಿಸಬೇಕಾದ ಹೆಣ್ಣು ಒಂದು ಕಡೆ. ಅವಳ ದುಃಖ, ಅಳಲು, ನೋವುಗಳ ಅರಿವೇ ಇಲ್ಲದ ಮುಗ್ಧ ಬಾಲಕ ಇನ್ನೊಂದು ಕಡೆ. ಒಳ್ಳೆಯ ಅಂಕಗಳನ್ನು ತೆಗೆಯದೆ ಹೋದ ಸಲುವಾಗಿ, ತಾಯಿ ಮಗುವನ್ನು ನಿಂದಿಸಿದಾಗ, ಅವನ ಮೈಮೇಲೆ ಕೈ ಎತ್ತಿದಾಗ, ಆ ಮಗುವಿಗೆ ನಿಜವಾದ ಕಾರಣ ಅರ್ಥ ಆಗುವುದಿಲ್ಲ. ಆದರೆ ತಾವಿರುವ ಬಡತನದ ಪರಿಸರದಿಂದ ಸರಿಯಬೇಕಾದರೆ, ಗೆಳೆಯ ನಂಜನಂತೆ ಎಲ್ಲಾದರೂ ಕೂಲಿ ಕೆಲಸ ಮಾಡಿ ಗಳಿಸಬೇಕು ಎಂಬ ಭಾವನೆ ಬರುತ್ತದೆ. ಹಾಗೆ ಗಳಿಸಿದ ಒಂದು ದಿನದ ಸಂಬಳ, ಬಹುದಿನಗಳ ಬಯಕೆಯನ್ನು ಪೂರೈಸಲು ಖರ್ಚಾಗಿ ಹೋಗುತ್ತೆ. ಇತರ ಹುಡುಗರು ಇವನ ಹಣವನ್ನು ಸುಲಿದು ಇವನನ್ನು ಗೇಲಿಮಾಡಿ ಹೋಗುತ್ತಾರೆ. ಆಗ ಈ ಬಾಲಕನಲ್ಲಿ ಉಳಿಯುವ ಹಣ ಕೇವಲ 10 ಪೈಸೆ. ಅದರಿಂದ ಎಂದೂ ಹೂ ಮುಡಿಯದಿದ್ದ ಅಮ್ಮನಿಗೆ ಹೂ ತೆಗೆದು ಮುಡಿಸಿ ಸಂತೋಷಪಡಿಸಬೇಕು ಎಂದು ಹೋಗುತ್ತಾನೆ, ಆದರೆ ಅದು ಅಪರಾಧವೆಂದು ತಾಯಿ ವಿಲಿವಿಲಿ ಒದ್ದಾಡುತ್ತಾಳೆ. ನಿಜವಾದ 'ತುಮುಲ'ವನ್ನು ನಾವಿಲ್ಲಿ ಕಾಣಬಹುದು. ಅಂತೆಯೇ ಇವರ ಮೂಕನೋಟ. ಬಡ ಮುಸ್ಲಿಂಹುಡುಗನು ಮೇರಿಯ ಮೇಲಿನ ಪ್ರೇಮಕ್ಕಾಗಿ ತನಗೆ ಹೊಸ ಬಟ್ಟೆ ಆಗಲಿ, ಸಿಹಿತಿನಿಸಾಗಲಿ, ಹುಟ್ಟುಹಬ್ಬವಾಗಲಿ ಬೇಕಾಗಿಲ್ಲ ಎನ್ನುವ ಮೂಕ ವೇದನೆಯನ್ನು ನಾವು ಕಾಣಬಹುದು.

ಶಾಲೆಯ ವಿದ್ಯಾರ್ಥಿ. ಶ್ರೀಮಂತರ ಮನೆಯ ಹುಡುಗ ಪ್ರತಿ ದಿನವೂ ಕಾರಿನಲ್ಲಿ ಡ್ರೈವರ್ ಜೊತೆಗೆ ಬಂದುಹೋಗುತ್ತಿದ್ದ. ಒಂದು ದಿನ ಕಾರು ಶಾಲೆಯ ಬಳಿ ಬರದೆ ಇದ್ದಾಗ ಆ ಹುಡುಗನ ಅವಸ್ಥೆ ಹೇಳತೀರದು. ತಮ್ಮ ತಮ್ಮ ಐಷಾರಾಮ ಜೀವನ ನಡೆಸುತ್ತ ಮೈಮರೆಯುತ್ತಿದ್ದ ಇವನ ತಂದೆ ತಾಯಿಗಳಿಗೆ,

ರಾತ್ರಿ ಹತ್ತು ಗಂಟೆ ಆದರೂ ಹುಡುಗ ಮನೆಗೆ ಬರದೆ ಇದ್ದರೂ ಅದರ ಅರಿವಿರಲಿಲ್ಲ. ಬಾಲಕ ದಾರಿ ತಪ್ಪಿ ಗಂಟೆಗಂಟೆಗಳ ಪರಿವೆ ಇಲ್ಲದೆ ಹೊರಗೆ ಸುತ್ತಾಡಿ ಕಡೆಗೆ ಪೋಲೀಸ್ ಪೇದೆಯೊಂದಿಗೆ ಬಂದಾಗ, ಅವನಿಗೆ ಅದು ತನ್ನ ಮನೆ ಎಂಬ ಭಾವನೆಯೇ ಉಂಟಾಗದೆ, 'ಮಾಡು ಸಿಕ್ಕದಲ್ಲಾ' ಎಂದು ಅನಿಸಿತು.

'ನಿರೀಕ್ಷಣೆ' ಮತ್ತೊಂದು ಮಕ್ಕಳ ಸ್ನೇಹ ಸಂಬಂಧ, ಅರಿವಿಲ್ಲದೆ ನಡೆದ ದುರ್ಘಟನೆ, ಇದನ್ನು ಕಾಣಬಹುದು. ಆಟಕ್ಕೆ ಖಾಲಿ ಬಾಟಲ್ ಸಿಕ್ಕಿತು ಎಂದು ಹಳೆಯದೆಂದು ಬಿಸಾಡಿದ್ದ ಫಾಲಿಡಾಲ್‌ಬಾಟಲಲ್ಲಿ ನೀರು ತುಂಬಿ, ಔಷಧಿ ಎಂದು ವೈದ್ಯ, ರೋಗಿ ಆಟದಲ್ಲಿ ವೈದ್ಯನಾಗಿ, ಗೆಳತಿ ರೋಗಿಗೆ ವಿಷ ಕುಡಿಸಿ ಆಸ್ಪತ್ರೆಗೆ ಸೇರಿಸುವಂತಹ ದುಸ್ಥಿತಿಯನ್ನು ಇಲ್ಲಿ ಕಾಣಬಹುದು.

ಮೇಲ್ಕಂಡ ಈ ಕಥೆಗಳೆಲ್ಲಾ ಮಕ್ಕಳಲ್ಲಿ ನಡೆಯುವ ಶೋಷಣೆ, ಅಚಾತುರ್ಯಗಳನ್ನು ಕುರಿತು ಹೇಳಿದ್ದಾಗಿವೆ. ಹೀಗೆ ಮೊದಲ ನಾಲ್ಕು ಕಥೆಗಳು, ಮಕ್ಕಳ ಸುತ್ತ ನಡೆಯಲಿರುವ ಘಟನೆಗಳ ಚಿತ್ರಣ ಆದರೆ ಉಳಿದ ಹತ್ತು ಕಥೆಗಳು ಸಮಾಜದ ನಡವಳಿಕೆಯ ಮೇಲೆ 'ಕ್ಷ' ಕಿರಣ ಬೀರುವಂತಹ ಉತ್ತಮ ವಸ್ತು ಉಳ್ಳದ್ದು.

"ಅತಿ ವಿನಯಂ ಧೂರ್ತಲಕ್ಷಣಂ" ಎಂಬ ನಾಣ್ನುಡಿಯನ್ನು ಪ್ರತಿಬಿಂಬಿಸುವ ಕಥೆ ವೃತ್ತಿ ನೀತಿ, ಬಾಯಲ್ಲಿ ಹೇಳುವುದು ಒಂದು, ಆದರೆ ನಡೆಯುವುದು ಮತ್ತೊಂದು ಎಂಬುದನ್ನು ಸೇಟ್ ಕಿಶನ್ ಚಂದ್ ಅವರಲ್ಲಿ ನಾವು ಕಾಣಬಹುದು.

ಸರಿಯಾದ ತೀರ್ಪು ಇದೆಯೆ ? ಹಾಗಿದ್ದರೆ ಎಲ್ಲಿ ಎಂಬುದನ್ನು ಪ್ರಶ್ನಿಸುವ ಕಿರುಗತೆ ತೀರ್ಪು. ಆದರೆ, ಮೂಢನಂಬಿಕೆಯ ಅಂಧ ವಿಶ್ವಾಸದ ನಂಬಿಕೆಯುಳ್ಳ ದೃಢ ಭಕ್ತಿಯ ಜನಕ್ಕಿಂತಲೂ, ಹಣವನ್ನು ನೀರಿನಂತೆ ಚೆಲ್ಲುವ ಶಕ್ತಿ ಇರುವ ಜನದ ಸುಖದ ಲೋಲುಪತೆ ಎಂತಹದು ಎಂಬುದನ್ನು ತೋರಿಸುವ ಕತೆ ಹರಕೆ. ಮಾನವನಿಗೆ ಅತಿ ಮುಖ್ಯವಾಗಿ ದೊರಕಬೇಕಾದ ವೈದ್ಯಕೀಯ ಸವಲತ್ತುಗಳು, ಕೇವಲ ಹಣವಿದ್ದವರಿಗೆ ಮಾತ್ರ ದೊರಕಬಲ್ಲದು. ಆದರೆ ಬಡಜನರ ಶೋಷಣೆ ಎಲ್ಲೆಲ್ಲೂ. ಹಣವಿಲ್ಲದಿದ್ದಾಗ ರೋಗಿ ಮರಣಶಯ್ಯೆಯಲ್ಲಿದ್ದರೂ, ವೈದ್ಯರಿಗೆ ಆ ರೋಗಿಯಕಡೆ ಯಾವ ಆಸಕ್ತಿ, ಗಮನಗಳು ಇಲ್ಲ. ಅದರಲ್ಲೂ ಖಾಸಗೀ ರುಗ್ಣಾಲಯಗಳಾದರಂತೂ ಹೇಳಬೇಕಾದ ಪ್ರಮೇಯವೇ ಇಲ್ಲ ಎಂಬುದನ್ನೂ ತೋರಿಸುವಂತಹ ಕತೆ ಚಿಕಿತ್ಸೆ.

ಮಧ್ಯಮವರ್ಗದ ಜನ ಬಹು ದಿನದ ಬಯಕೆಯಿಂದಾಗಿ ಕಡೆಗೂ, ತಮಗೆ ಒಂದು ಸೈಟ್ ದೊರಕಿತು ಎಂದು ಸಂತೋಷಪಟ್ಟರು. ಆ ಸ್ಥಳವನ್ನು ತಾವು

ನೋಡಿಕೊಂಡಿರುವುದಾಗಿ ಹೇಳಿದ ಮೋಸಗಾರರು, ಮನೆ ಕಟ್ಟಲೆಂದು ಸೇರಿಸಿದ ಕಬ್ಬಿಣ, ಇಟ್ಟಿಗೆಗಳನ್ನೂ ಹೊತ್ತುಕೊಂಡು ಹೋಗಿದ್ದರು. ಜೊತೆಗೆ ಆ ಸೈಟನ್ನು ಬೇರೆಯುವರಿಗೆ ಮಾರಿಬಿಟ್ಟಿದ್ದರು. ಅದು ತಮ್ಮ ಸ್ಥಳವೆಂದು ಅವರ ಬಳಿ ಜಗಳ ಕಾದಿದ್ದರ ಫಲ, ಬಡವರ ಮೇಲೆ ಕೈ ಮಾಡಿದನೆಂಬ ನೆಪ ಮಾಡಿ ಕೋರ್ಟಿಗೆ ಅಲೆಸಿ ಬೃಹತ್ ಮೊತ್ತವನ್ನು ಕಕ್ಕುವಂತೆ ಮಾಡಿದ್ದು, ಗುದ್ದಲಿಪೂಜೆಯಕತೆ.

ಅರಿಯದ ಹೆಣ್ಣನ್ನು ಮೋಸದಿಂದ ವಂಚಿಸಿ, ತನ್ನನ್ನು ರಕ್ಷಿಸಿದವಳನ್ನೇ ತನ್ನ ಕಳ್ಳ ವ್ಯಾಪಾರಕ್ಕೆ ಬಳಸಿಕೊಂಡು ಮೃತ್ಯು ಕೂಪಕ್ಕೆ ತಳ್ಳಿದ ಸುಂದರ ಕತೆ ಆಗಂತುಕ. ಹೀಗೆ ನಂದಾ ದೀಪ, ಧರ್ಮೋದಕ, ತಪ್ಪು ಯಾರದು, ನಿರ್ಣಯ ಮೊದಲಾದ ಕತೆಗಳು ಅತಿ ಸುಂದರವಾಗಿ ಮೂಡಿಬಂದಿವೆ.

ಒಟ್ಟಿನಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರು, ಚಿತ್ರಿಸಿರುವ "ಗೊಂಚಲು" ಕಥಾಸಂಕಲನ, ಸಮಾಜದಲ್ಲಿ ನಿತ್ಯ ನಡೆಯುತ್ತಿರುವ ವಾಸ್ತವಿಕ ಸಂಗತಿಗಳು, ಸಮಾಜದ ಓರೆ ಕೋರೆಗಳನ್ನೂ, ಕುಂದುಕೊರತೆಗಳನ್ನೂ ಪ್ರತಿಬಿಂಬಿಸುವ ಕನ್ನಡಿ ಇದಾಗಿದೆ.

ಅವರ ಅನೇಕ ಸಾಹಿತ್ಯಕೃತಿಗಳಲ್ಲಿ ಒಂದಾದ "ಗೊಂಚಲು" ಕಥಾಸಂಕಲನ ಕುರಿತು, ಅವರಿಗೆ ಅರ್ಪಿಸಲಿರುವ ಸೌರಭದಲ್ಲಿ ನಾಲ್ಕು ಮಾತು ಬರೆಯುವ ಸದವಕಾಶ ನನಗೆ ಬಂದಿದ್ದು ನನ್ನ ಭಾಗ್ಯ. ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರ ಸಾಹಿತ್ಯ ಸೇವೆ ಇನ್ನೂ ಅಪಾರವಾಗಿ ನಡೆಯಲಿ. ತಾಯಿ ಶಾರದೆ ಅವರನ್ನು ಅನುಗ್ರಹಿಸಲಿ.



# ಪೌರ ಪ್ರಜ್ಞೆ ಮತ್ತು ಕವಿ ರತ್ನತ್ರಯರು

— ಟಿ. ಎಸ್. ನಾಗರಾಜಶೆಟ್ಟಿ

ಕನ್ನಡ ಸಾರಸ್ವತ ಲೋಕಕ್ಕೆ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರು ಚಿರಪರಿಚಿತರು. ಸಾಹಿತ್ಯ ಕ್ಷೇತ್ರದ ಹಲವು ಪ್ರಕಾರಗಳಲ್ಲಿ ರಚನೆ ನಡೆಸಿದ್ದಾರೆ. ಪತ್ರಿಕೆ, ಪುಸ್ತಕ, ಆಕಾಶವಾಣಿ, ದೂರದರ್ಶನ ಮಾಧ್ಯಮಗಳೆಲ್ಲ ಇವರ 'ಆಡುಂಬೊಲ'ಗಳಾಗಿವೆ. ಸಂಘಸಂಸ್ಥೆಗಳಲ್ಲೂ ಸಕ್ರಿಯವಾಗಿ ಭಾಗವಹಿಸಿ, ಅವುಗಳ ಏಳಿಗೆಗಾಗಿ ಶ್ರಮಿಸಿದ್ದಾರೆ.

ಮೇಲುನೋಟಕ್ಕೆ ರಾಯರು 'ಗಂಭೀರವದನ'ರೇ. ಪರಿಚಯ, ಸಂಪರ್ಕಗಳಿಂದ ತಿಳಿದುಬರುವ ವಿಷಯ ಅವರ ಹೃದಯ 'ಸೌಜನ್ಯದ ಸದನ'ವೇ ಆಗಿದೆ ಎನ್ನುವುದು. ನಿರಾಡಂಬರ ವ್ಯಕ್ತಿ ಕೂಡ, ಆದರೆ ಶ್ರದ್ಧಾಳು.

ಮಕ್ಕಳಿಗಾಗಿ ಕೂಡ ಅವರು ಸಾಕಷ್ಟು ಕೆಲಸ ಮಾಡಿದ್ದಾರೆ. "ಮಕ್ಕಳೇ ಇವರನ್ನು ನೀವು ಬಲ್ಲಿರಾ ?" ಪುಸ್ತಕ ಮಕ್ಕಳಿಗೆ, ಮಕ್ಕಳ ಸಾಹಿತ್ಯ ಪ್ರಿಯರಿಗೆಲ್ಲ ಒಂದು ಉಪಯುಕ್ತ ಕೈಪಿಡಿಯೇ ಆಗಿದೆ. ನ್ಯಾಷನಲ್ ಬುಕ್ ಟ್ರಸ್ಟ್, ಐ.ಬಿ.ಎಚ್. ರಾಷ್ಟ್ರೋತ್ಥಾನ ಸಾಹಿತ್ಯ ಮುಂತಾದ ಪ್ರಕಾಶನ ಸಂಸ್ಥೆಗಳ ಯೋಜನೆಗಳಿಗಾಗಿ ಇವರು ಹಲವು ಪುಸ್ತಕ ಬರೆದಿದ್ದಾರೆ. ಸ್ವತಃ ಪ್ರಕಾಶಕರೂ ಹೌದು. ಸದ್ಯಕ್ಕೆ ಪರಿಶೀಲಿಸುತ್ತಿರುವ "ಪೌರಪ್ರಜ್ಞೆ" ಹಾಗೂ "ಕವಿರತ್ನತ್ರಯರು" ಕೂಡ ಅವರ ಪ್ರಕಾಶನದ ಮೂಲಕವೇ ಹೊರಬಂದ ಪುಸ್ತಕಗಳಾಗಿವೆ.

"ಪೌರಪ್ರಜ್ಞೆ" ಪುಟಾಣಿಗಳಿಗಾಗಿ ರಚಿಸಿದ ಹತ್ತು ಪುಟ್ಟ ಪುಟ್ಟ ದೃಶ್ಯಗಳನ್ನು ಒಳಗೊಂಡ ಒಂದು ರೂಪಕ. ಇದು ದೂರದರ್ಶನದಲ್ಲಿ ಈಗಾಗಲೇ ಪ್ರಸಾರ ವಾಗಿದೆ. ಮಾತೆತ್ತಿದರೆ ಸಾಕು, ನಾವು ನಮ್ಮ ಹಕ್ಕುಗಳನ್ನು ಮುಂದಿಡುತ್ತೇವೆ. 'ಇದು ನಮ್ಮ ಹಕ್ಕು' ಎಂದು ವಾದ ಮಾಡುತ್ತೇವೆ. ಇದು ಸರ್ವೇ ಸಾಮಾನ್ಯ. ಆದರೆ ಯಾರೊಬ್ಬರೂ ತಮ್ಮ 'ಕರ್ತವ್ಯ'ದ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಅದಕ್ಕೆ ನ್ಯಾಯ ಸಲ್ಲಿಸುವುದಿಲ್ಲ. ಆದರೆ ಇವೆರಡೂ (*rights and duties*) ಮುಖ್ಯವೇ. ತಂತಮ್ಮ ಕರ್ತವ್ಯಗಳನ್ನು ಕುರಿತು ಹಿರಿಯರೇ ತಿಳಿಯಬೇಕಾಗಿರುವಾಗ ಮಕ್ಕಳಿಗೆ ಅದರ ಅವಶ್ಯಕತೆ ಎಷ್ಟು ಎಂದು ಬೇರೆಯಾಗಿ ಹೇಳಬೇಕಾಗಿಲ್ಲ.

ಇದನ್ನರಿತು ಶ್ರೀನಿವಾಸರಾಯರು ಸೊಗಸಾದ ಕೆಲಸ ಮಾಡಿದ್ದಾರೆ. ಅದೇ "ಪೌರಪ್ರಜ್ಞೆ" ಪುಸ್ತಕದ ಅಗ್ಗಳಿಕೆ. ಈ ರೂಪಕದ ದೃಶ್ಯಗಳಲ್ಲಿ ಅನೇಕ ವಿಚಾರಗಳಿವೆ. ಮಕ್ಕಳಿಲ್ಲ ಅಷ್ಟೇ ಏಕೆ ಹಿರಿಯರೂ ತಿಳಿಯಬೇಕಾದ ಜೀವನ ಮೌಲ್ಯಗಳಿವೆ. ಇಂದು ಎಲ್ಲೆಡೆಗಳಲ್ಲಿ ಕಾರ್ಯ ವಿಮುಖತೆ, ಭ್ರಷ್ಟತೆ, ತಮ್ಮ ತಪ್ಪೇ ಸರಿ ಎನ್ನುವ ಹಟಮಾರಿತನ ಕಂಡುಬರುತ್ತಿವೆ. ಮುಂದಿನ ಪ್ರಜೆಗಳಾದ ಮಕ್ಕಳಿಗಾದರೂ ಇಂಥ ಪುಸ್ತಕಗಳನ್ನು ಕೈಗಿತ್ತರೆ, ಅವೆಲ್ಲ ಭವಿಷ್ಯದಲ್ಲಿ ಕಡಮೆ ಆದಾವು. ಸ್ವಲ್ಪವಾದರೂ ಮುಂದಿನ ಜನಾಂಗಕ್ಕೆ ಬದುಕಿನ ಸರಿದಾರಿಯ ಅರಿವು ದೊರೆತೀತು ಎಂದು ಅನ್ನಿಸುತ್ತದೆ.

ಕಸವನ್ನು ಎಲ್ಲೆಂದರಲ್ಲಿ. ಹೇಗೆಂದರೆ ಹಾಗೆ ಎಸೆಯಬಾರದೆನ್ನುವ ತಿಳುವಳಿಕೆ ನಮ್ಮ ಜನಕ್ಕಿಲ್ಲ. ಮೊದಲ ದೃಶ್ಯದಲ್ಲಿ ಹಲವು ಮಜಲಿನ ಮಹಡಿಯ ಮುಂದೆ ಶಿಷ್ಯರೊಡನೆ ಮಾಸ್ತರರು ನಿಂತಿರುತ್ತಾರೆ. ಮೇಲಂತಸ್ತಿನಿಂದ ಮನೆಯಾಕೆಯೊಬ್ಬಳು ಕಸವನ್ನು ಎಸೆಯುತ್ತಾಳೆ. ಅದು ಮಕ್ಕಳೆಲ್ಲರ ಮೇಲೆ ಬೀಳುತ್ತದೆ. ಪ್ರತಿಯಾಗಿ ಹುಡುಗರೂ ಆ ಕಸವನ್ನು ಮೇಲಕ್ಕೆಸೆಯಲು ತೊಡಗಿದಾಗ, ಮಾಸ್ತರರು ಹಾಗೆ ಮಾಡಬಾರದೆಂದು ನಿವಾರಿಸಿ ವಿವೇಕ ಹೇಳುತ್ತಾರೆ. ಕೋಪ ಬಂದಾಗ ಒಂದರಿಂದ ಹತ್ತರತನಕ ಎಣಿಸಬೇಕೆಂದು ತಾವೇ ಹೇಳಿದ್ದ ವಿಷಯ ನೆನಪಿಸುತ್ತಾರೆ. ಆದರೆ ಹುಡುಗರೇನು ಸಾಮಾನ್ಯರೇ ? ತಪ್ಪು ಮಾಡಿದವರಿಗೆ ಅದನ್ನ ಎತ್ತಿ ತೋರಿಸದೇ ಇದ್ರೆ ನಾವು ಇನ್ನೊಂದು ತಪ್ಪು ಮಾಡ್ತೀವಿ ಅಂತಾನೂ ನೀವೇ ಹೇಳಿದ್ರಲ್ಲಾ ಸಾರ್ ಎಂದು ಸವಾಲೆಸೆಯುತ್ತಾರೆ ! ಅದಕ್ಕೆ ಮಾಸ್ತರರು ತಪ್ಪು ತಿಳಿಯಪಡಿಸುವ ರೀತಿ ಬೇರೆ ಬೇರೆ ಅಂತ ಹೇಳಿ ಆ ಕಸವನ್ನು ತೊಟ್ಟಿಗೆ ಎಸೆದರೆ, ಅವರ ತಪ್ಪು ಅವರಿಗೇ ಅರ್ಥವಾಗುತ್ತೆ ಎಂದು ಸ್ಪಷ್ಟೀಕರಣ ನೀಡುವ ದೃಶ್ಯ ಮನಮುಟ್ಟುತ್ತದೆ. ಅವರ ನಿರೀಕ್ಷೆಯಂತೆ ಹುಡುಗರು ಕಸವನ್ನು ತೊಟ್ಟಿಗೆ ಎಸೆದ ಮೇಲೆ ಆ ಮನೆಯಾಕೆ ಬಂದು ಕ್ಷಮಾಪಣೆ ಕೇಳುತ್ತಾಳೆ.

ತಪ್ಪು ಮಾಡಿದವರಿಗೆ ಗದರದೆ, ಅವರಾಗಿಯೇ ಅದನ್ನು ತಿಳಿಯುವಂತೆ ಮಾಡಬೇಕೆನ್ನುವುದು ಆದರ್ಶ ಪ್ರಾಯ ವರ್ತನೆ. ಅವರೆಲ್ಲ ಮುಂದಕ್ಕೆ ನಡೆದಾಗ ಸ್ಕೂಟರೊಂದು ರಸ್ತೆಯಲ್ಲಿದ್ದ ಕೊಚ್ಚೆಯ ಮೇಲೆ ಹರಿದು, ಅದು ಮಾಸ್ತರರ ಬಟ್ಟೆಯ ಮೇಲೆ ಸಿಡಿಯುತ್ತದೆ. ಏಕೆಂದರೆ ಸವಾರ, ಹಿಂದೆ ಕೂತಿದ್ದ ಹೆಂಡತಿಯೊಡನೆ ಮಾತನಾಡುತ್ತ ಅಕ್ಕ-ಪಕ್ಕಗಳನ್ನು ಗಮನಿಸುತ್ತಲೇ ಇಲ್ಲ ! ಹುಡುಗರು ಪರಸ್ಪರ ಮಾತನಾಡುತ್ತ ಮಾಸ್ತರರ ಬಟ್ಟೆ ಹಾಳಾಯ್ತಲ್ಲಾ ಅನ್ನುತ್ತಾರೆ. ಮದುವೆ ಆದಮೇಲೆ ನೀನೂ ಹೀಗೇ ಮಾಡ್ತೀ ಅಂತ ರಮೇಶ ಛೇಡಿಸಿದಾಗ ಗೀತಾ, ಖಂಡಿತ

ಇಲ್ಲ ಎನ್ನುತ್ತಾಳೆ. ಆಗ ಮಾಸ್ತರರು ತಪ್ಪು ಮಾಡಿದವರನ್ನು ನೋಡಿ, ನಾವು ಅದನ್ನು ಮಾಡದಂತೆ ಕಲಿಯಬೇಕೆಂದು ನೀಡುವ ಸೂಚನೆ ಸಮಂಜಸವಾಗಿದೆ.

ಹಾಗೇಂತ ಎಲ್ಲ ಅಪರಾಧಿಗಳನ್ನೂ ಕ್ಷಮಿಸುತ್ತ ಹೋಗಲಾಗದು. ಹಣ್ಣು ಮಾರುವವನೊಬ್ಬ ಮೋಸದಿಂದ ತೂಕ ಮಾಡುತ್ತಿರುತ್ತಾನೆ, ತೂಕದಲ್ಲಿ ಮೋಸ ಮಾಡುವ ವಿಧಾನಗಳು ಚೆನ್ನಾಗಿ ಗೇಲಿ ಮಾಡುವಂತಿವೆ ! ಮಾಸ್ತರರು ಹುಡುಗ ನೊಡನೆ ಸೇರಿ ಅವನ ಮೋಸವನ್ನು ಕಂಡುಹಿಡಿಯುತ್ತಾರೆ. ಅವನು ಕಾಲಿಗೆ ಬೀಳುತ್ತೇನೆಂದರೂ ಬಿಡದೆ ಅವನನ್ನು ಪೋಲಿಸರಿಗೆ ಒಪ್ಪಿಸುತ್ತಾರೆ. ಯಾವುದು ಕ್ಷಮ್ಯ, ಯಾವುದು ಅಕ್ಷಮ್ಯ ಎನ್ನುವುದು ಮಾಸ್ತರರಿಗೆ ಚೆನ್ನಾಗಿ ಗೊತ್ತಿದೆ.

ರೈಲ್ವೆ ಪ್ಲಾಟ್‌ಫಾರಂ ಮೇಲೆ ಸುಲಿದ ಹಲಸಿನ ಹಣ್ಣಿನ ತೊಳೆ, ಹೆಚ್ಚಿದ ಪರಂಗಿ ಹೋಳು ಮಾರುತ್ತಿದ್ದವನೊಬ್ಬನಿಂದ ಖರೀದಿ ಮಾಡಲು ಮಕ್ಕಳು ಆಶಿಸುತ್ತಾರೆ. ಆದರೆ ಮಾಸ್ತರರು ಅದನ್ನು ತಪ್ಪಿಸುತ್ತಾರೆ. ವಾಂತಿ, ಭೇದಿ, ಉಗುಳು, ಕೊಳೆಗಳ ಮೇಲೆಲ್ಲ ಕುಳಿತ ನೊಣ ಅವುಗಳ ಮೇಲೂ ಕೂರುವುದರಿಂದ ತಿನ್ನಬಾರದೆಂದೂ, ತಿಂದರೆ ಕಾಯಿಲೆ ಬಂದು ಮಲಗಬೇಕಾಗುತ್ತದೆಂದೂ ಮನವರಿಕೆ ಮಾಡಿಕೊಡುವ ದೃಶ್ಯ ಅರ್ಥಪೂರ್ಣವಾಗಿದೆ. ಆಸೆಯಿಂದ ಕಣ್ಣು ಬಾಯಿ ಬಿಡುತ್ತಿದ್ದ ಮಕ್ಕಳಿಗೆ ನಿರಾಸೆ ಆಗದಂತೆ ಮಾಸ್ತರರು ಜೇಬಿನಿಂದ ಚಾಕೊಲೇಟ್ ತೆಗೆದು ಹಂಚುವುದು ಬಹಳ ಯುಕ್ತವಾಗಿದೆ. ಜನರೆಲ್ಲ ದಡ್ಡರು ಅಂತ ಹುಡುಗರು ಸಾಮಾನ್ಯೀಕರಣ ಮಾಡಿದಾಗ ಹಾಗೆ ಭಾವಿಸುವುದು ತಪ್ಪು ಎಂದು ಮಾಸ್ತರರು ತಿಳುವಳಿಕೆ ನೀಡುವುದೂ ಚೆನ್ನಾಗಿದೆ.

ಈ ಪುಸ್ತಕದಲ್ಲಿ ನಿರೂಪಿತವಾಗಿರುವ ನೀತಿ, ಆದರ್ಶಗಳನ್ನು ಗಮನಿಸಿರಿ. ಕಸ ಎಲ್ಲೆಂದರಲ್ಲಿ ಎಸೆಯಬಾರದು, ವಾಹನಗಳಿಂದ ಪಕ್ಕದಲ್ಲಿ ನಡೆಯುತ್ತಿರುವವರ ಮೇಲೆ ಕೆಸರು ಹಾರಿಸಬಾರದು, ರಸ್ತೆಯಲ್ಲಿ ಚೆಂಡಾಟ ಆಡಬಾರದು, ಮಕ್ಕಳು ಪ್ರಥಮ ಚಿಕಿತ್ಸೆಯ ಬಗ್ಗೆ ತಿಳಿಯಬೇಕು, ರಸ್ತೆ ಸಂಚಾರಿ ನಿಯಮಗಳನ್ನು ತಿಳಿದು, ಅವುಗಳನ್ನು ಪಾಲಿಸಬೇಕು, ವಾಹನಗಳಿಂದ ಆಚೆಗೆ ಉಗುಳಬಾರದು, ಸೈಕಲ್ ತುಳೀತಾ ಸಂಭಾಷಣೆ ಮಾಡುವುದು ಕೂಡದು, ನೀರನ್ನು ಪೋಲು ಮಾಡಬಾರದು, ತೂಕ, ವ್ಯಾಪಾರಗಳಲ್ಲಿ ಮೋಸ ಮಾಡುವುದಾಗಲಿ ಗ್ರಾಹಕರಿಗೆ ಅನ್ಯಾಯ ಮಾಡುವುದಾಗಲಿ ಸಲ್ಲದು.

ರೈಲ್ವೆ ಪ್ಲಾಟ್‌ಫಾರಂಗಳಲ್ಲಿ, ಬೋಗಿಗಳಲ್ಲಿ ವರ್ತಿಸಬೇಕಾದ ವಿಧಾನ, ಟಿಕೆಟ್ ಖರೀದಿಸಬೇಕಾದ ಅವಶ್ಯಕತೆ, ಇತರ ಪ್ರಯಾಣಿಕರ ಅನುಕೂಲಗಳನ್ನು ಗಮನಿಸ

ಬೇಕು, ನಾವು ಇಳಿಯಬೇಕಾದ ಕಡೆ ಚೈನು ಎಳೆದು ರೈಲು ನಿಲ್ಲಿಸುವುದು ಅಪರಾಧ, ಸಾರ್ವಜನಿಕ ವಾಹನಗಳಲ್ಲಿ ಪೆಟ್ರೋಲನ್ನು ತರಬಾರದು, ಧೂಮಪಾನ ಸಲ್ಲದು, ಫುಟ್‌ಪಾತ್ ತಿಂಡಿ ಅನಾರೋಗ್ಯಕರ, ಧರ್ಮ ದೇವರುಗಳ ಹೆಸರಿನಲ್ಲಿ ಭಿಕ್ಷೆ ಬೇಡುವುದು, ಹಣ ವಸೂಲಿ ಮಾಡುವುದು ಅಧರ್ಮ ಇತ್ಯಾದಿ. ಇವೆಲ್ಲ ಮಕ್ಕಳಿಗೆ ತಿಳಿಯಬೇಕಾದ ವಿಷಯಗಳೇ ಆಗಿವೆ.

ಮಕ್ಕಳು ಹಿರಿಯರಿಂದ ಕೇಳಿ ತಿಳಿಯುವುದಕ್ಕಿಂತ ಹಿರಿಯರನ್ನು ನೋಡಿ ಕಲಿಯುವುದೇ ಹೆಚ್ಚು. ಈ ದೃಷ್ಟಿಯಿಂದ ಇಲ್ಲಿನ ಮಾಸ್ತರರ ಸೌಜನ್ಯ, ಹಿರಿಮೆ ಗರಿಮೆಗಳು ವಿದ್ಯಾರ್ಥಿಗಳಿಗೆ ಮೇಲ್ಪಂಕ್ತಿ ಆಗುವುದರಲ್ಲಿ ಸಂದೇಹವಿಲ್ಲ. ಮೊದಲ ಐದು ದೃಶ್ಯಗಳಲ್ಲಿ ಮಾಸ್ತರರು ವಿದ್ಯಾರ್ಥಿಗಳೊಡನೆ ಹಾಗೂ ಕೊನೆಯ ಐದು ದೃಶ್ಯಗಳಲ್ಲಿ ಅವರೇ ಪ್ರಮುಖರಾಗಿ ಭಾಗವಹಿಸಿದ್ದಾರೆ.

ಸರಳವಾದ ಆಡುಮಾತಿನ ಬಳಕೆ ಈ ಪುಸ್ತಕದ ವೈಶಿಷ್ಟ್ಯ. ಸಂಭಾಷಣೆ ಘಟನೆಗಳೆಲ್ಲ ನಾವು ನೀವು ಕೂತು ಮಾತನಾಡುವಂತಿದೆ. ಹತ್ತು ಹಲವು ವಿಷಯ ಗಳನ್ನು ಈ 32 ಪುಟಗಳ ಪುಟ್ಟ ಪುಸ್ತಕದಲ್ಲಿ ಲೇಖಕರು ಅಡಗಿಸಿದ್ದಾರೆ. ಮುನ್ನುಡಿ ಯಲ್ಲಿ ಲೇಖಕರು ಹೇಳುತ್ತಾರೆ. "ಮಕ್ಕಳು ಹಾಗೂ ದೊಡ್ಡವರು ಜೀವನದ ಮೌಲ್ಯಗಳನ್ನು ಅರಿತು ವ್ಯವಹಾರ ಜೀವನದಲ್ಲಿ ಅನುಸರಿಸಬೇಕಾದ ಕೆಲವು ಕರ್ತವ್ಯ ಗಳ ಬಗ್ಗೆ ಇಲ್ಲಿ ದೃಷ್ಟಿ ಹರಿಸಿದ್ದೇನೆ. ಈ ತರಹ ಪೌರ ಪ್ರಜ್ಞೆ ಜಾಗೃತಗೊಂಡರೆ ಬಾಳು ಹಸನಾದೀತು, ಈ ದೇಶ ರಾಮರಾಜ್ಯ ಆದೀತು" ಈ ಮಾತುಗಳೆಲ್ಲ ನಿಜ. ಕೃತಿ ತನ್ನ ಈ ಉದ್ದೇಶವನ್ನು ಈಡೇರಿಸಿಕೊಂಡಿದೆ ಎಂದರೆ ತಪ್ಪಲ್ಲ.

## "ಕವಿ ರತ್ನತ್ರಯರು"

ಕನ್ನಡದ ಮೊದಲ ಕವಿಗಳಲ್ಲಿ ರತ್ನತ್ರಯರೆಂದು ಪ್ರಸಿದ್ಧರಾದ ಪಂಪ, ಪೊನ್ನ, ರನ್ನರ ಕೃತಿಗಳ ಸ್ಥೂಲ ಪರಿಚಯ ಈ ಕಿರು ಹೊತ್ತಿಗೆ. ಕನ್ನಡದ ಚೆನ್ನುಡಿಯನ್ನು ಈ ಕವಿಗಳು ಶ್ರೀಮಂತಗೊಳಿಸಿದ ಬಗೆಯನ್ನು ಇಲ್ಲಿ ವಿವರಿಸಲಾಗಿದೆ. ಹಿನ್ನೆಲೆಯಾಗಿ ನಾಲ್ಕು ಮಾತುಗಳನ್ನು ಹೇಳುತ್ತ ಸ್ವಲ್ಪದರಲ್ಲಿ ಕವಿಯ ಪರಿಚಯ ನೀಡಿ, ವಿಸ್ತಾರ ವಾಗಿ ಕೃತಿಗಳನ್ನು ಪರಿಚಯಿಸಿರುವ ಇಲ್ಲಿನ ವಿಧಾನ ಆಕರ್ಷಕವಾಗಿದೆ. ಆಯಾ ಕವಿಗಳ ಕೃತಿಗಳ ಮುಖ್ಯವಾದ ವಿಚಾರಗಳು ಬಿಟ್ಟು ಹೋಗದಂತೆ ಎಚ್ಚರವಹಿಸಿ, ಅವುಗಳ ಮೇಲ್ಮೆಯನ್ನು ಕನ್ನಡಿಯಲ್ಲಿ ಆನೆಯನ್ನು ತೋರಿದಂತೆ ಸೆರೆಹಿಡಿಯಲಾಗಿದೆ ಈ ಅಂಶ ಈ ಕೃತಿಯ ಅಗತ್ಯತೆಯನ್ನು ಎತ್ತಿ ಹಿಡಿಯುತ್ತದೆ.

'ಪಂಪ'ನನ್ನು ಕುರಿತ ಪರಿಚಯದ ಪ್ರಾರಂಭ ನೋಡಿ :

"ಕನ್ನಡ ನಾಡು, ನುಡಿಗೆ ಸಾವಿರಾರು ವರ್ಷಗಳಷ್ಟು ಹಿಂದಿನ ಇತಿಹಾಸವಿದೆ. ಮಹಾಭಾರತ, ಮಾರ್ಕಂಡೇಯ ಪುರಾಣ, ಸ್ಕಾಂದ ಪುರಾಣ ಹಾಗೂ ವಾಯು ಪುರಾಣಗಳಲ್ಲಿ 'ಕರ್ನಾಟಕ' ಹೆಸರು ಕಂಡುಬರುತ್ತದೆ. ಕ್ರಿ.ಶ. ಸು. 840 ರಲ್ಲಿ ರಚಿತಗೊಂಡ 'ಕವಿರಾಜ ಮಾರ್ಗ' ಕೃತಿಯಲ್ಲಿ ಕನ್ನಡ ನಾಡು ಕಾವೇರಿಯಿಂದ ಗೋದಾವರಿವರೆಗೂ ಹಬ್ಬಿತೆಂದು ತಿಳಿದುಬರುತ್ತದೆ.

ಸೊಗಸಾದ ಪ್ರಾರಂಭ. ಕನ್ನಡದ ಹಳಮೆಯನ್ನು ಉಲ್ಲೇಖಗಳಿಂದ ಉದ್ಧರಿಸಿ, ಪಂಪನ ವಿಷಯಕ್ಕೆ ಲೇಖಕರು ನೇರವಾಗಿ ಧುಮುಕುತ್ತಾರೆ. ವ್ಯಾಸ ಭಾರತದ ಕತೆಯನ್ನು 'ಕತೆಯ ಮೈಗೆಡಲೀಯದೆ' ಬಳಸಿಕೊಂಡಿರುವುದಾಗಿ ಪಂಪ ಹೇಳಿಕೊಂಡಿದ್ದಾನೆ. ನಾವು ಅದನ್ನೇ ಅನುಸರಿಸಿ ಹೇಳಬಹುದಾದರೆ, ಶ್ರೀನಿವಾಸ ರಾಯರು ಕವಿ, ಕೃತಿಗಳ ಮೈಗೆಡಲೀಯದೆ ಪರಿಚಯಿಸಿ ಪರಿಶೀಲಿಸಿದ್ದಾರೆ ಎಂದರೆ ಅತಿಶಯೋಕ್ತಿಯಾಗಲಾರದು.

ಮೊದಲಿಗೆ ವ್ಯಾಸಭಾರತದ ಕಥೆಯನ್ನು ಕೊಟ್ಟು, ನಂತರ ಪಂಪಭಾರತದ ಕಥೆಯನ್ನೂ ಸಂಕ್ಷೇಪವಾಗಿ ಕೊಟ್ಟು, ನಂತರ ಬದಲಾವಣೆ ಅಳವಡಿಕೆಗಳಲ್ಲಿ ಪಂಪ ತೋರಿರುವ ಪೆಂಪನ್ನು, ಹಿರಿಮೆ–ಗರಿಮೆಗಳನ್ನು ಮನವರಿಕೆ ಮಾಡಿಕೊಡಲಾಗಿದೆ. ಆದಿಪುರಾಣದ ಕಥಾ ಸಾರಾಂಶವನ್ನೂ ಸ್ಥೂಲವಾಗಿ ಕೊಟ್ಟಿದ್ದಾರೆ. ಈ ಎಲ್ಲ ಮಾತು ಪೊನ್ನ ಹಾಗೂ ರನ್ನರ ಕೃತಿಗಳ ವಿವರಣೆಗಳಿಗೂ ಅನ್ವಯಿಸುತ್ತವೆ.

ಕೃತಿಗಳ ವೈಶಿಷ್ಟ್ಯಗಳನ್ನೂ ಹೇಳುತ್ತ ಕೆಲವೇ ವಾಕ್ಯಗಳಲ್ಲಿ ಅವನ್ನು ಹಿಡಿದಿಟ್ಟಿರುವ ಪರಿಗೆ ಈ ಉದಾಹರಣೆಗಳನ್ನು ನೋಡಬಹುದು.

'ಪೊನ್ನನ ವಾಕ್ಯ ಶೈಲಿ ಬಹು ಪ್ರೌಢವಾಗಿದೆ. ನಿರರ್ಗಳವಾಗಿ ಹೇಳುವ ಆತನ ನಿರೂಪಣೆಯಲ್ಲಿ ಲಾಲಿತ್ಯ ತುಂಬಿದೆ. ವರ್ಣನಾವೈಖರಿಯಲ್ಲಿ ಪಾಂಡಿತ್ಯ ಹರಿಯುತ್ತಿರುತ್ತದೆ'. (ಪುಟ 15).

"ರನ್ನನದು ಗಂಡುಶೈಲಿ. ವಾಗ್ವೈಭವ, ಬೆಡಗು ಪ್ರಮುಖ ಲಕ್ಷಣಗಳು. ಕಾವ್ಯದಲ್ಲಿ ವೀರ, ಶೋಕ, ಕರುಣರಸಗಳೂ ಹಿತಮಿತವಾಗಿ ತುಂಬಿಬಂದಿವೆ".

(ಪುಟ 22)

ಕೆಲವೇ ವಾಕ್ಯಗಳಲ್ಲಿ ಮುಖ್ಯವಾದ ಸಾರವನ್ನು ಕೊಡುತ್ತಾರೆ. ಉದಾಹರಣೆಗೆ—

"ಮಹಾಭಾರತ ಒಂದು ಮಹಾ ಸಮುದ್ರವಾದರೆ, ಗದಾಯುದ್ಧ ಪ್ರಸಂಗ

ಆದರಲ್ಲಿನ ಒಂದು ಅನರ್ಘ್ಯ ರತ್ನವಿದ್ದ ಹಾಗೆ. ಇದನ್ನು ಕವಿ ಬಹು ಕುಶಲತೆಯಿಂದ ಕೆತ್ತಿ ಕುಂದಣದ ಗೂಡಿನಲ್ಲಿ ಇರಿಸಿ ಅಮೋಘ ಆಭರಣವನ್ನಾಗಿ ಮಾಡಿದ್ದಾನೆ" (ಪುಟ 20)

"ಪ್ರತಿ ನಾಯಕ ದುರ್ಯೋಧನ ಹಟದ ವ್ಯಕ್ತಿ. ಇವನಲ್ಲಿ ದುರ್ಗುಣ, ಸುಗುಣ, ಎರಡೂ ಭವ್ಯ ಪ್ರಮಾಣದಲ್ಲಿ ತುಂಬಿವೆ. ಆತನ ಛಲ, ಮಿತ್ರಪ್ರೇಮ, ಭ್ರಾತೃಪ್ರೇಮ, ಅಭಿಮಾನ ನಮ್ಮ ಮನಸ್ಸನ್ನು ಕರಗಿಸುತ್ತದೆ. ಆತನಲ್ಲಿ ದ್ವೇಷ ಭಾವನೆಗೆ ಬದಲಾಗಿ ಸಹಾನುಭೂತಿ ಮೂಡುವಂತೆ ಮಾಡುತ್ತದೆ" (ಪುಟ 21).

—ಈ ಎರಡು ವಾಕ್ಯವೃಂದಗಳನ್ನು ಗಮನಿಸಬಹುದು.

ರನ್ನನ ಗದಾಯುದ್ಧ ಕುರಿತು ಹೇಳುತ್ತ "ಬಿ.ಎಂ. ಶ್ರೀಗಳು ಈ ಕಾವ್ಯವನ್ನು 'ಗದಾಯುದ್ಧ ನಾಟಕಂ' ಎಂದು ಕರೆದಿರುವುದೇ ಇದರಲ್ಲಿನ ನಾಟಕ ಗುಣಗಳ ಪ್ರಾಧಾನ್ಯತೆಯನ್ನು ಎತ್ತಿ ತೋರುತ್ತದೆ" ಎನ್ನುವ ಮಾತಿದೆ (ಪುಟ 22). ಬಿ. ಎಂ. ಶ್ರೀ ಅವರು ಹಾಗೆಂದು ಕರೆದಿರುವುದಷ್ಟೇ ಅಲ್ಲ ಅದೇ ಹೆಸರಿನಲ್ಲಿ ನಾಟಕವನ್ನು ಬರೆದೇ ಇದ್ದಾರೆ.

ಇಂಥ ಕೃತಿಗಳ ಅವಶ್ಯಕತೆ ಇವತ್ತು ನಮಗೆ, ನಮ್ಮ ಹುಡುಗರಿಗೆ ಎಷ್ಟಾದರೂ ಇದೆ. ಈ ಎರಡೂ ಕೃತಿಗಳು ಸ್ವಾಗತಾರ್ಹ. ಇವುಗಳನ್ನು ನೀಡಿದ ರಾಯರು ನಿಜಕ್ಕೂ ಅಭಿನಂದನಾರ್ಹರು.



# ಬಾನುಲಿ ನಾಟಕಗಳು

—ಡಾ॥ ಬಿ. ಎಸ್. ಸ್ವಾಮಿ

ಧನಂಜಯನು ಹೇಳಿದಂತೆ ದಶರೂಪಕ ಎಂದರೆ ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸುಮನಕಾರ, ವೀಥಿ, ಉತ್ಸೃಷ್ಟಿಕಾಂಕ (ಅಂಕ) ಮತ್ತು ಈಹಾಮೃಗ. ನಾಟಕದಲ್ಲಿ ರೂಪಕದ ಲಕ್ಷಣಗಳೆಲ್ಲಾ ತುಂಬಿರುತ್ತವೆ. ನಾಟಕಕ್ಕೆ 'ಪ್ರಕೃತಿ' ಎಂತಲೂ ಮಿಕ್ಕ ಒಂಬತ್ತು ರೂಪಕಗಳಿಗೆ 'ವಿಕೃತಿ' ಎಂದೂ ಹೆಸರು. ನಾಟ್ಯ, ರೂಪ, ರೂಪಕಗಳೆಲ್ಲಾ ಒಂದೇ ಅರ್ಥವ್ಯಾಪ್ತಿಯುಳ್ಳದ್ದು. ಧನಂಜಯು ರೂಪಕದ ಬಗೆಗೆ ಹೀಗೆ ಹೇಳುತ್ತಾನೆ. "ರೂಪಕದಲ್ಲಿ ವಸ್ತುವಿನ ಸ್ಥಾನ ಸ್ವಾತಂತ್ರವಲ್ಲ, ಉಚಿತವೂ, ಸುಂದರವೂ ಆದ ವಚನ ಪ್ರಪಂಚದಿಂದ ಪೂರ್ವ ಕಾವ್ಯಗಳ ಪರಿಶೀಲನದಿಂದ ಕವಿ ಚಮತ್ಕಾರವುಳ್ಳ ರೂಪಕವನ್ನು ರಚಿಸತಕ್ಕದ್ದು."

"A feauture programme is a method of employing all available methods & tricks of broadcasting to convey information or entertainment in a palatable form"—

ಇದು ಫೀಲ್ಡನ್ ಬಾನುಲಿ ಶಬ್ದ ಚಿತ್ರಕ್ಕೆ ಕೊಟ್ಟಿರುವ ವ್ಯಾಖ್ಯಾನ.

'ಶಬ್ದ ಚಿತ್ರ' ಒಂದು ವೈವಿಧ್ಯಪೂರ್ಣ ರೂಪಕ. ಬರೀ ಭಾಷಣ ಶ್ರೋತೃಗಳಿಗೆ ಬೇಸರವಾಗುತ್ತದೆಂದು ರೂಪಕ ವಿಧಾನವನ್ನು ಅನುಸರಿಸಿ ಶ್ರೋತೃಗಳಿಗೆ ಬೋಧನೆ, ಮನರಂಜನೆ ಒದಗಿಸುವ ಉದ್ದೇಶದಿಂದ 'ಶಬ್ದ ಚಿತ್ರ' ಕಾರ್ಯಕ್ರಮ ನಿಯೋಜಿಸಲ್ಪಟ್ಟಿತು. ಶಬ್ದ ಚಿತ್ರ ಎಂದರೆ ನಿರೂಪಣೆ, ಸಂಭಾಷಣೆ, ಸಂಗೀತ, effects ಸಂದರ್ಶನಗಳನ್ನೊಳಗೊಂಡ ಒಂದು ಕಲಾತ್ಮಕ ಕಾರ್ಯಕ್ರಮ. ಮತ್ತೊಂದೆಡೆ ಫೀಲ್ಡನ್ ಹೇಳುವಂತೆ—

"Feature programmes may range from a discription of some process of manufacture interspersed with sound effects, conversation with workers & soforth to an arrangement of poetry & music compiled so as to present & develop an idea".

ರೂಪಕದ ಯಶಸ್ಸು ನಿರ್ದೇಶಕನ ಕೈಯಲ್ಲಿದೆ. ಆಳವಾದ ಸಂಶೋಧನೆ,

ತಾಂತ್ರಿಕ ವೈವಿಧ್ಯತೆ, ಜನಸಾಮಾನ್ಯರಿಗೆ ಹೇಗೆ ಕೊಟ್ಟರೆ ಸ್ವೀಕರಿಸುತ್ತಾರೆ ಎಂಬುದರ ಬಗ್ಗೆ ಅರಿವು ಇರುವ ನಿರ್ದೇಶಕನಿಂದ ಯಶಸ್ವಿಯಾದ ರೂಪಕ ಸಿದ್ಧ ವಾಗುವುದರಲ್ಲಿ ಅನುಮಾನವಿಲ್ಲ. ಚಲನ ಚಿತ್ರದ ಡಾಕುಮೆಂಟರಿಯಂತೆ ಪ್ರಸಾರ ಸಾಹಿತ್ಯದಲ್ಲಿ ಶಬ್ದಚಿತ್ರಗಳು, ಕಥಾವಸ್ತು, ರಚನೆ ತಂತ್ರಗಳು, ನಾಟಕಕ್ಕಿಂತ ಭಿನ್ನವಾಗಿರುತ್ತದೆ. ಇಲ್ಲಿ ಸತ್ಯ ಸಂಗತಿಯ ನಿರೂಪಣೆಯನ್ನು ಕಾಣಬಹುದು. ಡಾ॥ ಎಚ್. ಕೆ. ರಂಗನಾಥ್ ಅವರು ಹೇಳುವಂತೆ "ಒಂದು ವಿಷಯ ಅಥವಾ ಸಮಸ್ಯೆ ಒಂದು ವ್ಯಕ್ತಿ ಅಥವಾ ವಸ್ತು ಕಡೆಗೆ ಒಂದು ಭಾವನೆ ಅಥವಾ ಅನುಭವ ವನ್ನು ಕುರಿತು ಬುದ್ಧಿಶಾಲಿಯಾದ ನಿರ್ದೇಶಕನೊಬ್ಬನು ವೈಯಕ್ತಿಕ ದೃಷ್ಟಿ ಬೀರಿ ಸೂತ್ರ ಬದ್ಧವಾಗಿ ರಚಿಸಿದ ಕೃತ್ತಿಕೆಯೇ 'ಶಬ್ದ ಚಿತ್ರ' ಅಥವಾ "ಧ್ವನಿ ಚಿತ್ರ". ಇವು ಬಾನುಲಿಯಲ್ಲಿ ಒಂದು ಅಪೂರ್ವ ಕೊಡುಗೆಯಾಗುವುದು. ಒಂದು ವಿಷಯದ ಬಗೆಗೆ ಕಲೆಹಾಕಿದ ವಿವರಣೆಯನ್ನು ಮನರಂಜಿಸುವ ರೀತಿಯಲ್ಲಿ ಪ್ರತಿಪಾದಿಸುವುದೇ ಧ್ವನಿ ಚಿತ್ರದ ಧ್ಯೇಯ. ಪ್ರಸಾರಸಾಹಿತ್ಯದಲ್ಲಿ–'Most creative & most imaginative form' ಎಂದೆನಿಸಿಕೊಂಡಿದೆ.

ಎನ್ಕೆ ಅವರು ಶಬ್ದ ಚಿತ್ರ ಎಂದರೆ "ಒಂದು ಸಂಗತಿ, ಘಟನೆ. ವೈಜ್ಞಾನಿಕ ವಿಷಯ, ವ್ಯಕ್ತಿಯ ಬಗ್ಗೆ ವಿಶೇಷ ಸಂಶೋಧನೆ ನಡೆಸಿ ಅದರ ವಿವಿಧ ಮುಖಗಳನ್ನು ಮೂಡಿಸುತ್ತದೆ. ಜನಪದ ಕಥೆ, ನದಿ, ಋತುಗಳ ಕಲ್ಪನಾ ಚಿತ್ರಗಳು ವಾಸ್ತವವಾಗ ಬಹುದು" ಎಂದಿದ್ದಾರೆ.

ಬಿ. ಬಿ. ಸಿ. ಬರೆಹಗಾರ ಲಾರೆನ್ಸ್ ಗಿಲಿಯುಮ್ ಹೇಳುವಂತೆ—

''The Programmes came to signify wide range of programmes items usually factual and documentary presented by a variety of techniques. But mostly making use of dramatisation & edited actuality''.

ರೂಪಕ, ಧ್ವನಿ ಚಿತ್ರ, ಶಬ್ದ ಚಿತ್ರ, ಇವೆಲ್ಲಾ ಹೆಚ್ಚು ಕಡಿಮೆ ಒಂದೇ ರೂಪ. ಕಾಲ್ಪನಿಕ ಧ್ವನಿ ಚಿತ್ರ, ಸಾಹಿತ್ಯ ಶ್ರುತಿಕೆ, ಸಾಕ್ಷಿ ಚಿತ್ರಗಳೆಂಬ ವಿಧಾನಗಳಿವೆ. ದಿನದಿನಕ್ಕೂ ಇದು ಬದಲಾವಣೆಯನ್ನು ಹೊಂದುವುದು. ಡಾ॥ ಎಚ್. ಕೆ. ರಂಗನಾಥರು ಮತ್ತೊಂದೆಡೆ ಹೇಳುವಂತೆ "ರೇಡಿಯೋ ರೂಪಕದ ವಸ್ತು ಯಾವು ದಾದರೂ ಇದ್ದೀತು. ಅಸಾಮಾನ್ಯವಾದ ಘಟನೆಗಳ ಧ್ವನಿ ಚಿತ್ರಣಕ್ಕೆ ಪ್ರಸಾರ ಮಾಧ್ಯಮ ಅಳವಡುವುದಾದರೂ ನಾಟಕದ ಮೂಲ ದ್ರವ್ಯ, ಪೌರಾಣಿಕ, ಚಾರಿತ್ರಿಕ ಇಲ್ಲವೇ ಸಾಮಾಜಿಕವಾಗಿದ್ದು. ಕುಟುಂಬ ಜೀವನ ಅಥವ ವ್ಯಕ್ತಿ ಜೀವನದ

ಒಂದೇ ಎಳೆಯನ್ನು ಆಧರಿಸಿ ಈ ಮಾಧ್ಯಮದ ತಂತ್ರವನ್ನು ದುಡಿಸಿಕೊಂಡು ಪ್ರಸಾರ ರೂಪವನ್ನು ಸೃಷ್ಟಿಸಲು ಸಾಧ್ಯ. ಈ ತಂತ್ರ ಅರಿತು ಯಶಸ್ವಿಯಾಗಿ ಬಳಸುವುದರಿಂದಲೇ ತೆರೆಯ ರಂಗದ ಮೇಲೆ ತರಲು ಅಸಾಧ್ಯವಾದಂಥ ಅನುಭವ ವನ್ನು ಬಾನುಲಿಯ ಮೂಲಕ ಕೊಡಬಹುದಾಗಿದೆ. ಘಟನೆಯನ್ನು ಪ್ರಕೃತ ವಾಗಿಟ್ಟುಕೊಂಡು ಅದರ ಹಿನ್ನೆಲೆಯನ್ನೂ ಹಂತಹಂತವಾಗಿ ಜೋಡಿಸುವುದು ಈ ತಂತ್ರದ ವಿಧಾನ".

ನಿಸರ್ಗ, ಜ್ವಾಲಾಮುಖಿ, ಸಿಡಿಲು, ಗುಡುಗು, ಮಳೆ, ಮಹಾಪೂರ ಸಮರ, ಪ್ರಣಯ, ಮುಂತಾದುವನ್ನು ರೂಪಕದಲ್ಲಿ ತರಬಹುದು. ಸಣ್ಣ ಕತೆ, ಕಾದಂಬರಿ ಗಳು ರೂಪಕವಾಗಿ ಪ್ರಸಾರಗೊಂಡಿವೆ. ಕೇಳ್ಮೆಯಲ್ಲಿ ಸಿದ್ಧಿಸುವಂಥ ಕಥಾ ದ್ರವ್ಯ ಹಾಗೂ ಪ್ರಯೋಗದ ತಂತ್ರಗಳನ್ನೊಳಗೊಂಡ ಕಾರಣ ರೇಡಿಯೋ ರೂಪಕ ಇಂದಿಗೂ ನಿಶ್ಚಿತ ಸ್ಥಾನವನ್ನು ಕಾಯ್ದಿರಿಸಿಕೊಂಡಿದೆ.

ಎಸ್. ವಿ. ಶ್ರೀನಿವಾಸರಾವ್ ಅವರು ಕಥೆ, ಕಾದಂಬರಿ, ವ್ಯಕ್ತಿ ಚಿತ್ರ ಬರೆದಂತೆ ದೂರದರ್ಶನ, ಬಾನುಲಿಗೆ ಕೆಲವು ನಾಟಕ ರೂಪಕಗಳನ್ನು ಮಕ್ಕಳಿಗಾಗಿ ಸಿದ್ಧಪಡಿಸಿದ್ದಾರೆ. ಪೌರ ಪ್ರಜ್ಞೆ, ಮೌಲಾನಾ ಅಬುಲ್ ಕಲಾಮ್ ಆಜಾದ್, ಪಂಡಿತ ಗೋವಿಂದ ವಲ್ಲಭ ಪಂತ್, ರೂಪಕಗಳು ದೂರದರ್ಶನದಲ್ಲಿ ಪ್ರಸಾರ ವಾದರೆ, ಸದ್ಗುರು ಶಂಕರಾಚಾರ್ಯ, ಜಗಜಟ್ಟಿ, ಸಂಬಂಧ, ಚೈತನ್ಯ, ಬಾನುಲಿ ಯಲ್ಲಿ ಪ್ರಸಾರವಾದ ನಾಟಕಗಳು. ಹದಿನೈದು ನಿಮಿಷ, ದುರ್ವಿನೀತ, ಓಂ ಮಾನೆ ಪೇಮೆ ಹುಂ, ತರಂಗ ರಂಗ, ಓವರ್ ಟೈಮ್, ರಾಮು, ಅಪಘಾತ, ಪ್ರವಾಸ, ಇಂಟರ್‌ವ್ಯೂ, ಮನಸ್ಸಿಗೆ ಜಯವಿಲ್ಲ, ಸಾಹಿತ್ಯ ವಿಜ್ಞಾನ, ಮಕ್ಕಳಿಗೆ ಮೂರು ಕಥೆ ಗಳು, ಸುಬೋಧರಾಮರಾಯರು, ಮೇವುಂಡಿ ಮಲ್ಲಾರಿ, ದಿನಕರ ದೇಸಾಯಿ. ವಿದ್ಯುತ್ ಜನಕಗಳು ಇನ್ನಿತರ ರೇಡಿಯೋ ನಾಟಕ ರೂಪಕಗಳು.

ಮೌಲಾನಾ ಅಬುಲ್ ಕಲಾಂ ಆಜಾದ್ ಬಗೆಗೆ ಈ ಕಿರು ನಾಟಕ ಬೆಂಗಳೂರು ದೂರದರ್ಶನದಿಂದ ಪ್ರಸಾರಗೊಂಡಿದೆ. ಮಕ್ಕಳಿಗೆ ಈ ವ್ಯಕ್ತಿಯ ಬಗ್ಗೆ ಪರಿಚಯಿಸುವ ರೂಪಕ.ಇದು ಒಂದು ರೀತಿಯಲ್ಲಿ ಮಕ್ಕಳಿಗೂ ಉಪಾಧ್ಯಾಯರಿಗೂ ನಡೆದ ಸಂಭಾಷಣಾ ರೂಪದಲ್ಲಿ ವ್ಯಕ್ತಿ ಚಿತ್ರ ನೀಡುವ ಪ್ರಯತ್ನ ಮಾಡಿದ್ದಾರೆ ಲೇಖಕರು.

ಪೌರ ಪ್ರಜ್ಞೆ ಬಾನುಲಿಯಲ್ಲಿ ಪ್ರಸಾರವಾದ ರೂಪಕ. ಲೇಖಕರೇ ಹೇಳು ವಂತೆ ಇದರ ಉದ್ದೇಶ "ಮಕ್ಕಳು ಹಾಗೂ ದೊಡ್ಡವರು ಜೀವನ ಮೌಲ್ಯಗಳನ್ನು

ಅರಿತು ವ್ಯವಹಾರ ಜೀವನದಲ್ಲಿ ಅನುಸರಿಸಬೇಕಾದ ಕೆಲವು ಕರ್ತವ್ಯಗಳ ಬಗ್ಗೆ ಇಲ್ಲಿ ದೃಷ್ಟಿ ಹರಿಸಿದ್ದೇನೆ. ಈ ತರಹದ ಪೌರ ಪ್ರಜ್ಞೆ ಎಲ್ಲರಲ್ಲೂ ಜಾಗೃತಿಗೊಂಡರೆ ಬಾಳು ಹಸನಾದೀತು. ಈ ದೇಶ ರಾಮರಾಜ್ಯವಾದೀತು" ಎಂದು. ರಸ್ತೆಯಲ್ಲಿ ಕಸ ಎಸೆಯುವುದು, ರಸ್ತೆಯಲ್ಲಿನ ಕೊಚ್ಚೆ ನೀರಲ್ಲಿ ವಾಹನ ನಡೆಸುವುದು, ಜೇರೆಯವರಿಗೆ ಸಿಡಿಸುವುದು, ಬಾಳೆ ಹಣ್ಣಿನ ಸಿಪ್ಪೆಯನ್ನು ಎಸೆಯುವುದರಿಂದ ಆಗುವ ಅನಾಹುತಗಳು, ರಸ್ತೆಯಲ್ಲಿ ಆಟ ಆಡಿ ಅಪಘಾತವಾಗುವುದು, ರಸ್ತೆಯಲ್ಲಿ ಜೋರಾಗಿ ವಾಹನ ಓಡಿಸುವುದರಿಂದ ಉಂಟಾಗುವ ಅನಾಹುತಗಳು, ಚಲಿಸುವ ಬಸ್ಸಿನಲ್ಲಿ ಉಗಿಯುವುದು, ಟ್ರಾಫಿಕ್ ಕಂಟ್ರೋಲ್ ಮಾಡುವುದು, ನಲ್ಲಿ ನೀರು ಸುರಿಯುವುದು, ಕೊಯ್ದು ಮಾರುವ ಹಣ್ಣು ತಿನ್ನುವುದು, ರೈಲು ಹತ್ತುವಾಗ ನೂಕು ನುಗ್ಗಲಿನಿಂದ ಆಗುವ ಅಪಘಾತಗಳು, ಟಿಕೆಟ್ ಇಲ್ಲದೆ ಪ್ರಯಾಣ, ರೈಲ್ವೆ ಚೈನ್ ಎಳೆಯುವುದು, ಭಿಕ್ಷುಕ ಸಮಸ್ಯೆ ಮುಂತಾದುವುಗಳನ್ನು ಚಿತ್ರಿಸಿದ್ದಾರೆ. ಈ ರೂಪಕದಲ್ಲಿ ಬಹಳಷ್ಟು ವಿಷಯಗಳನ್ನು ತುಂಬಿದ್ದಾರೆ. ಕೆಲವು ವಿಷಯಗಳತ್ತ ಕೇಂದ್ರೀಕರಿಸಿದ್ದರೆ ಪರಿಣಾಮಕಾರಿಯಾಗುತ್ತಿತ್ತು ಎನ್ನಿಸುತ್ತದೆ.

ಶಂಕರಾಚಾರ್ಯರ ಜಯಂತಿಯ ಬಗೆಗೆ ಬರೆದ ನಾಟಕದಲ್ಲಿ ಅವರ ಜೀವನ ಸಾಧನೆಗಳನ್ನು ಚಿತ್ರಿಸಲು ಲೇಖಕರು ಪ್ರಯತ್ನಿಸಿದ್ದಾರೆ. ಮಕ್ಕಳಿಗೆ ಹಿಡಿಸುವ ಶೈಲಿ, ಅಲ್ಲಲ್ಲಿ ಹಾಡುಗಳು, *effects* ಸೇರಿ ರಂಜಿಸುವಂತೆ ರಚಿಸಿರುವ ಐತಿಹಾಸಿಕ ನಾಟಕ ಜಗಜಟ್ಟಿ ತೆನಾಲಿ ರಾಮಕೃಷ್ಣನ ಬಗೆಗೆ ರೂಪಿತವಾದುದು ಆತನ ಬುದ್ಧಿವಂತಿಕೆ ತಿಳಿಸುವ ಒಂದು ಐತಿಹಾಸಿಕ ನಾಟಕ.

ವಿಜ್ಞಾನಕ್ಕೆ ಸಂಬಂಧಿಸಿದ ಕೆಲವು ನಾಟಕಗಳನ್ನೂ ಇವರು ಬರೆದಿದ್ದಾರೆ. ಇವುಗಳಲ್ಲಿ ಸಂಬಂಧ, ಚೈತನ್ಯ ಎಂಬ ಎರಡು ನಾಟಕಗಳಿವೆ. ಸಾಹಿತ್ಯ ವಿಜ್ಞಾನಕ್ಕೆ ಪೋಷಕ ಮಾತ್ರವಲ್ಲ. ಪ್ರೇರಕ ಎಂಬುದನ್ನು ಸಾರಿದರೆ, ಚೈತನ್ಯ ವಿದ್ಯುಚ್ಛಕ್ತಿ ತಯಾರು ಮಾಡುವುದರ ಬಗೆಗೆ ಮಾಹಿತಿ ನೀಡುತ್ತದೆ. ಶಿಂಷಾ ಜಲಪಾತಕ್ಕೆ ಇಂಜಿನಿಯರ್ ಮಕ್ಕಳನ್ನು ಕರೆದುಕೊಂಡು ಹೋಗಿ ವಿದ್ಯುಚ್ಛಕ್ತಿ ತಯಾರಿಸುವುದರ ಬಗೆಗೆ ಮಾಹಿತಿ ಮಾಡಿಸುತ್ತಾರೆ. ಸಣ್ಣ ಸಣ್ಣ ವಿಷಯಗಳನ್ನು ಮಕ್ಕಳಿಗೆ ನಾಟಕ ರೂಪಕ ಬರೆಯುವುವರಲ್ಲಿ ಯಶಸ್ವಿಯಾಗಿದ್ದಾರೆ. ಈ ನಾಟಕಗಳ ಉದ್ದೇಶ ಮನರಂಜನೆ ಜೊತೆಗೆ ಶಿಕ್ಷಣ ನೀಡುವುದು "ಇವು ಮಕ್ಕಳಿಗಾಗಿ ಬರೆದ ಕಾರ್ಯಕ್ರಮಗಳು, ಅವರಿಗಾಗಿಯೇ ಪ್ರಸಾರಗೊಂಡವು. ಇಲ್ಲಿ ಆರಿಸಿಕೊಂಡಿರುವ ವಿಷಯಗಳಲ್ಲಿ ಕಥೆಗಳಿಗಿಂತ ವಿಚಾರವೇ ಪ್ರಧಾನವಾದುದು. 'ಸದ್ಗುರು ಶಂಕರಾಚಾರ್ಯ'ದಲ್ಲಿ ಶಂಕರರ ಕಥೆ ಗೌಣ. ಆದರೆ ಅವರ ಮೂರ್ಖನೆನಿಸಿಕೊಂಡ ಶಿಷ್ಯ 'ಗಿರಿ' ಗುರು

ಕೃಪೆಯಿಂದ ಆತ್ಮ ತತ್ತ್ವ ವಿಚಾರವನ್ನು ಕುರಿತು ಹೇಳುವುದೇ ಸಂಪಾದಕ ವಸ್ತುವಾಗಿದೆ. ಹಾಗೆಯೇ ಸಂಬಂಧದಲ್ಲಿ ಬಂದಿರುವ ಶಾಸ್ತ್ರ ಗ್ರಂಥಗಳ ವಸ್ತುವಿನ ಪರಿಚಯಕ್ಕೆ ಪ್ರಾಧಾನ್ಯತೆ ಕೊಡಲಾಗಿದೆ. ಚೈತನ್ಯದಲ್ಲಂತೂ ವಿದ್ಯುಚ್ಛಕ್ತಿಯ ಬಗ್ಗೆ ವಿವರವಾಗಿ ತಿಳಿಸುವ ಪ್ರಯತ್ನ ನಡೆದಿದೆ. ಏನೇ ಆಗಲೀ ಕಠಿಣ ವಿಷಯಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಸುಲಭವಾಗಿ ಆಕರ್ಷಕ ಶೈಲಿಯಲ್ಲಿ ತಿಳಿದುಕೊಳ್ಳುವ ಈ ಕೃತಿ ಸಫಲಗೊಂಡಿದೆ" ಎನ್ನುತ್ತಾರೆ ಎಚ್. ವಿ. ರಾಮಚಂದ್ರರಾಯರು ಪುಸ್ತಕದ ಮುನ್ನುಡಿಯಲ್ಲಿ.

ಲೇಖಕರು ಹೀಗೆ ನಾಟಕ ರೂಪಕಗಳ ರಚನೆ ಹೆಚ್ಚು ಹೆಚ್ಚು ಕೃಷಿ ಮಾಡುತ್ತಾ ಹೋದರೆ ಹೆಚ್ಚು ಹೆಚ್ಚು ವೈವಿಧ್ಯಮಯ ರೂಪಕ ನಾಟಕ, ರೂಪಿಸಬಲ್ಲರು ಎಂಬ ಆಶಾದಾಯಕ ವಾತಾವರಣ ಮೂಡಿಸಿದ್ದಾರೆ.



# ಬಾಳೇಬಂಗಾರ

—ಗೀತಪ್ರಿಯ

ನನ್ನ ಆತ್ಮೀಯರಾದ ಶ್ರೀ ಹೆಚ್. ವಿ. ನಾರಾಯಣ್ ಮೊನ್ನೆ ಮೊನ್ನೆ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರ ಪರಿಚಯ ಮಾಡಿಕೊಟ್ಟರು. ಬಹಳ ಸಂತೋಷ ವಾಯಿತು. ಇವರು 'ಕನ್ಯಾದಾನ', ಮಣ್ಣಿನ ಮಗ' (ನಾನು ಬರೆದು ನಿರ್ದೇಶಿಸಿದ ಚಿತ್ರದ ಕತೆಯಲ್ಲ !) 'ಹಸಿರು ಮಂಟಪ', 'ಸುಣ್ಣವಿಲ್ಲದ ವೀಳ್ಯ' ಮತ್ತು 'ಮಬ್ಬು ಮುಂಜಾವು' ಕೃತಿಗಳನ್ನು ರಚಿಸಿದ್ದಾರೆಂದೂ ತಿಳಿಯಿತು. ಇವುಗಳ ಪೈಕಿ ನಾನು 'ಹಸಿರು ಮಂಟಪ', ಮತ್ತು 'ಮಬ್ಬು ಮುಂಜಾವು' ಕಾದಂಬರಿಗಳನ್ನು ಈ ಮೊದಲೇ ಓದಿದ್ದೆ. ಇವುಗಳ ಕಥಾ ನಿರೂಪಣೆಯ ಶೈಲಿ ನನಗೆ ತುಂಬಾ ಹಿಡಿಸಿತ್ತು. ಪ್ರಸ್ತುತ ಕಾದಂಬರಿಯು 'ಕಾಡ ಬೆಳದಿಂಗಳು' ಎಂಬ ಹೆಸರಿನಿಂದ 'ಸುಧಾ' ವಾರ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗುತ್ತಿದ್ದಾಗಲೇ 'ಚೆನ್ನಾಗಿದೆ'ಯೆಂದು ಯಾರೋ ತಂದು ನನ್ನ ಮುಂದೆ ಇಟ್ಟಾಗ ಕೆಲವು ಭಾಗಗಳನ್ನು ಓದುವ ಅವಕಾಶ ಸಿಕ್ಕಿತ್ತು. ಈಗ ಈ ಕಾದಂಬರಿ ಪುಸ್ತಕ ರೂಪದಲ್ಲಿ ಹೊರಬರುವಾಗ ಶ್ರೀ ಹೆಚ್.ವಿ. ನಾರಾಯಣ್ ಮಾಡುವ ಕೆಲಸ ಒಂದೊಂದಲ್ಲ—ಮುನ್ನುಡಿ ಬರೆದು ಕೊಡಿ ಎಂದು ಹೇಳಿದರು. ಮೀರುವುದು ಹೇಗೆ ? ಇರಲಿ.

ಬೊಂಬಾಯಿ ನಗರದಲ್ಲಿ ಇದ್ದು ಬಂದವರು ಆ ಮಹಾನಗರದ ಯಾಂತ್ರಿಕ ಜೀವನದಲ್ಲಿ ಸಿಹಿಗಿಂತ ಕಹಿಯೇ ಹೆಚ್ಚು ಎನ್ನುವುದರ ಅನುಭವ ಪಡೆದಿದ್ದಾರೆ. ಯಾಂತ್ರಿಕ ಜೀವನ ದಿನವಿಡೀ ಯಂತ್ರದಂತೆ ದುಡಿದು ಬಸ್, ಟ್ಯಾಕ್ಸಿ ಮತ್ತು ಎಲೆಕ್ಟ್ರಿಕ್ ರೈಲುಗಳ ನೂಕು ನುಗ್ಗಾಟದಲ್ಲಿ ಜೀವನವೇ ಒಂದು ನೂಕು ನುಗ್ಗಾಟವಾಗಿ ಬಿಡುತ್ತೆ. ದೇಹವೂ ಯಂತ್ರ. ಮನಸ್ಸೂ ಯಾಂತ್ರಿಕ. ಮನಸ್ಸಿನ ಯಂತ್ರವಾದರೋ ಪ್ರತಿಯೊಂದನ್ನೂ ಅರಿತು ವಿವೇಚಿಸುವ ಶಕ್ತಿ ಪಡೆದಿರುತ್ತದೆ. ವಾತಾವರಣವನ್ನು ಅನುಸರಿಸಿ ನೋವು ನಲಿವಿನ ಅನುಭವ ಕೊಡುತ್ತದೆ. ಬಹುಶಃ ನಲಿವಿಗಿಂತ ನೋವೇ ಹೆಚ್ಚೇನೋ, ಆಸೆಗಿಂತ ನಿರಾಸೆಯೇ ಹೆಚ್ಚೇನೋ !

—ಇಂತಹ ನಗರದ ಮತ್ತು ಜೀವನದ ಚಿತ್ರಣ ಈ ಕಾದಂಬರಿಯಲ್ಲಿದೆ. ಇದರಲ್ಲಿನ ಒಂದೊಂದು ಪಾತ್ರವೂ ಜೀವಂತವಾಗಿ ನಿಲ್ಲುತ್ತದೆ.ಈ ಕಾದಂಬರಿಯನ್ನು ನಾವು ಓದುವಾಗ ಅಷ್ಟೂ ಪಾತ್ರಗಳೊಂದಿಗೆ ನಾವೂ ಸಹ ಓಡಾಡುವಂತೆನಿಸುತ್ತದೆ.

ನರ್ಮದಾ ಕಾದಂಬರಿಯ ಕಥಾನಾಯಕಿ. ಅವಳು ಕಟ್ಟಿದ ಮನಸ್ಸಿನ ಸ್ಕೈ ಸ್ಕ್ರೇಪರ್ ಕೆಲವೇ ದಿನಗಳಲ್ಲಿ ಉರುಳಿ ಅವಳು ವಿಧವೆಯಾದಳು. ಪತಿಯು ಕಡೆಯ ಬಳಗ ದೂರ ಸರಿಸಿದಾಗ–ಪ್ಯಾರಡಾಕ್ಸ್ ಆಫ್ ಲೈಫ್–ಗಂಡನ ಕಛೇರಿಯಲ್ಲೇ ನೌಕರಿಗೆ ಸೇರಿದಳು. ಒಂಟಿ ಹೆಣ್ಣು ಅವಳ ಮೇಲೆ ಅಸಂಖ್ಯಾತ ಕಣ್ಣುಗಳು. ಪ್ರತಿ ದಿನದ ಪ್ರತಿಕ್ಷಣವೂ ಮನೋಕ್ಲೇಶ ಮತ್ತು ಭಯ. ಜೀವನ ಯಾಂತ್ರಿಕವಾದರೂ ಮನಸ್ಸೂ ಯಂತ್ರವೇ ಆಗಿದ್ದರೂ ಅವಳಿಗೆ ನೋವು-ನಲಿವಿನ ಅಲೆಗಳು ಬಡಿಯುವುದಿಲ್ಲವೆ ?

ಈ ಅಸ್ತಿಭಾರದ ಮೇಲೆ, ಕಾವಂಬರಿ ರಚನೆಯಲ್ಲಿ ನಿಷ್ಣಾತರಾಗಿರುವ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರ ಡೆಪಿಕ್ಷನ್ ಮತ್ತು ಶೈಲಿಯಿಂದಾಗಿ 'ಕಾಡ ಬೆಳದಿಂಗಳು' ಕೇವಲ ಕಾಲ್ಪನಿಕ ರಚನೆಯಲ್ಲ. ಇದು ನಡೆದದ್ದು ಎನ್ನುವಷ್ಟು ಜೀವಂತವಾಗಿದೆ. "ಈ ರೀತಿ ಬರವಣಿಗೆಗೆ ಅಮೇರಿಕದಲ್ಲಿ ವಿಲಿಯಂ ಸರೋಯನ್, ಕನ್ನಡದಲ್ಲಿ ಎಸ್. ವಿ. ಶ್ರೀನಿವಾಸರಾವ್" ಎಂಬ ಶ್ರೀ ಹೆಚ್. ವಿ. ನಾರಾಯಣ್ ಪರಿಚಯ ಮಾಡಿಸಿದ್ದು ನಿಜವಾಗಿ ಉತ್ಪ್ರೇಕ್ಷೆಯಲ್ಲ ಎಂದು ನನಗನಿಸಿದೆ. ಕನ್ನಡದಲ್ಲಿ ಇಂತಹ ಕಾದಂಬರಿಗಳು ಹೆಚ್ಚು ಹೆಚ್ಚು ಬರಬೇಕು.

ಈ ಸಂದರ್ಭದಲ್ಲಿ ಮತ್ತೊಂದು ಆನಂದದ ವಿಷಯ—ಈ ಕಾದಂಬರಿ 'ಬಾಳೇ ಬಂಗಾರ' ಎಂದು ಇದೇ ಹೆಸರಿನಲ್ಲಿ ಚಲಚ್ಚಿತ್ರರೂಪಧಾರಣೆ ಮಾಡುತ್ತಿದೆ. ಇಂದಿನ ಯಂತ್ರಯುಗದಲ್ಲಿ ಜೀವನದ ನಿಜ ಸಮಸ್ಯೆಗಳನ್ನು ಪ್ರತಿಬಿಂಬಿಸಿ ಜನತೆಯ ಮನಸ್ಸು ಮತ್ತು ಆಲೋಚನೆ ಸೆಳೆಯುವ ಚಿತ್ರಗಳು ಬೇಕಾಗಿವೆ. ಚಲಚ್ಚಿತ್ರ ಮಾಧ್ಯಮ ಕೇವಲ ಮನರಂಜನೆಗೇ ಮೀಸಲಲ್ಲ. ಅದು ಕಲೆ ಮತ್ತು ಉದ್ಯಮ. ಚಲಚ್ಚಿತ್ರ ಜನತೆಯ ಮನೋವಿಕಾಸಕ್ಕೂ ಪ್ರಯತ್ನಿಸಬೇಕಾಗಿದೆ. ಇಂತಹ ಅಸಾಧಾರಣ ಸಾಹಸಕ್ಕೆ ಕೈ ಹಾಕಿರುವ ಈ ಚಿತ್ರದ ನಿರ್ಮಾಪಕ, ನಿರ್ದೇಶಕರಿಗೆ ನಾನು ಹಾರ್ದಿಕ ಯಶಸ್ಸು ಕೋರುತ್ತೇನೆ.

ಮಿಸ್ಟರ್ ಎಸ್. ವಿ. ಶ್ರೀನಿವಾಸರಾವ್ ಕಂಗ್ರಾಜುಲೇಷನ್ಸ್.

(ಪುಸ್ತಕದಲ್ಲಿರುವ ಮುನ್ನುಡಿ)



11476

# ಜೀವಂತ ಕೃತಿ

—ಗಾಯತ್ರಿಮೂರ್ತಿ

ಸಣ್ಣ ಕಥೆಗಳು, ಕಾದಂಬರಿ, ಮಕ್ಕಳ ಸಾಹಿತ್ಯ, ಬಾನುಲಿ ನಾಟಕಗಳು ಹೀಗೆ ಅನೇಕ ಪ್ರಕಾರಗಳಲ್ಲಿ ಸಾಹಿತ್ಯ ರಚಿಸಿ, ಜನಪ್ರಿಯರಾಗಿರುವ ಶ್ರೀ ಎಸ್. ವಿ. ಶ್ರೀನಿವಾಸರಾವ್‌ರವರು ಕನ್ನಡಿಗರಿಗೆ ಚಿರಪರಿಚಿತರು. ಉತ್ತಮ ಭಾಷಾಶೈಲಿ ಮತ್ತು ನಿರೂಪಣಾ ತಂತ್ರ ಅವರ ವೈಶಿಷ್ಟ್ಯ ಎನ್ನಬಹುದು. ಇತ್ತೀಚೆಗೆ ಪ್ರಬುದ್ಧ ಐತಿಹಾಸಿಕ ಕಾದಂಬರಿ 'ಪ್ರೌಢ ಪ್ರತಾಪ ವೀರರಾಜೇಂದ್ರ' ರಚಿಸಿ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನ ಗಳಿಸಿದ್ದಾರೆ. 1500ಕ್ಕೂ ಹೆಚ್ಚು ಪ್ರಾಚೀನ ಅರ್ವಾಚೀನ ಸಾಹಿತಿಗಳ ಪರಿಚಯ ನೀಡುವ 'ಕನ್ನಡ ಸಾಹಿತಿ ದರ್ಶನ' ಸಾಹಿತ್ಯಕ್ಕೊಂದು ಅಪರೂಪದ ಕೊಡುಗೆಯಾಗಿದೆ.

ಶ್ರೀನಿವಾಸರಾವ್‌ರವರು ಮಿತಭಾಷಿ. 'ಮಾತು ಕಡಿಮೆ, ಹೆಚ್ಚು ದುಡಿಮೆ' ಎಂಬ ಮಂತ್ರದಲ್ಲಿ ನಂಬಿಕೆಯುಳ್ಳವರು. ಆದ್ದರಿಂದಲೇ ಬಹುಶಃ ಅವರು ರಕ್ಷಣಾ ಇಲಾಖೆಯೊಂದರಲ್ಲಿ ಸೈಂಟಿಫಿಕ್ ಆಫೀಸರ್‌ನಂತಹ ಜವಾಬ್ದಾರಿಯುತ ಕೆಲಸ ನಿರ್ವಹಿಸಿಕೊಂಡು ಜೊತೆಯಲ್ಲೇ ಅಪಾರ ಸಾಹಿತ್ಯ ಸೇವೆ ಮಾಡಲು ಸಾಧ್ಯವಾಗಿದೆ. ಇತ್ತೀಚೆಗೆ ನಿವೃತ್ತಿ ಹೊಂದಿದ ಶ್ರೀ ರಾವ್‌ರವರಿಗೆ ಪ್ರವೃತ್ತಿಯಾಗಿದ್ದ ಸಾಹಿತ್ಯ ಸೇವೆ ವೃತ್ತಿಯಾಗಿ ಪರಿಣಮಿಸಿದೆ ಎಂದರೆ ಅತಿಶಯೋಕ್ತಿ ಆಗಲಾರದು.

ಶ್ರೀ ರಾವ್ ದಂಪತಿಗಳಿಗೂ ನನಗೂ ಹಲವಾರು ವರ್ಷಗಳ ಸ್ನೇಹ. ಆಡಂಬರವಿಲ್ಲದ ನಡೆನುಡಿ, ಸಾಹಿತ್ಯಸೇವೆ, ಯಾವ ಕೆಲಸವನ್ನೇ ಆಗಲಿ ಶ್ರದ್ಧೆಯಿಂದ ನಿರ್ವಹಿಸುವ ರೀತಿ ಯಾರಾದರೂ ಮೆಚ್ಚುವಂತಹುದು. ಇಂತಹ ರಾವ್‌ರವರಿಗೆ 'ಸೌರಭಶ್ರೀ' ಎಂಬ ಅಭಿನಂದನಾ ಗ್ರಂಥ ಸಮರ್ಪಿಸಿ ಸನ್ಮಾನಿಸುತ್ತಿರುವುದು ಕನ್ನಡಿಗರಿಗೆ ಹೆಮ್ಮೆಯ ವಿಷಯವಾಗಿದೆ. 'ಸೌರಭಶ್ರೀ'ಗೆ ನನ್ನದೊಂದು ಕಿರು ಕಾಣಿಕೆ ಸಲ್ಲಿಸಲು ಅವಕಾಶ ಸಿಕ್ಕಿರುವುದು ನನಗೆ ಸಂತಸದ ಸಂಗತಿಯಾಗಿದೆ. ಪ್ರಸ್ತುತ ಈ ಲೇಖನದಲ್ಲಿ ಶ್ರೀನಿವಾಸರಾವ್‌ರವರು ರಚಿಸಿರುವ ಸಾಮಾಜಿಕ ಕಾದಂಬರಿ 'ಬಾಳೇ ಬಂಗಾರ'ದ ಬಗ್ಗೆ ಪ್ರಸ್ತಾಪಿಸಲು ಇಚ್ಛಿಸುತ್ತೇನೆ.

## ಹೆಣ್ಣಿನ ಶೋಷಣೆಗೊಂದು ಕನ್ನಡಿ—ಬಾಳೇ ಬಂಗಾರ

ಬಾಳೇ ಬಂಗಾರ– 'ಕಾಡು ಬೆಳದಿಂಗಳು' ಎನ್ನುವ ಹೆಸರಿನಲ್ಲಿ ಧಾರಾವಾಹಿಯಾಗಿ ಹರಿದು ಬಂದು ಅಪಾರ ಜನಮನ್ನಣೆ ಗಳಿಸಿ, 'ಬಾಳೇ ಬಂಗಾರ' ಎಂದು ಪುಸ್ತಕ ರೂಪದಲ್ಲಿ ಹೊರಬಂದಿರುವ ಜನಪ್ರಿಯ ಸಾಮಾಜಿಕ ಕಾದಂಬರಿ. ಮುಂಬೈ ಮಹಾನಗರದಲ್ಲಿ ವಿಧವೆ-ಒಂಟಿ ಹೆಣ್ಣು–ನರ್ಮದಾಳ ಬದುಕು–ಬವಣೆಯೇ ಕಾದಂಬರಿಯ ಕೇಂದ್ರ ವಸ್ತು.

ಬಾಲ್ಯದಲ್ಲಿಯೇ ತಂದೆ ತಾಯನ್ನು ಕಳೆದುಕೊಂಡು ಸೋದರ ಮಾವನ ಆಶ್ರಯದಲ್ಲಿ ಅನಾದರಣೆಯಿಂದಲೇ ಬೆಳೆದು ದೊಡ್ಡವಳಾದಳು ನರ್ಮದಾ. ಸ್ವಾರ್ಥಿಯಾದ ಅವಳ ಅತ್ತೆ (ಸೋದರ ಮಾವನ ಹೆಂಡತಿ) ಮಗಳಿಗೆ ಗೊತ್ತಾದ ಗಂಡು, ಕಾಯಿಲೆ ಮನುಷ್ಯ ಎಂಬ ಸುಳಿವು ತಿಳಿದೊಡನೆ, ಅನಾಥೆ ನರ್ಮದೆಯನ್ನು ಅವನಿಗೆ ಗಂಟು ಹಾಕುತ್ತಾಳೆ. ಮುಂಬೈಗೆ ಬಂದ ಕೆಲವೇ ದಿನಗಳಲ್ಲಿ ನರ್ಮದ ವಿಧವೆಯಾಗುತ್ತಾಳೆ. 'ವೈವಾಹಿಕ ಜೀವನ ಪೀಠಿಕೆಯಲ್ಲೇ ಪರ್ಯವಸಾನ ಕಂಡು ಆಗಲೇ ಉತ್ತರಾರ್ಧ ಪ್ರಾರಂಭವಾಗುತ್ತದೆ'. ಮಿಡ್ಲ್ ಸ್ಕೂಲ್ ಹಂತದಲ್ಲೇ ವಿದ್ಯಾಭ್ಯಾಸ ಮುಕ್ತಾಯವಾದ ನರ್ಮದೆಯ ಬಾಳಿನುದ್ದಕ್ಕೂ ಹೋರಾಟವೇ.

ಬೃಹತ್ ಸಾಗರದಂತಹ ಮುಂಬೈಯಲ್ಲಿ ನರ್ಮದಾಳದು ಒಂಟಿ ಬಾಳು. ಒಂಟಿ ಹೆಣ್ಣನ್ನು ಕಿತ್ತು ತಿನ್ನಲು ತೋಳಗಳಂತೆ ಹೊಂಚುಹಾಕುವ ಕಾಮುಕರು. ಈ ಕಾಮುಕರ ನಡುವೆ ಮೋಡಗಳ ಮಧ್ಯೆ ಬೆಳ್ಳಿಗೆರೆಯಂತೆ ಮಿಂಚುವ ಸಂಭಾವಿತ ನರಗುಂದ. ನರ್ಮದಳಿಗೆ ಹೊಸ ಬಾಳು ನೀಡಲು ಬಯಸಿದ ನರಗುಂದನನ್ನು ಸೇರಲು ಅವಳಿಗೆ ಅದೆಷ್ಟೋ ಎಡರುತೊಡರುಗಳು. ಬಿರುಗಾಳಿಯಲ್ಲಿ ಸಾಗಿದ ದೋಣಿಯಂತೆ ನರ್ಮದ ತತ್ತರಿಸಿದರೂ ಕೊನೆಗೆ ಕ್ಷೇಮವಾಗಿ ದಡ ಸೇರುವುದೇ ಕಾದಂಬರಿಯ ಸ್ಥೂಲವಾದ ಸಾರಾಂಶ.

### ಚುರುಕಿನ ನಿರೂಪಣೆ :

ಚುರುಕಿನ ನಿರೂಪಣೆ ಕಾದಂಬರಿಯ ಜೀವಾಳ ಎನ್ನಬಹುದು. 'ನಗರದಲ್ಲಿ ಹೊರನೋಟಕ್ಕೆ ಎಲ್ಲಾನೂ ದೊಡ್ಡವೇ. ಆದ್ರೆ ಒಳಹೋದ್ರೆ ಎಲ್ಲಾನೂ ಸಣ್ಣಾನೆ. ಹುಷಾರಾಗಿರ್ಬೇಕು ಎಲ್ಲಾ ವಿಷಯದಲ್ಲೂ' ಎಂದು ಲೇಖಕರು ಒಂದೆರಡು ಮಾತುಗಳಲ್ಲೇ ಬೃಹತ್ ನಗರದ ಕಿರುಪರಿಚಯ ನೀಡುತ್ತಾರೆ.

ಆತ್ಮಹತ್ಯೆ ಮಾಡಿಕೊಳ್ಳಲು ಸಾಗರದ ಮೊರೆ ಹೋಗುತ್ತಾಳೆ ನರ್ಮದಾ. ಸಮುದ್ರದಲ್ಲಿ ಲೀನವಾಗಲು ಬಯಸಿದ ನರ್ಮದಾಗೆ ಸೋಲು. 'ಈಜು ಬಲ್ಲ

ಇವಳನ್ನು ಸಾಗರ ಆಲಿಂಗಿಸಿಕೊಳ್ಳದಾಗಿತ್ತು.' ಲೇಖಕರ ಮಾತಿನಲ್ಲಿ ನಾಯಕಿಯ ಹೋರಾಟದ ಬದುಕಿನ ಸಂಕೇತವೂ ಕಾಣುತ್ತದೆ. ಬಾಳಸಮರವನ್ನು ಸೆಣಸಿ ಗೆಲ್ಲುವ ಶಕ್ತಿಯುಳ್ಳ ಅವಳಿಗೆ ಸಾವು ಸಹಕಾರ ನೀಡದೆ ಬದುಕಿನೆಡೆಗೆ ತಳ್ಳುತ್ತದೆ. ನರ್ಮದ ಆತ್ಮಹತ್ಯೆಯ ಯೋಜನೆ ಕೊಡವಿ, ಬದುಕಲು ನಿರ್ಧರಿಸಿದ ಘಟನೆ ಮಾರ್ಮಿಕ ವಾಗಿದೆ. 'ಸಾಯುವುದೇ ಸರಿಯೆಂದು ನಿರ್ಧರಿಸಿ ಬಾಗಿಲ ಚಿಲಕ ತೆರೆಯಲು ಬಂದಾಗ ಕೆಂಪು ಇರುವೆ ಬೆರಳುಕಚ್ಚಿ ಹಿಡಿಯಿತು. ನರ್ಮದಾ ಸಿಟ್ಟಿನಿಂದ ಕೆಂಡವಾದಳು. ಇರುವೆಯನ್ನು ಕಿತ್ತು ದೂರ ಎಸೆದಳು. ನೆಲದಲ್ಲಿ ಬಿದ್ದ ಇರುವೆ ಕ್ಷಣದಲ್ಲಿ ಚೇತರಿಸಿಕೊಂಡು ಮುದುಡಿದ್ದ ಮೈಯ್ಯನ್ನು ನೀಳ ಮಾಡಿತು. ಅತ್ತ ಇತ್ತ ಹೊರಳಿತು. ಸುತ್ತಲೂ ಕತ್ತು ತಿರುಗಿಸಿತು. ಪಕ್ಕದಲ್ಲಿ ಬಿದ್ದಿದ್ದ ಗೋದಿಯ ತುಂಡೊಂದನ್ನು ಕಚ್ಚಿಕೊಂಡು ಕುಂಟುತ್ತಾ ಮುಂದೆ ಹರಿಯಿತು. ಚಿಲಕದ ಮೇಲಿದ್ದ ನರ್ಮದಳ ಕೈ ಹಾಗೇ ಇಳಿಯಿತು.

ಸಾವಿನ ದವಡೆಯಲ್ಲಿ ಜೀವಿಸುವ ಸಾಹಸ ! ಹುಟ್ಟು ! ಸಾವು ! ಒಂದು ಪ್ರಾರಂಭ ಇನ್ನೊಂದು ಕೊನೆ. ಇವೆರಡನ್ನೂ ಜೋಡಿಸುವುದೇ ಜೀವನ. ಹುಟ್ಟಿದ ಮೇಲೆ ಸಾಯಲೇಬೇಕು. ಇದು ಪ್ರಕೃತಿಯ ಕಠೋರ ನಿಯಮ. ಆದರೆ ಹುಟ್ಟು ವುದು ಸಾಯುವುದಕ್ಕಲ್ಲ, ಬಾಳುವುದಕ್ಕೆ'.

ಹೀಗೆ ಬದುಕಲು ತೀರ್ಮಾನಿಸಿದ ನರ್ಮದ ಹೆಜ್ಜೆ ಹೆಜ್ಜೆಗೂ ಬದುಕಿನೊಡನೆ ಸೆಣಸುತ್ತಾಳೆ.

ಪಾತ್ರವೊಂದರ ಮಾತಿನಲ್ಲೇ ಹೇಳುವುದಾದರೆ ನರ್ಮದಾಳದು ಕುಳ್ಳಕಾಯ. ಜೇನುಕೊಡ. ಇಂತಹ ಹೆಣ್ಣು ಒಂಟಿಜೀವ ಎಂದರೆ ಜಾಧವನಂತಹ ಕಾಮುಕರು ಸುಮ್ಮನಿದ್ದಾರೆಯೇ ? ಅವಳನ್ನು ಸಮಯ ಸಿಕ್ಕಾಗಲೆಲ್ಲಾ ಕೆಣಕುತ್ತಾನೆ. ಕೊನೆಗೆ ಮಾನಭಂಗ ಮಾಡಲು ಯತ್ನಿಸುತ್ತಾನೆ. ಜಾಧವನಿಂದ ತಪ್ಪಿಸಿಕೊಂಡು ನರಗುಂದನ ಮನೆ ಸೇರಿ ನಿಟ್ಟುಸಿರು ಬಿಟ್ಟರೆ,ಸೊಸೆಯೆಂದು ಕಾಲಿಗೆರಗಿದ ಹೆಣ್ಣನ್ನು ಸೂಳೆಯಂತೆ ಕಾಣುತ್ತಾನೆ ನರಗುಂದನ ಧೂರ್ತ ತಂದೆ. ಅಲ್ಲಿಂದ ತಪ್ಪಿಸಿಕೊಂಡು ನರ್ಮದೆ ಅನಾಥಾಶ್ರಮ ಸೇರುತ್ತಾಳೆ. ನರ್ಮದ ನಿಷ್ಕಳಂಕಿತೆ, ಜಾಧವನ ಅತ್ಯಾಚಾರಕ್ಕೆ ಬಲಿಯಾಗಿಲ್ಲ ಎಂದು ತಿಳಿದು ನರಗುಂದ ಅವಳನ್ನು ವರಿಸುತ್ತಾನೆ.

ಸೊಗಸಾದ ಭಾಷೆ ಮತ್ತು ನಿರೂಪಣೆಯಿಂದಾಗಿ ಕಾದಂಬರಿ ಮೊದಲ ಪುಟ ದಿಂದ ಕೊನೆಯುವರೆಗೂ ಒಂದೇ ವೇಗವನ್ನೂ,ಆಸಕ್ತಿಯನ್ನೂ ಕಾಯ್ದುಕೊಳ್ಳುವಲ್ಲಿ ಸಫಲವಾಗಿದೆ.

## ಪಾತ್ರ ಪೋಷಣೆ :

ಸರ್ಮದ ಆವಳಿಗೆ ಆಶ್ರಯ ನೀಡಿದ ವಿಜಯಭಟ್ ಮತ್ತು ಸೋನಾಬಾಯಿ, ಖಳನಾಯಕನೆನಿಸುವ ಜಾಧವ, ಸ್ನೇಹಹಸ್ತ ಚಾಚಿ ನರ್ಮದೆಯನ್ನು ಒಳ್ಳೆಯ ಮಾತುಗಳಿಂದ ಮರುಳು ಮಾಡಿ ಕೊನೆಗೆ ವೇಶ್ಯಾವೃತ್ತಿಗೆಳೆಯಲು ಹವಣಿಸಿದ ರೀಟಾ ಮತ್ತು ಅವಳ ತಾಯಿ. ಹೀಗೆ ಅನೇಕ ಪಾತ್ರಗಳು ಜೀವಂತ ಬೊಂಬೆಗಳಾಗಿ ಕಣ್ಮುಂದೆ ಸುಳಿದಾಡುತ್ತಾರೆ. ಸರಿಯಾದ ಪಾತ್ರ ಪೋಷಣೆಯಿಲ್ಲದೆ ನರಗುಂದ ಮಾತ್ರ ಸಪ್ಪೆಯಾಗಿ ಕಾಣುತ್ತಾನೆ.

ಎಪ್ಪತ್ತರ ದಶಕದಲ್ಲಿ ಬರೆದ 'ಬಾಳೇ ಬಂಗಾರ' ಸಾಮಾಜಿಕ ಕಾದಂಬರಿಯ ಹಂತವನ್ನು ದಾಟಿ ಶ್ರೀನಿವಾಸರಾವ್‌ರವರು ಬಹು ಮುಂದೆ ಸಾಗಿದ್ದಾರೆ. ಇಂದು ಕನ್ನಡದ ಹಿರಿಯ ಸಾಹಿತಿಗಳಲ್ಲೊಬ್ಬರಾಗಿರುವ ಇವರು 'ಪ್ರೌಢ ಪ್ರತಾಪ ವೀರ ರಾಜೇಂದ್ರ' ಎಂಬ ಪ್ರಬುದ್ಧ ಐತಿಹಾಸಿಕ ಕಾದಂಬರಿಯನ್ನೂ, 'ಕನ್ನಡ ಸಾಹಿತಿ ದರ್ಶನ' ಮತ್ತು 'ಮಕ್ಕಳೇ ಇವರನ್ನು ಬಲ್ಲಿರಾ' ಎಂಬಂತಹ ಕೃತಿಗಳನ್ನೂ ರಚಿಸಿದ್ದಾರೆ. ಶ್ರೀನಿವಾಸರಾವ್‌ರವರನ್ನು ಅಭಿನಂದಿಸಿ ಸನ್ಮಾನಿಸುತ್ತಿರುವ ಈ ಶುಭ ಸಂದರ್ಭದಲ್ಲಿ ಅವರ ಲೇಖನಿಯಿಂದ ಇನ್ನೂ ಅನೇಕ ಸುಂದರವಾದ ಕೃತಿಗಳು ಮೂಡಿಬಂದು ಕನ್ನಡ ಸಾಹಿತ್ಯ ಕ್ಷೇತ್ರವನ್ನು ಮತ್ತಷ್ಟು ಬೆಳಗಲಿ ಎಂದು ಹಾರೈಸುತ್ತೇನೆ.



# ಇಮ್ಮಡಿ ಪುಲಿಕೇಶಿ
# ಮತ್ತು
# ಕೆರೂರು ವಾಸುದೇವಾಚಾರ್ಯ

—ಕೃ. ನಾರಾಯಣರಾವ್

ಸೋದರರರೂ, ಸನ್ಮಾನ್ಯರೂ ಆದ ಶ್ರೀಯುತ ಎಸ್. ವಿ. ಶ್ರೀನಿವಾಸರಾವ್ ರವರು ಕನ್ನಡ ಸಾರಸ್ವತ ಹಾಗೂ ಸಾಹಿತ್ಯಕ ಲೋಕದಲ್ಲಿ ಎಲೆಮರೆಯ ಕಾಯಿಯ ರೀತಿಯಲ್ಲಿ ಸ್ವಸಾಮರ್ಥ್ಯದಿಂದ ಪ್ರಜ್ವಲಗೊಂಡವರು. ಇವರ ಸಾಹಿತ್ಯವನ್ನು ಗಾಢವಾಗಿ ಅವಲೋಕಿಸಿದಾಗ ಥಟ್ಟನೆ ಕಂಡು ಬರುವ ವೈಶಿಷ್ಟತೆ ಅಂದರೆ ಕಿರಿದರೊಳ್ ಪಿರಿದರ್ಥಮಂ ತುಂಬುವ ಸಾಮರ್ಥ್ಯ. ಬಿಂದುವಿನಲ್ಲಿ ಸಿಂಧುವನ್ನು ತುಂಬಿಸುವ ತಾಕತ್ತು. ಅದರಲ್ಲೂ ಐತಿಹಾಸಿಕ ವೈಚಾರಿಕ, ಪ್ರಜ್ಞೆ ಇವರ ಕೃತಿಗಳಲ್ಲಿ ಶೃತಿಗೊಂಡಿವೆ. ವ್ಯಕ್ತಿ ಪರಿಚಯದಲ್ಲಿ ಇವರ ಅತಿಶಯೋಕ್ತಿ ಇಲ್ಲದ ನಿರೂಪಣೆ ಇವರಿಗೆ ಸಾಹಿತ್ಯ ಕ್ಷೇತ್ರದಲ್ಲಿ ಎತ್ತರದ ನಿಲುವನ್ನು ನೀಡಿದೆ.

ಈಗ್ಗೆ ಪದಿನಾರು-ಹದಿನೇಳು ವರ್ಷಗಳ ಹಿಂದೆ ಇವರು ಬರೆದಿರುವ ಕಿರುಕೃತಿ "ಇಮ್ಮಡಿ ಪುಲಿಕೇಶಿ" ಹಾಗೂ "ಕೆರೂರು ವಾಸುದೇವಾಚಾರ್ಯ" ಮೇಲ್ಕಂಡ ವೈಚಾರಿಕ ಅಂಕಿ-ಅಂಶಗಳನ್ನು ಕೈಗನ್ನಡಿಯಂತೆ ವ್ಯಕ್ತಗೊಳಿಸುತ್ತವೆ.

ಐತಿಹಾಸಿಕ ಕೃತಿಗಳ ರಚನೆಯಲ್ಲಿ ಕಲ್ಪನೆಗಿಂತಲೂ ಮಿಗಿಲಾಗಿ ಸತ್ಯಕ್ಕೆ ದೂರ ವಲ್ಲದ ವಿಶಿಷ್ಟ ವಿಚಾರಗಳನ್ನು ಕಲೆಹಾಕುವುದು ನಿಜಕ್ಕೂ ಶ್ರಮಸಾಧ್ಯ ಕಲೆ. ತಾಳ್ಮೆ ಹಾಗೂ ಚಿಂತನಶೀಲ ಕಲೆ ಬೇಕು. ಇವೆರಡೂ ಶ್ರೀಯುತರಿಗೆ ಒಲಿದು ಬಂದಿದೆ. ಪುಟ್ಟ ಕಾದಂಬರಿಯ ರೀತ್ಯ ರೂಪು ತಾಳಿ ಮಕ್ಕಳಿಂದ ಹಿಡಿದು ಪಂಡಿತರ ವರೆಗೆ ಮನೋಜ್ಞವೆನಿಸುವಂತೆ ಮೂಡಿಬಂದಿದೆ. ಭಾಷೆಯ ಓಟ ಕುಂಟದೆ, ಕುಲುಕದೆ ನೇರದ ದಾರಿಯಲ್ಲಿ ಗಂಭೀರವಾಗಿ ಸಾಗಿದೆ.

ಉದಾಹರಣೆಗೆ—

"........ಐಹೊಳೆ ಆಗ ಆರ್ಯಪುರವೆಂಬ ಹೆಸರಿನಿಂದ ಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತು. ಬೆಣ್ಣಮ ಸೋಮಯಾಜಿಗಳು ಅಲ್ಲಿನ ವಿದ್ಯಾಪತಿಗಳಾಗಿದ್ದರು. ರಾಜಮಾತೆಯ ಆಂತರ್ಯದ ಕಳಕಳಿಯನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದ ಆಚಾರ್ಯರು ಮಕ್ಕಳ ವಿದ್ಯಾಭ್ಯಾಸದ ಹೊಣೆಯ ಜೊತೆಗೆ ರಕ್ಷಣೆಯ ಹೊಣೆಯನ್ನೂ ಹೊತ್ತರು. ಹೊತ್ತದ್ದೇ ಅಲ್ಲದೆ ಚೆನ್ನಾಗಿ ನಿರ್ವಹಿಸಿದರು".

(ಪುಟ 11).

ವಾಕ್ಯ-ವಾಕ್ಯಗಳ ಹೊಂದಾಣಿಕೆಯಲ್ಲಿ ಅಂದದ ಅನ್ಯೋನ್ಯತೆ. ಎಲ್ಲೂ ವಾಕ್ಯಗಳ ಸರಪಳಿಯ ಕೊಂಡಿ ಕಳಚಿಲ್ಲ. ಶ್ರೀಯುತರ ಸಾಹಿತ್ಯದಲ್ಲಿ ಜೀವಂತ ಚಿತ್ರಣ ಸಮೃದ್ಧಿಗೊಂಡಿದೆ. ಕಥೆಯ ವಸ್ತು ಕಣ್ಣಮುಂದೆ ಕಂಗೊಳಿಸುವಂತಿದೆ. ಪುಲಿಕೇಶಿ ಐಹೊಳೆಯಲ್ಲಿ ವಿದ್ಯೆ ಕಲಿತು ರಾಜಧಾನಿಗೆ ಹಿಂದಿರುಗಿದಾಗ—

"ರಸ್ತೆಯುದ್ದಕ್ಕೂ ನಿಂತಿದ್ದ ಜನ ಅತ್ಯುತ್ಸಾಹದಿಂದ ಪುಲಿಕೇಶಿಗೆ ಜಯಜಯಕಾರ ಮಾಡಿದರು. ಹೂಮಳೆಗರೆದರು........ಪುಲಿಕೇಶಿಯನ್ನು ಸ್ವಾಗತಿಸುವಾಗ ಜನರ ಸಂಭ್ರಮ, ಹರ್ಷ ಕಂಡು ಮಂಗಳೇಶನ ಹೃದಯ ತಲ್ಲಣಿಸಿತು. ಮಲತಾಯಿಯ ಅಭಿಪ್ರಾಯವನ್ನು ಚೆನ್ನಾಗಿ ಅರಿತಿದ್ದ ಮಂಗಳೇಶ ಕೂಡಲೇ ಒಂದು ನಾಟಕ ಆಡಿದ. ಎಲ್ಲ ಸಭಿಕರ ಮುಂದೆ ಪುಲಿಕೇಶಿಯನ್ನು ಆಲಂಗಿಸಿ, ಕಣ್ಣಲ್ಲಿ ಸಂತೋಷ ತುಳುಕಿಸಿ ರಾಜಮಾತೆಯ ಬಳಿಗೆ ನಿಧಾನವಾಗಿ ನಡೆದುಹೋದ. ಅವಳ ಪಾದ ಮುಟ್ಟಿ ನಮಸ್ಕರಿಸಿ, ಪಾದಧೂಳನ್ನು ಹಣೆಗೆ ಹಚ್ಚಿಕೊಂಡು ನಮ್ರನಾಗಿ, ಅಂಜಲಿಬದ್ಧನಾಗಿ ನಿಂತು ನುಡಿದ........"

ಸರಳಸುಂದರ ಶಬ್ದಗಳಲ್ಲಿ ವಿಚಾರ ಜೀವಂತಗೊಂಡು ಹಿಂದಿನ ಐತಿಹಾಸಿಕ ನೆನಪನ್ನು ವಾಚಕರು ಮೃದುವಾಗಿ ಮೆಲುಕಾಡುವಂತೆ ಮಾಡಿದೆ. ಲೇಖಕರ ಈ ತಾಂತ್ರಿಕತೆ ಮೆಚ್ಚುವಂತಹುದು.

ಪಾತ್ರನಿರ್ವಹಣೆಯಲ್ಲೂ ಲೇಖಕರ ತಜ್ಞತೆ ತಲೆದೂಗುವಂತಹುದು. ನಾಯಕನಿಗೆ ಚರಿತ್ರಚಿತ್ರಣದಲ್ಲಿ ಎಷ್ಟೊಂದು ಬೆಲೆ ಕೊಡಬಹುದೋ ಅಷ್ಟೇ ಬೆಲೆಯನ್ನು ಖಳನಾಯಕನ ಪಾತ್ರ ನಿರ್ವಹಣೆಯಲ್ಲೂ ನೀಡಿದ್ದಾರೆ. ರಾಜಮಾತೆ ದುರ್ಲಭಾದೇವಿಯ ಮಲಮಗನಾದ ಮಂಗಳೇಶನ ಪಾತ್ರದಲ್ಲಿ ಮೇಲ್ಕಂಡ ವಿಚಾರ ವಿದಿತಗೊಂಡಿದೆ. ಜೊತೆಗೆ ಸರಳವಾದ ಭಾಷೆ,ಜನಬಳಕೆಯ ಶಬ್ದ ಹಾಗೂ ಸುಂದರ

ಸುಲಲಿತ ಶೈಲಿ ಸಾಮಾನ್ಯವಾಗಿ ಲೇಖಕರ ಎಲ್ಲಾ ಕೃತಿಗಳಲ್ಲೂ ಗಮನಿಸಬಹುದಾದ ಒಂದು ಅಗ್ಗಳಿಕೆಯ ವಿಚಾರ.

ಚರಿತ್ರಚಿತ್ರಣ ಸಾಮಾನ್ಯವಾಗಿ ಮೂರು ರೀತಿಯಲ್ಲಿ ನಿರ್ವಹಿಸಲ್ಪಡುತ್ತದೆ.

1) ಪಾತ್ರಧಾರಿಯ ಮಾತಿನಲ್ಲಿ

2) ಬೇರೆಯ ಪಾತ್ರಧಾರಿಯ ಮಾತಿನಲ್ಲಿ

3) ಕತೆಗಾರನೇ ಒಮ್ಮೊಮ್ಮೆ ಮಾಡಿ ಮುಗಿಸುವುದೂ ಉಂಟು.

ಈ ಮೂರು ವಿಧಾನವನ್ನು ಲೇಖಕರು ಸಾಂದರ್ಭಿಕವಾಗಿ ಸಮಂಜಸ ರೀತಿಯಲ್ಲಿ ಅಳವಡಿಸಿಕೊಂಡಿದ್ದಾರೆ.

ಮಂಗಳೇಶನು ಕುತಂತ್ರದಿಂದ ರಾಜ್ಯದ ಐಕ್ಯತೆಗೆ ಧಕ್ಕೆ ತಂದಾಗ ಪುಲಿಕೇಶಿ ಹೇಳಿದ ಮಾತು "ನನಗೆ ರಾಜ್ಯ ಬೇಡ, ನಾನು ರಾಜ್ಯವನ್ನೇ ಬಿಟ್ಟು ಹೋಗುತ್ತೇನೆ" ನಿಜಕ್ಕೂ ಅವನ ನಿಸ್ವಾರ್ಥ-ನಿಷ್ಕಳಂಕ ಮನೋಭಾವವನ್ನು ರಾಜ್ಯೋನ್ನತಿಯ ಬಗೆಗಿನ ಈ ಮಾತು ಅರುಹುತ್ತದೆ. ಇಲ್ಲಿ ಪಾತ್ರಧಾರಿಯ ಮಾತಿನಲ್ಲೇ ಅವನ ಚರಿತ್ರಚಿತ್ರಣ ಕಂಡುಬಂದಿದೆ.

"ಪುಲಿಕೇಶಿ ಸಾರ್ವಭೌಮರೇ, ನಿಮ್ಮ ಸೌಜನ್ಯ ನನ್ನ ಕಣ್ಣನ್ನು ತೆರೆಸಿತು. ನಿಮ್ಮ ಶೌರ್ಯ, ಸೌಜನ್ಯದ ಬಗ್ಗೆ ಕೇಳಿದ್ದೆ. ಈ ಯುದ್ಧದಲ್ಲಿ ನಿಮ್ಮ ಶೌರ್ಯದ ದರ್ಶನ ಆಯಿತು. ನೀವು ನನ್ನನ್ನು ಯುದ್ಧದಲ್ಲೇ ಅಲ್ಲ, ಮನಸ್ಸಿನಿಂದಲೂ ಗೆದ್ದಿದ್ದೀರಿ. ಇಂದಿನಿಂದ ನೀವು ದಕ್ಷಿಣಾಪಥೇಶ್ವರ." ಈ ಉಲ್ಲೇಖನದಲ್ಲಿ ಬೇರೆಯ ಪಾತ್ರಧಾರಿಯ ಬಾಯಿಂದ ಪುಲಿಕೇಶಿಯ ಚರಿತ್ರಚಿತ್ರಣ ಕಂಡುಬಂದಿದೆ.

(ಪುಟ 2)

ಲೇಖಕರೇ ನಾಯಕನ ಚರಿತ್ರಚಿತ್ರಣವನ್ನೂ ಮಾಡಿರುವುದಕ್ಕೆ ನಿದರ್ಶನ ಇದೆ– "ಪುಲಿಕೇಶಿ ನಾಡನ್ನು ಬಿಟ್ಟು ಹೊರಟ. ವಿಷ್ಣುವರ್ಧನ ರಾಜನಾದ. ಆದರೆ ಪುಲಿಕೇಶಿಯಿಂದ ಸಿಂಹಾಸನ ಕಿತ್ತುಕೊಂಡ ಮಾತ್ರಕ್ಕೇ ಪುಲಿಕೇಶಿಯ ಯೋಗ್ಯತೆ ಬಂದೀತೇ ?"

ಅರ್ಥಗರ್ಭಿತವಾದ ಮುತ್ತಿನಂತಹ ಮಾತುಗಳು, ಒಳ್ನುಡಿಗಳು ಅಲ್ಲಲ್ಲಿ ಮೂಡಿಬಂದು ಕೃತಿಗೆ ಹತ್ತುಕಟ್ಟುವ ಕಡೆ ಒಂದು "ಮುತ್ತು ಕಟ್ಟು" ಎಂಬಂತೆ ಶೋಭಿಸಿವೆ.

ಉದಾಹರಣೆಗೆ—

1) ಪುಲಿಕೇಶಿ ತಮ್ಮನಿಗೆ ಹೇಳಿದ ಮಾತು–"ಈಗಲಾದರೂ ನಿನ್ನ ಅವಿವೇಕವನ್ನು ಬಿಡು, ಅಣ್ಣ ತಮ್ಮಂದಿರು ಸಂತೋಷವಾಗಿ ಬಾಳೋಣ"

"ಆಸೆಗಳು ಮನಸ್ಸನ್ನು ಮುಟ್ಟಿದರೆ ಗೆದ್ದಲಿನಂತೆ ಅದರ ಒಳ್ಳೆಯತನವನ್ನು ಹಾಳುಮಾಡಿಬಿಡುತ್ತದೆ"

ವೀರೋಚಿತ ಸಂಭಾಷಣೆ ಕೃತಿಗೆ ಕಳೆ ನೀಡಿದೆ–ಪ್ರಾರಂಭದಲ್ಲಿಯೇ ಮೊದಲಾಗುವ ಈ ಸಂಭಾಷಣೆಯ ಸರಣಿ ಹೀಗಿದೆ—

ಹರ್ಷವರ್ಧನನ ಪಾಳಯದಿಂದ ಹೊರಟ ರಥವೊಂದು ನಿಧಾನವಾಗಿ ಬಂದು ಪುಲಿಕೇಶಿಯ ಬಿಡಾರದ ಬಳಿ ನಿಲ್ಲುತ್ತದೆ. ಸಾರ್ವಭೌಮ ಪುಲಿಕೇಶಿ ಆಸನದಿಂದೆದ್ದು ಹಸನ್ಮುಖನಾಗಿ ಸ್ವಾಗತಿಸಲು ಮುಂದೆ ಬರುತ್ತಾನೆ.

"ಹರ್ಷಚಕ್ರವರ್ತಿಗಳಿಗೆ ಸುಸ್ವಾಗತ"

........................

"ಪುಲಿಕೇಶಿ ಸಾರ್ವಭೌಮರೇ, ನಿಮ್ಮ ಶೌರ್ಯ-ಸೌಜನ್ಯದ ಬಗ್ಗೆ ಕೇಳಿದ್ದೆ. ಈ ಯುದ್ಧದಲ್ಲಿ ಅದರ ದರ್ಶನ ಆಯಿತು. ನೀವು ನನ್ನನ್ನು ಯುದ್ಧದಲ್ಲಿ ಅಲ್ಲ, ಮನಸ್ಸಿನಿಂದಲೂ ಗೆದ್ದಿದ್ದೀರಿ"

"ಉತ್ತರಾಪಥೇಶ್ವರ ಸಾಮ್ರಾಟ್ ಹರ್ಷವರ್ಧನರ ಸ್ನೇಹ ಹಸ್ತವನ್ನು ನಾವು ಅಭಿಮಾನದಿಂದ ಸ್ವೀಕರಿಸುತ್ತೇವೆ ಮತ್ತು ಇದನ್ನು ಚಿರವಾಗಿ ಉಳಿಸಬಯಸುತ್ತೇವೆ.

ಕಥಾವಸ್ತುವಿನಲ್ಲಿ ಶಬ್ದಶಕ್ತಿಗೆ ಅಪಾರ ಮೌಲ್ಯವಿರುತ್ತದೆ. ಇಂತಹ ಶಕ್ತಿಯನ್ನು ಶಬ್ದಗಳಲ್ಲಿ ತುಂಬುವುದರಲ್ಲಿ ಶ್ರೀನಿವಾಸರಾಯರ ಲೇಖನಿ ಪಳಗಿ, ಪಕ್ವವೆನಿಸಿದೆ.

ಉದಾಹರಣೆಗೆ—

"ಝಣಝಣ ಸರಪಣಿಯ ಸದ್ದಿನಲ್ಲಿ, ಬಿಚ್ಚುಕತ್ತಿಯ ಪಹರೆಯವರ ಮಧ್ಯೆ ತಲೆತಗ್ಗಿಸಿ ಸಭೆಯ ಮುಂದೆ ಬಂದುನಿಂತ ವಿಷ್ಣುವರ್ಧನ"

ಭಾವಪರವಶತೆಗೂ ಕೃತಿಯಲ್ಲಿ ಕೊರತೆಯಿಲ್ಲ.

ಉದಾಹರಣೆಗೆ—

ವಿಷ್ಣುವರ್ಧನನ ಮಹಾಪರಾಧವನ್ನು ಔದಾರ್ಯದಿಂದ ಪುಲಿಕೇಶಿ ಕ್ಷಮಿಸಿದಾಗ ವಿಷ್ಣುವರ್ಧನನ ಬಾಯಿಂದ ಬರುವ ಮಾತು--"ಅಣ್ಣಾ, ನನ್ನನ್ನು ಕ್ಷಮಿಸು"

ವಿಷ್ಣುವರ್ಧನ ಮಂಡಿ ಊರಿದ. ಪುಲಿಕೇಶಿ ಅವನನ್ನು ಹಿಡಿದೆತ್ತಿ ಆಲಿಂಗಿಸಿ, ಕಿರೀಟ ವನ್ನು ಆತನ ಮುಡಿಗೇರಿಸಿ, ಕತ್ತಿಯನ್ನು ಕೈಗಿತ್ತು "ವೆಂಗಿಮಂಡಲ ರಾಜ" ಎಂದು ಘೋಷಿಸಿದ.

ವಿಷ್ಣುವರ್ಧನನ ಕಣ್ಣಲ್ಲಿ ನೀರು ತುಂಬಿ ಬಂತು. ಅವನ ಬಾಯಿಂದ ಮಾತೇ ಬಾರದಾಯಿತು"

ಹೀಗೆ ಸೋದರರಾದ ಶ್ರೀನಿವಾಸರಾಯರ ಕೃತಿಗಳಲ್ಲಿ ಬಿಂದುವಿನಲ್ಲಿ ಸಿಂಧು ವನ್ನು ತುಂಬಿಸುವ ಸಾಹಸವನ್ನು ಕೆಚ್ಚೆದೆಯೊಂದಿಗೆ ಪ್ರದರ್ಶಿಸಿರುವುದು ಕಂಡುಬರು ತ್ತದೆ. ಐತಿಹಾಸಿಕ ವೈಚಾರಿಕ ವೈಖರಿಯ ಬಗ್ಗೆ ಲೇಖಕರ ಮುನ್ನಡೆಯನ್ನು ಇವರ "ಪ್ರೌಢಪ್ರತಾಪ ವೀರರಾಜೇಂದ್ರ" ಕಾದಂಬರಿಯಲ್ಲಿ ಗುರುತಿಸಬಹುದು. ಒಟ್ಟಿನಲ್ಲಿ ಇವರ ಸಾಹಿತ್ಯ ಕೃಷಿ ಸಾಧಾರಣ ಜನರಿಂದ ಹಿಡಿದು ಪಂಡಿತರ ಹೃದಯದವರೆಗೆ ಸರ್ವರ ಬಾಗಿಲನ್ನೂ ತಟ್ಟುತ್ತದೆ.



# ಹಸಿರು ಮಂಟಪ

—ವಿ. ಎಂ. ಇನಾಂದಾರ್

ಈಗಾಗಲೇ ಎರಡು ಕಾದಂಬರಿಗಳನ್ನು ಒಂದು ಕಥಾ ಸಂಕಲನವನ್ನಲ್ಲದೆ ಕನ್ನಡದಲ್ಲಿಯ ಹೆಸರುವಾಸಿಯಾದ ಅನೇಕ ನಿಯತಕಾಲಿಕೆಗಳಲ್ಲಿ ಎಪ್ಪತ್ತೈದಕ್ಕೂ ಮಿಕ್ಕಿ ಕಥೆಗಳನ್ನು ಪ್ರಕಟಿಸಿರುವ ಶ್ರೀನಿವಾಸರಾಯರು ವಾಚಕ ವರ್ಗಕ್ಕೆ ಅಪರಿಚಿತರೇನೂ ಅಲ್ಲ. ಓದುಗರು ಅವರ ಕಥೆಗಳನ್ನು ಮೆಚ್ಚಿದ್ದಾರೆ. "ಕನ್ಯಾದಾನ" ಎಂಬ ಅವರ ಕಾದಂಬರಿಯ ಎರಡನೆಯ ಮುದ್ರಣ ಬರಲಿದೆ. ಬೇರೆ ಲೇಖನಗಳ ಜೊತೆಯಲ್ಲಿ ಆಕಾಶವಾಣಿಗಾಗಿ ಪ್ರಸಾರ ನಾಟಕಗಳನ್ನು ಬರೆದಿದ್ದಾರೆ. ಈ ಕಾದಂಬರಿಯಲ್ಲದೆ ಇನ್ನೆರಡು ಕಾದಂಬರಿಗಳೂ ಪ್ರಕಟನೆಗೆ ಸಿದ್ಧವಾಗಿವೆ. ಹೀಗಿರುವಾಗ ನನ್ನ ಈ ಎರಡು ಮಾತುಗಳಿಂದ ಇಲ್ಲಿನ ಯುವಕ ಲೇಖಕರ ಪರಿಚಯ ನಡೆಯಬೇಕಾದ ಸಂದರ್ಭವಿಲ್ಲ. ಆದರೂ ಅದಾವುದೋ ಒಂದು ಬಗೆಯ ಅನಿಮಿತ್ತ ಸ್ನೇಹದ ಫಲವಾಗಿ ನಾನು ಈ ಕಾದಂಬರಿಯನ್ನು ಕನ್ನಡಿಗರ ಮುಂದಿಡುವ ಕೆಲಸದಲ್ಲಿ ಸಹಕರಿಸಬೇಕು ಎಂದು ಬಯಸಿದ್ದಾರೆ. ಆದ್ದರಿಂದ ಅವರು ತೋರಿದ ಅಭಿಮಾನಕ್ಕೆ ಪ್ರತಿಯಾಗಿ ಸ್ನೇಹದ, ಉತ್ತೇಜನದ, ಎರಡು ಮಾತುಗಳನ್ನು ನಾನು ಇಲ್ಲಿ ಹೇಳುತ್ತಿದ್ದೇನೆಯೇ ಹೊರತು ಇದೊಂದು ಮುನ್ನುಡಿಯೂ ಅಲ್ಲ. ವಿಮರ್ಶೆಯಂತೂ ಅಲ್ಲವೇ ಅಲ್ಲ. ಮುನ್ನುಡಿ ವಿಮರ್ಶೆಯಾಗಿರಬೇಕಾದದ್ದೂ ಇಲ್ಲ. ತಾಂತ್ರಿಕವಾದ ಒಂದು ಉದ್ಯೋಗದಲ್ಲಿದ್ದರೂ ಅವರು ಇಷ್ಟೊಂದು ಬರಹವನ್ನು ಮುಂದುವರಿಸಿಕೊಂಡು ಹೋಗುತ್ತಿರುವಾಗ ತಮ್ಮ ಒಳ ಪ್ರೇರಣೆಗಿಂತ ಬೇರೆಯಾದ ಉತ್ತೇಜನದ ಅಗತ್ಯವೂ ಅವರಿಗೆ ನಿಜವಾಗಿ ಇಲ್ಲ. ಬರೆಯಬೇಕೆಂಬ ಆಸೆಯಿದೆ. ಚೆನ್ನಾಗಿ ಬರೆಯಬೇಕೆಂಬ ಅಭಿಲಾಷೆ ಇದೆ. ಅದಕ್ಕೆ ಸರಿಸಮನಾದ ಯತ್ನ ಬುದ್ಧಿಯೂ ಇದೆ. ಈ ಮೂರು ಶ್ರೀನಿವಾಸರಾಯರ ಬರವಣಿಗೆಯ ಬಗೆಯಲ್ಲಿ ಭರವಸೆಯನ್ನು ಮೂಡಿಸುತ್ತವೆ.

ಹೇಳಿಕೊಳ್ಳಬಹುದಾದ ಅನುಕೂಲಗಳಿಲ್ಲದಿದ್ದರೂ ಗೌರವವಾಗಿ ಬಾಳಿ ಬೆಳೆಯಬೇಕೆಂಬ ಆಕಾಂಕ್ಷೆಗಾಗಿ ದುಡಿದು, ದಣಿದು, ಒಂದು ದೃಷ್ಟಿಯಿಂದ ಸೋಲಬೇಕಿರದಿದ್ದರೂ ಸೋತ ಒಂದು ಕುಟುಂಬದ ಕಷ್ಟದ ಕಥೆ "ಹಸಿರು ಮಂಟಪ". ತನ್ನ ಮಕ್ಕಳು ಸರಿಯಾಗಿ ಬೆಳೆದು ಬದುಕಿನಲ್ಲಿ ಸುಖವಾಗಿರಬೇಕೆಂಬ ಅಪೇಕ್ಷೆಯಿಂದಾಗಿ

ಒಬ್ಬ ತಾಯಿ ಪಡುವ ಪಾಡಿನ ಕಥೆ ಇಲ್ಲಿದೆ. ತಾನು ಪಟ್ಟ ಕಷ್ಟ ತನ್ನ ಮಕ್ಕಳಿಗಿರ ಬಾರದು, ಅಂಥ ಬವಣೆ ಅವರ ಪಾಲಿಗೆ ಬೇಡ–ಎನ್ನುವ ಮಾತ್ರ ಸಹಜವಾದ ಉದಾತ್ತಭಾವ ಇಲ್ಲಿ ಕೆಲಸ ಮಾಡುತ್ತದೆ. ಇದು ಆಕೆಯ ಹೃದಯದ ಔದಾರ್ಯ ವನ್ನು ಎತ್ತಿ ತೋರಿಸುವುದರ ಜೊತೆಗೆ ಕೆಲಮಟ್ಟಿಗೆ ನಿಜದ ಪರಿಸ್ಥಿತಿಯ ಅರಿವು ಬೆಳೆಯಬೇಕಾದ ಮಕ್ಕಳಿಂದ ಮರೆಮಾಚುವುದಕ್ಕೂ ಕಾರಣವಾಗುತ್ತದೆ. ಅವರ ಬದುಕು ಹಸಿರು ಮಂಟಪವಾಗಿರಲಿ ಎನ್ನುವ ತಾಯಿಯ ಅಪೇಕ್ಷೆ,ಅಪೇಕ್ಷೆಯಾಗಿಯೇ ಉಳಿಯುವುದು ಜೀವನದ ಒಂದು ವಿಪರ್ಯಾಸ. ಅಂಥ ಒಂದು ವಿಪರ್ಯಾಸ ನಾಲ್ಕಾರು ಬಗೆಯಾಗಿ ಬೆಳೆಯುವುದನ್ನು, ಬಾಳನ್ನು ಕಹಿಯಾಗಿಸುವುದನ್ನು, ಕಾದಂಬರಿಕಾರರು ತೋರಿಸುವ ಯತ್ನವನ್ನು ಇಲ್ಲಿ ಮಾಡಿದ್ದಾರೆ.

ಅನುಭವ ವಿಸ್ತರಿಸಿದ ಹಾಗೆ, ಜೀವನದ ಬಗೆಯಲ್ಲಿಯ ತಿಳಿವು ಆಲೋಚನೆಗಳು ಆಳವಾದ ಹಾಗೆ ಅದನ್ನು ನೋಡುವ, ತೋರಿಸುವ ನಮ್ಮ ಮನೋಧರ್ಮವೂ ತಿಳಿಯಾಗುತ್ತದೆ. ಬರಹದ ಮೂಲಕ ಒದಗಿಸಿದ ಚಿತ್ರ ಸಮಂಜಸವಾಗುತ್ತದೆ. ಆ ದಾರಿಯಲ್ಲಿ ಈ ಲೇಖಕರು ಮುನ್ನಡೆಯುವುದರಲ್ಲಿದ್ದಾರೆ ಎನ್ನುವ ಭರವಸೆಯನ್ನು ಈ ಕಾದಂಬರಿ ಕೊಡುತ್ತದೆ.



# ಸುಣ್ಣವಿಲ್ಲದ ವೀಳ್ಯ

—ಎಚ್. ವಿ. ನಾರಾಯಣ್

ಮೂವತ್ತೇಳು ವರ್ಷ ವಯಸ್ಸಿನ ಶ್ರೀ ಎಸ್. ವಿ. ಶ್ರೀನಿವಾಸರಾವ್ ತುಮಕೂರು ಜಿಲ್ಲೆಯ ಕನ್ನಡಿಗರು. ಸಾಹಿತಿಯು ಜನತೆಯ ಮನರಂಜನೆಗಾಗಿ ಮಾತ್ರವೇ ಅಲ್ಲದೆ ಅದನ್ನು ಮಾನವನ ಶಾಶ್ವತ ಸಾಮಗ್ರಿಯಾಗಿಯೂ ಆಗುವಂತೆ ಸಾಹಿತ್ಯ ರಚಿಸಲು ಪ್ರಯತ್ನಿಸಬೇಕೆಂದು ಗುರಿಹೊಂದಿ ತಮ್ಮ ಸಾಹಿತ್ಯ ಕೃಷಿಯನ್ನು ನಡೆಸುತ್ತಿರುವ ಉತ್ಸಾಹಿ ಲೇಖಕರು. ಕತೆ–ಕಾದಂಬರಿ-ಕರ್ತೃ.

ತುಮಕೂರಿನಲ್ಲಿ ವಿದ್ಯಾಭ್ಯಾಸ. ವಿದ್ಯಾಭ್ಯಾಸ ನಡೆಸುತ್ತಿದ್ದ ವೇಳೆಯಲ್ಲಿಯೇ ಜೊತೆ ಜೊತೆಗೆ ಕನ್ನಡ ಸಾಹಿತ್ಯದ ಪರಿಚಯ. ಶಿವರಾಮ ಕಾರಂತರ ಕೃತಿಗಳು ಮನಸ್ಸನ್ನು ಸೂರೆಗೊಂಡವು. ಅವುಗಳಲ್ಲಿನ ಸಹಜಜೀವನ ಚಿತ್ರಣ ಮತ್ತು ಮಾನವ ಜಾತಿಗೆ ಸಾಮಾನ್ಯವಾದ ಹೃದಯಾವೇಗ ಮತ್ತು ಜೀವನದ ಮಾರ್ಮಿಕ ವಿಷಯ ನಿರೂಪಣೆ ಅಚ್ಚಳಿಯದ ಮೆಚ್ಚುಗೆಯನ್ನುಂಟುಮಾಡಿದವು. ಅ.ನ.ಕೃ. ಅವರ ಕೃತಿಗಳ ಶೈಲಿ, ದೃಢತೆ ಮತ್ತು ಸರಾಗ ಇಷ್ಟವಾಯಿತು.

ತುಮಕೂರಿನ ಆರ್ಯನ್ ಹೈಸ್ಕೂಲಿನ ಕನ್ನಡ ಸಂಘದ ಉತ್ಸಾಹಿ ಸದಸ್ಯರಾಗಿ ಬಹುಮುಖ ಕಾರ್ಯಕ್ರಮಗಳಲ್ಲಿ ದುಡಿದರು. ಕುಳಿತಲ್ಲಿ ಕುಳಿತು ಸಣ್ಣ ಕತೆ ರಚಿಸುವ ಕಥಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಗಳಿಸಿದರು. ಎಲ್ಲಿ ಸ್ಪರ್ಧೆ ನಡೆದರೆ ಅಲ್ಲಿ ಇವರು. ಒಂದಲ್ಲ ಒಂದು ಬಹುಮಾನ ಇವರದಾಗುತ್ತಿತ್ತು.

ತಮ್ಮ ಅನುಭವಕ್ಕೆ ಬಂದ ಸುಖ-ದುಃಖ ಮತ್ತು ಕಲ್ಪನೆಗಳನ್ನು ಉಪಯುಕ್ತವಾಗಿ ವ್ಯಕ್ತಪಡಿಸಿ ಸಹಮಾನವನಲ್ಲಿ ವ್ಯಕ್ತಪಡಿಸಿಕೊಳ್ಳಲು ಸಾಹಿತ್ಯ ತಕ್ಕ ಸಾಧನ. ಭಾಷಾ ಪ್ರಾವೀಣ್ಯ ಅದಕ್ಕೆ ಅತ್ಯಾವಶ್ಯಕ ಎಂಬುದನ್ನು ಚೆನ್ನಾಗಿ ಕಂಡುಕೊಂಡ ಇವರು ಕನ್ನಡದ ಶಾಸ್ತ್ರೀಯ ಗ್ರಂಥಗಳನ್ನು ತಿರುವಿಹಾಕಿದರು. ದಿಗಂತ ಸಾಹಿತ್ಯ ಪರಿಚಯವನ್ನು ಪಡೆದುಕೊಂಡರು. ರಾಷ್ಟ್ರಭಾಷಾ ವಿಶಾರದರಾಗಿ ಹಿಂದಿಯಲ್ಲಿನ ಸಾಹಿತ್ಯ ರುಚಿ ಕಂಡರು. ಬಿ.ಎಸ್.ಸಿ. ಮುಗಿಸಿ ಬೆಂಗಳೂರಿಗೆ ಬಂದು ಎ.ಎಂ.ಐ.ಇ.ಗೆ ವಿದ್ಯಾಭ್ಯಾಸ ಮುಂದುವರಿಸಿದರು. ಕೆಲಸಕ್ಕೆ ಸೇರಿದುದು ಚೀಫ್ ಇನ್‌ಸ್ಪೆಕ್ಟೊರೇಟ್ ಆಫ್ ಎಲೆಕ್ಟ್ರಾನಿಕ್ಸ್. ಇದು ನಮ್ಮ ದೇಶದ ರಕ್ಷಣಾ ವಿಭಾಗಕ್ಕೆ ಸೇರಿದೆ. ಅನೇಕ ಪತ್ರಿಕೆಗಳಲ್ಲಿ ಇವರ ಲೇಖನಗಳು ಮತ್ತು ಕಥೆಗಳು ಪ್ರಕಟವಾದವು.

ಐದು ವರ್ಷಗಳಲ್ಲಿ ಮಹಾನಗರ ಬೊಂಬಾಯಿಗೆ ವರ್ಗವಾಯಿತು. ಅಲ್ಲಿದ್ದ ಆರು ವರ್ಷಗಳಲ್ಲಿ ಕಣ್ತೆರೆದು ನೋಡಿ ಕಿವಿತೆರೆದು ಕೇಳಿ ಅನುಭವ ಬೆಳೆಸಿಕೊಂಡರು, ದೂರವಾದರೇನು, ಸುಮ್ಮನಿರುವುದು ಜೀತನವಲ್ಲ. ಅಲ್ಲಿ ಮಾತುಂಗ ಕನ್ನಡ ಸಂಘ, ಭಾಂಡುಪ್ ಕನ್ನಡ ಸಂಘಗಳಲ್ಲಿ ಸದಸ್ಯರಾಗಿ ಕನ್ನಡ ಚಟುವಟಿಕೆಗಳಿಗೆ ಚೇತನ ತಂದರು. ರಷ್ಯನ್ ಭಾಷೆ ಕಲಿತರು.

ಶ್ರೀ ಎಸ್. ವಿ. ಶ್ರೀನಿವಾಸರಾಯರ "ಗಾಳಿ ಮೋಡದ ಗೆಳತಿ" ಪ್ರಕಟವಾದ ಮೊದಲ ಕಥಾಸಂಕಲನ. ಇದು ವಿವಿಧ ಚಿತ್ರಗಳನ್ನೊಳಗೊಂಡ ಆರ್ಟ್ ಗ್ಯಾಲರಿ ಯಂತಿದೆ. ಪ್ರಕಟಗೊಂಡ ಮೊದಲ ಕಾದಂಬರಿ "ಕನ್ಯಾದಾನ". ವಿವಾಹ ವ್ಯವಸ್ಥೆಯ ಅವ್ಯವಸ್ಥೆ ಮತ್ತು ತೊಡಕುಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿತು. "ಕತೆಗಾರ" ದಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ ನಂತರ ಪುಸ್ತಕ ರೂಪದಲ್ಲಿ ಬಂದ "ಮಣ್ಣಿನ ಮಗ" ಸ್ವಂತವಾಗಿ ಕೃಷಿಯನ್ನು ಸಾಗಿಸಲು ಧೈರ್ಯ ಮಾಡಿ ಹೊಸತನದ ಹಂತ ವನ್ನೇರಿದ ಹಳ್ಳಿಗನ ಜೀವನ ಕತೆ. "ಹಸಿರು ಮಂಟಪ" ಕಾದಂಬರಿ, ಜೀವನದಲ್ಲಿ ಸದಾ ಹಸಿರನ್ನು ರೂಪಿಸಿಕೊಳ್ಳಲಾರೆಸೆ ಎಂದು ತೊಳಲಿದ ಏಕಾಕಿಸಿಯ ಬಗ್ಗೆ ಹೃದಯ ಸ್ಪರ್ಶಿಚಿತ್ರಣ. "ಕಾಡ ಬೆಳದಿಂಗಳು" ಕಾದಂಬರಿಯಲ್ಲಿ ಇಂದಿನ ಮನುಷ್ಯನ ಆಸೆ ಆಕಾಂಕ್ಷೆಗಳು ಮತ್ತು ಬದುಕಿನ ಹೋರಾಟವನ್ನು ಪ್ರಬಲಸನ್ನಿವೇಶಗಳಿಂದ ಕೂಡಿಸಿದ್ದಾರೆ.

ಶ್ರೀ ಎಸ್. ವಿ. ಶ್ರೀನಿವಾಸರಾಯರಿಗೆ ಹಿರಿಯ ಸಾಹಿತಿಗಳಲ್ಲಿ ಅಪಾರ ಗೌರವ. ಹಾಗೆಯೇ ತರುಣ ಸಾಹಿತಿಗಳ ಬಗ್ಗೆ ಬಹಳ ಹೆಮ್ಮೆ. ಅವರಲ್ಲಿ ಉತ್ಸಾಹವಿದೆ. ರಚನಾ ವೈವಿಧ್ಯತೆಯಿದೆ. ಮತ್ತು ಪ್ರಯೋಗಶೀಲತೆಯಿದೆ ಎಂದು ಸಂತಸದಿಂದ ಹೇಳುತ್ತಾರೆ.

ತಾವು ಬರೆದುದು ಓದುಗರ ಮನದಲ್ಲಿ ರಂಜನೆಯೊಂದಿಗೆ ಆಳವಾಗಿ ನಿಲ್ಲಬೇಕು. ಅವನಲ್ಲಿ ಹೊಸ ಶಕ್ತಿ ಮತ್ತು ಉತ್ಸಾಹವನ್ನು ಮೂಡಿಸಬೇಕು ಎನ್ನುತ್ತಾರೆ ಈ ಉತ್ಸಾಹೀ ಲೇಖಕ. "ಸುಣ್ಣವಿಲ್ಲದ ವೀಳ್ಯ" ಅನಾಥಾಶ್ರಮದಿಂದ ಬಂದ ಒಬ್ಬ ಮನುಷ್ಯ ನಿಜವಾದ ಅರ್ಥದಲ್ಲಿ ಮನುಷ್ಯನಾಗಿ ಬದುಕಲು ಹೊರಬಂದು ಯುದ್ಧರಂಗದಲ್ಲಿ ಹೋರಾಡುವಂತೆ ಹೋರಾಡಿದ ಶಕ್ತಿಪೂರ್ಣ ಕತೆಯನ್ನು ಹೇಳು ತ್ತದೆ.



# ಒರಿಯಾ ಕಥೆಗಳು

—ಎಚ್. ಎಸ್. ಪಾರ್ವತಿ

ಭಾಷಾಂತರ, ಅನುವಾದ, ತರ್ಜುಮೆ—ಶಬ್ದ ಯಾವುದೇ ಇರಲಿ, ಒಂದು ಭಾಷೆಯ ಕೃತಿಯನ್ನು ಇನ್ನೊಂದು ಭಾಷೆಗೆ ತರುವ ಕಾರ್ಯ ಅನೇಕ ವರ್ಷಗಳಿಂದ ನಡೆದು ಬಂದಿದೆ.

ಒಂದು ಭಾಷೆಯ ಬೆಳವಣಿಗೆಗೆ, ಬೇರೆ ಭಾಷೆಗಳ ಸಾಹಿತ್ಯ, ಸಂಸ್ಕೃತಿಗಳ ಪರಿಚಯಕ್ಕೆ ಈ ಅನುವಾದ ಕಾರ್ಯ ಅನಿವಾರ್ಯ. ಆದರೆ ಭಾಷಾಂತರಕಾರರಿಗೆ ಸಲ್ಲಬೇಕಾದಷ್ಟು ಮಾನ್ಯತೆ ಸಂದಿದೆಯೇ ಎಂದರೆ, 'ಹೌದು' ಎಂದು ನಿಶ್ಚಿತವಾಗಿ ಹೇಳುವುದು ಸಾಧ್ಯವಿಲ್ಲ. ಸ್ವಂತ ಸೃಜನಶಕ್ತಿ ಇಲ್ಲದವರು ಮಾತ್ರ ಅನುವಾದಕ ರಾಗುತ್ತಾರೆ ಎಂದು ಮೂದಲಿಸುವವರೂ ಇದ್ದಾರೆ. ಎಂಥ ಒಳ್ಳೆ ಭಾಷಾಂತರಕಾರ ನಾದರೂ ಮೂಲಭಾಷೆಯ ಸತ್ತ್ವವನ್ನು ಅನುವಾದದಲ್ಲಿ ಹಿಡಿದಿಡಲಾರ ಎನ್ನುವ ನಂಬಿಕೆಯೂ ಇದೆ.

ಯಾರು ಏನೇ ಹೇಳಲಿ ಎಲ್ಲರೂ ಎಲ್ಲ ಭಾಷೆಗಳನ್ನೂ ಕಲಿಯುವುದು ಸಾಧ್ಯ ವಿಲ್ಲವಾದ್ದರಿಂದ ಎಲ್ಲ ದೇಶಗಳಲ್ಲೂ, ಎಲ್ಲ ಕಾಲದಲ್ಲೂ ಅನುವಾದದ ಕೆಲಸ ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಭಾರತದಂತಹ ಬಹು ಭಾಷಾ ರಾಷ್ಟ್ರ ದಲ್ಲಂತೂ ಒಂದು ಭಾಷೆಯವರು ಇನ್ನೊಂದು ಭಾಷೆಯವರನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕಾದರೆ ಅನುವಾದ ಅಗತ್ಯವೂ ಹೌದು.

ಒಂದು ಮಾತು ನಿಜ. ಅನೇಕರು ಭಾವಿಸಿರುವಂತೆ ಅನುವಾದ ಕಾರ್ಯ ಸುಲಭವೇನಲ್ಲ. ಶಬ್ದಕ್ಕೆ ಬದಲು ಶಬ್ದವನ್ನಿಟ್ಟು ಬಿಟ್ಟರೆ ಅನುವಾದ ಯಶಸ್ವಿ ಯಾಗಲಾರದು. ಮೂಲಭಾಷೆಯ ಆಶಯವನ್ನು ಅರ್ಥ ಮಾಡಿಕೊಂಡು, ಅಲ್ಲಿನ ನುಡಿಕಟ್ಟನ್ನು, ಲೋಕೋಕ್ತಿಗಳನ್ನು ಅದು ಇದ್ದಂತೆಯೇ ಅನುವಾದಿಸದೆ ಅವುಗಳಿಗೆ ಸಮಾನಾಂತರವಾದ ನುಡಿಕಟ್ಟನ್ನು, ಗಾದೆಗಳನ್ನು ಬಳಸಿದಾಗ ಮಾತ್ರ ಅದು ಯಶಸ್ವೀ ಭಾಷಾಂತರ ಎನ್ನಿಸಿಕೊಳ್ಳಬಲ್ಲುದು. ಎಲ್ಲದಕ್ಕಿಂತ ಮುಖ್ಯವಾಗಿ ತನ್ನ ಭಾಷೆಯಲ್ಲಿ ಸೃಜನಾತ್ಮಕ ಬರವಣಿಗೆಯನ್ನು ರಚಿಸಬಲ್ಲವನು ಮಾತ್ರ ಒಳ್ಳೆಯ ಭಾಷಾಂತರಕಾರ ಆಗಬಲ್ಲ ಎನ್ನುವುದನ್ನು ಮರೆಯುವಂತಿಲ್ಲ.

ನಮ್ಮ ದೇಶದ ಅನೇಕ ಕೊರತೆಗಳಲ್ಲಿ ಒಂದು, ದೇಶದ ಎಲ್ಲ ಭಾಗದ ಜನರಿಗೂ ತಮ್ಮ ನೆರೆರಾಜ್ಯದ ಭಾಷೆ, ಸಾಹಿತ್ಯಗಳ ಪರಿಚಯಕ್ಕಿಂತ ಇಂಗ್ಲೀಷಿನ ಹಾಗೂ ಅದರ ಮೂಲಕ ಪ್ರಪಂಚದ ಇತರ ಭಾಷೆಗಳ ಪರಿಚಯುವೇ ಹೆಚ್ಚಾಗಿರುವುದು. ಈ ಕೊರತೆಯನ್ನು ನಿವಾರಿಸಲೆಂದೇ ಕೇಂದ್ರ ಸಾಹಿತ್ಯ ಅಕಾಡೆಮಿ, ನ್ಯಾಷನಲ್ ಬುಕ್ ಟ್ರಸ್ಟ್ ಮುಂತಾದ ಸಂಸ್ಥೆಗಳು ದೇಶೀಯ ಭಾಷೆಗಳ ಸಾಹಿತ್ಯದ ಅನುವಾದ ಕಾರ್ಯವನ್ನೇ ತಮ್ಮ ಮುಖ್ಯ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿವೆ. ಈ ಯೋಜನೆಯ ಪರಿಣಾಮವಾಗಿ ಪ್ರತಿವರ್ಷ ಭಾರತದ ಎಲ್ಲ ಪ್ರಮುಖ ಭಾಷೆಗಳ ಹಲವಾರು ಪುಸ್ತಕಗಳು ತನ್ನ ಸೋದರ ಭಾಷೆಗೆ ಅನುವಾದಗೊಂಡು ಪರಿಸರರ ಸಾಹಿತ್ಯ, ಸಂಸ್ಕೃತಿಗಳನ್ನು ಅರಿತುಕೊಳ್ಳುವುದಕ್ಕೆ ನೆರವಾಗುತ್ತಿವೆ. ಶ್ರೀ ಎಸ್. ವಿ. ಶ್ರೀನಿವಾಸರಾಯರು ಅನುವಾದಿಸಿರುವ 'ಒರಿಯಾ ಕಥೆಗಳು' ಈ ಯೋಜನೆಯ ಮೂಲಕ ಕನ್ನಡಕ್ಕೆ ಬಂದಿರುವ ಕಥಾ ಸಂಕಲನ.

ಒರಿಯಾ ಭಾಷೆಯ ಮೊದಲ ಕತೆಗಾರ ಫಕೀರ ಮೋಹನ ಸೇನಾಪತಿಯವರ ಪ್ರಸಿದ್ಧ ಕಥೆ 'ರೇವತಿ'ಯಿಂದ ಆರಂಭಗೊಂಡು ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಕಥೆಗಾರರಲ್ಲಿ ಮುಖ್ಯರಾದವರೆಲ್ಲರ ಕಥೆಗಳೂ ಈ ಪುಸ್ತಕದಲ್ಲಿ ಸಂಗ್ರಹೀತವಾಗಿವೆ.

ಇಪ್ಪತ್ತೊಂದು ಕಥೆಗಳ ಈ ಪ್ರಾತಿನಿಧಿಕ ಸಂಕಲನದಲ್ಲಿ ಇಬ್ಬರು ಲೇಖಕಿಯರ ಕತೆಗಳೂ ಸೇರಿರುವುದು ಗಮನಾರ್ಹವಾಗಿದೆ. ಈ ಕತೆಗಳನ್ನೆಲ್ಲಾ ಓದಿದಾಗ ಒರಿಯಾ ಭಾಷೆಯಲ್ಲಿ ಸಣ್ಣಕಥೆಯ ಬೆಳವಣಿಗೆ ಹೇಗಾಯಿತೆಂಬುದನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗಬಲ್ಲದು. ಈ ಪುಸ್ತಕದ ಸಂಪಾದಕರಾದ ಪಠಾಣಿ ಪಟ್ನಾಯಕ್ ಅವರ ಮುನ್ನುಡಿಯು ಸಹ ಒರಿಯಾ ಕಥಾ ಸಾಹಿತ್ಯದ ಸ್ಥೂಲ ಪರಿಚಯ ಮಾಡಿ ಕೊಡುವುದರಲ್ಲಿ ಸಫಲವಾಗಿದೆ.

ಈ ಪುಸ್ತಕದ ಕನ್ನಡ ಅನುವಾದದ ಬಗ್ಗೆ ಎರಡು ಮಾತು. ಅನುವಾದಕರಾದ ಶ್ರೀ ಎಸ್. ವಿ. ಶ್ರೀನಿವಾಸರಾಯರು ಅನೇಕ ವರ್ಷಗಳಿಂದ ಕನ್ನಡದಲ್ಲಿ ಬರೆದು ಪ್ರಸಿದ್ಧರಾಗಿದ್ದಾರೆ. ಹದಿನೆಂಟಕ್ಕೂ ಹೆಚ್ಚು ಸಾಮಾಜಿಕ ಕಾದಂಬರಿಗಳನ್ನು, ಒಂದು ಐತಿಹಾಸಿಕ ಕಾದಂಬರಿಯನ್ನು ಅನೇಕ ಕಥಾಸಂಕಲನ ಹಾಗೂ ಮಕ್ಕಳ ಪುಸ್ತಕಗಳನ್ನು ರಚಿಸಿರುವ ಶ್ರೀನಿವಾಸರಾಯರದು ಪಳಗಿದ ಭಾಷೆ—ಸರಳವಾದ, ಮನ ಮುಟ್ಟುವ ಭಾಷೆ. ಅನುವಾದಿತ ಕಥೆಗಳನ್ನು ಓದುವಾಗ ಎಲ್ಲೂ ತೊಡಕಾಗುವುದಿಲ್ಲ. ಈ ಶಬ್ದ ಅಥವಾ ವಾಕ್ಯ ಮೂಲಭಾಷೆಯಲ್ಲಿ ಹೇಗಿರಬಹುದು ಎಂದು ತಲೆ ಕೆಡಿಸಿಕೊಳ್ಳುವ ಪ್ರಮೇಯ ಬರುವುದಿಲ್ಲ. ಪ್ರಾದೇಶಿಕ ಹೆಸರುಗಳು, ಕೆಲವು

ಸಂಪ್ರದಾಯಗಳ ವಿವರಗಳನ್ನು ಬಿಟ್ಟು ಓದಿದರೆ ಇದು ಸ್ವಂತ ರಚನೆಗಳಂತೆಯೇ ಸರಾಗವಾಗಿ ಓದಿಸಿಕೊಂಡು ಹೋಗುತ್ತವೆ. ನನ್ನ ಮಾತಿಗೆ ಈ ಕಥಾ ಸಂಕಲನ ದಿಂದಲೇ ಒಂದೆರಡು ಉದಾಹರಣೆಗಳನ್ನು ನೋಡಬಹುದು :

"ನೇರವಾಗಿ ಈ ಎರಡು ಸ್ಟೇಷನ್‌ಗಳು (ಕಟಕ್ ಮತ್ತು ಮುನಿಗುಡಾ) ಹದಿನೈದು ಮೈಲಿಗಳ ಅಂತರದಲ್ಲೇ ಇದ್ದಾಗ್ಯೂ ಬೆಟ್ಟ ಹತ್ತಿ ಇಳಿದು ತಲುಪಲು ನಲವತ್ತೈದು ಮೈಲಿಗಳಾಗುತ್ತವೆ. ಈ ಬೆಟ್ಟಗಳ ಮೇಲೆ ಅವರು ಏಳು ದಿನಗಳನ್ನು ಕಳೆದಿದ್ದಾರೆ. ನಡೆಯಲು ದಾರಿಯಿಲ್ಲ. ದಡದಲ್ಲಿ ಇಕ್ಕಟ್ಟಾದ ಕಾಲುದಾರಿಯಿದೆ. ಎದೆ ಒಡೆಯುವಂಥ ಕಲ್ಲುಬಂಡೆಗಳು. ಎರಡೂವರೆ ಸಾವಿರದಿಂದ ಐದು ಸಾವಿರ ಅಡಿ ಎತ್ತರವಿರುವ, ತಲೆ ಸುತ್ತು ಬರಿಸುವಂತಹ ಇಳಿಜಾರು, ಬೆಟ್ಟ ಶ್ರೇಣಿಗಳಲ್ಲಿ ಒಂದಾದ ನಂತರ ಮತ್ತೊಂದು ಕಡಿದು ಅಥವಾ ಇಳಿಜಾರು ಬೆಟ್ಟ."

(ಕಥೆ : ಟಡ್ಡಾ)

"ಇದು ಏನು ಕಣ್ಣಿನ ದೋಷವೇ ? ಬಹಳ ಶಂಕೆ ಉಂಟಾಗುತ್ತದೆ ಸೀಮಾದ್ರಿಗೆ. ಪ್ರಾಚೀನ ಆರ್ಯರು ಜಡವಸ್ತುವಿನ ಆಂತರ್ಯದಲ್ಲಿ ಯಾವ ಜೀವನ ಚೇತನವನ್ನು ಹುಡುಕಿದ್ದರೋ ಅದು ಬಹುಶಃ ಸುಳ್ಳಿರಲಾರದು, ಅವನ ಸಂಪೂರ್ಣ ಬಾಲ್ಯ ಈ ತರಹೆಯ ಅನೇಕ ಕಿಂವದಂತಿ ಮತ್ತು ಕಥೆಗಳಿಂದ ಪ್ರಭಾವಿತ ವಾಗಿದೆ. ತನ್ನ ಸ್ಥೂಲ ಶರೀರವನ್ನು ತ್ಯಜಿಸಿ ಬೇರೊಬ್ಬನ ಪಿಂಡದೊಳಗೆ ಸೇರಿ ಜೀವಿಸುವ ಅನೇಕ ರೋಮಾಂಚಕಾರಿ ಕಥೆಗಳನ್ನು ಆತ ಕೇಳಿದ್ದಾನೆ. ಏನು ಅದೆಲ್ಲಾ ಕೇವಲ ಕಲ್ಪನೆಗಳೇ ?

(ಕಥೆ : ಚಂದ್ರನ ಶಾಪ)

ನಿಜವಾಗಿಯೂ ಹೂ ತುಂಬಿದ ಅಶೋಕ ವೃಕ್ಷವನ್ನು ನೋಡಿದಾಗ ಮನಸ್ಸು ಉಲ್ಲಸಿತಗೊಳ್ಳುತ್ತದೆ. ಎಷ್ಟು ಕೆಂಪು ! ಮನದಲ್ಲಿ ಅಗ್ನಿ ಎದ್ದಂತೆ ತೋರುತ್ತದೆ. ಈ ಅಗ್ನಿಯ ಕಾರಣದಿಂದಲೇ ಕೊನೆಯಲ್ಲಿ ಅಳಬೇಕಾಗುತ್ತದೆ. ಹೆಸರೇನೋ ಅಶೋಕ. ಆದರೆ ಅದರ ಕೆಳಗೆ ಕುಳಿತಾಗ ಅಳಬೇಕೆನ್ನಿಸುತ್ತದೆ. ಅಯ್ಯೋ ! ಎಷ್ಟು ಕೆಂಪು ! ಎಷ್ಟೊಂದು ಅಗ್ನಿ ! ಎಷ್ಟೊಂದು ದಾಹ !! ಎಷ್ಟೊಂದು ನಾಶ !!!

ಇದೇ ಅಶೋಕ ವನದಲ್ಲೇ ರಾವಣ ಸೀತೆಯನ್ನು ಇರಿಸಿದ್ದುದು. ಆತ

ಯೋಚಿಸಿದ್ದ—ಸೀತೆಯ ಮನಸ್ಸಿನಲ್ಲಿ ಈ ಅಶೋಕ, ಅಗ್ನಿ ಹೊತ್ತಿಸುತ್ತದೆ. ಆದರೆ ಆದದ್ದೇನು ? ಲಂಕೆಗೆ ಅಗ್ನಿ ಹೊತ್ತಿತು. ಅಶೋಕವನ ಸೀತೆಯ ಕಣ್ಣೀರಿನಲ್ಲಿ ಕೊಚ್ಚಿ ಹೋಯಿತು.

(ಕಥೆ : ಸುಮಿತ್ರಾಳ ನಗು)

ಅನುವಾದ ಯಶಸ್ವಿಯಾಗಿದೆ ಎನ್ನುವುದಕ್ಕೆ ಇಷ್ಟು ಉದಾಹರಣೆಗಳು ಸಾಕಲ್ಲವೇ ? ಈ ಯಶಸ್ಸಿಗೆ ಪುರಸ್ಕಾರವಾಗಿ ಈ ಕಥಾಸಂಕಲನಕ್ಕೆ ೧೯೮೪ರ ರಾಜ್ಯಪ್ರಶಸ್ತಿಯೂ ದೊರಕಿದೆ.



# ಸ್ವಾತಿಯ ಹನಿ
# ಮತ್ತು
# ಮಣ್ಣಿನ ಮಗ

---

—ವೇಣುಗೋಪಾಲ ಸೊರಬ

ಶ್ರೀ ಎಸ್. ವಿ. ಶ್ರೀನಿವಾಸರಾಯರ "ಸ್ವಾತಿಯ ಹನಿ" ಮತ್ತು "ಮಣ್ಣಿನ ಮಗ" ಕಾದಂಬರಿಗಳನ್ನು ಕುರಿತು ಕೆಲವು ಅಭಿಪ್ರಾಯಗಳು.

"ಸ್ವಾತಿಯ ಹನಿ"(1979)ಗೂ "ಮಣ್ಣಿನ ಮಗ"(1964)ಕ್ಕೂ ಹದಿನೈದು ವರ್ಷಗಳ ಅಂತರವಿದೆ. "ಮಣ್ಣಿನ ಮಗ"ದಲ್ಲಿ ವ್ಯಕ್ತವಾದ ಅವರ ಕರ್ತೃತ್ವ ಶಕ್ತಿಯೇ "ಸ್ವಾತಿಯ ಹನಿ"ಯಲ್ಲಿಯೂ ವ್ಯಕ್ತವಾಗಿದೆ. ಅಂದರೆ, 1964ರ ಹೊತ್ತಿಗೇ, ತಮ್ಮ ಮೂರನೆಯ ಕಾದಂಬರಿಯಾದ "ಮಣ್ಣಿನ ಮಗ"ದಲ್ಲಿ ಕಾದಂಬರಿ ರಚನೆ, ತಮಗೆ ಕರಗತವಾಗಿದೆ ಎನ್ನುವುದನ್ನು ಮೆರೆದಿದ್ದಾರೆ. ಅದೇ ಬಗೆಯ ರಚನಾ ಕೌಶಲ, "ಸ್ವಾತಿಯ ಹನಿ"ಯಲ್ಲಿಯೂ ಕಂಡು ಬರುತ್ತದೆ. ಪಾತ್ರ ಸೃಷ್ಟಿ, ಸನ್ನಿವೇಶ ರಚನೆ, ನಿರೂಪಣಾ ತಂತ್ರ—ಹೀಗೆ ಕಾದಂಬರಿ ರಚನೆಯ ಎಲ್ಲ ಮುಖ್ಯ ಅಂಗಗಳನ್ನೂ ಅವರು ತಮ್ಮದೇ ಆದ ಇತಿಮಿತಿಯಲ್ಲಿ ಬಳಸಬಲ್ಲರು. ಅವರ ಶೈಲಿ ಹಾಳತವಾದದ್ದು, ಆಡಂಬರ, ಅಬ್ಬರಗಳು ಯಾವುದೇ ದೃಷ್ಟಿಯಿಂದ ನೋಡಿದರೂ, ಅವರ ಬರವಣಿಗೆಯಿಂದ ದೂರ. ಎಂತದ್ದೇ ಸನ್ನಿವೇಶವನ್ನಾದರೂ ಅವರು ನಿರಂಬಳವಾಗಿ ನಿಭಾಯಿಸಬಲ್ಲರು.

ಶ್ರೀ ಶ್ರೀನಿವಾಸರಾಯರು ತಮ್ಮ ಕಾದಂಬರಿಗಳನ್ನು ಒಂದು ಇತ್ಯಾತ್ಮಕ ಗುರಿಯನ್ನು ಇಟ್ಟುಕೊಂಡೇ ರಚಿಸುತ್ತಾರೆ. ಆದರೆ, ಉದ್ದೇಶ ಸಾಧನೆಯೇ ಅವರ ಕೃತಿಗಳ ಏಕೈಕ ಮುಖ್ಯ ಅಂಶವಲ್ಲ. ಮಾನವ ಸ್ವಭಾವದ ಸಹಜ ಚಿತ್ರಣಕ್ಕೆ ಅವರು ಒತ್ತು ಕೊಡುವುದರಿಂದ, ಉದ್ದೇಶಿತ ಗುರಿ ಸಾಧನೆಯೊಂದಿಗೇ, ನಮ್ಮ ಸುತ್ತಣ ಪ್ರಪಂಚದ ಸಾಕಷ್ಟು ಅನುಭವ ನಮಗೆ ಉಂಟಾಗುತ್ತದೆ. ಇದರಿಂದ ಅವರ ಕೃತಿಗಳು ಓದುಗನ ಮನಸ್ಸಿನ ಮೇಲೆ ಹೆಚ್ಚಿನ ಪರಿಣಾಮ ಬೀರಲು ಸಹಕಾರಿಯಾಗುತ್ತದೆ.

"ಸ್ವಾತಿಯ ಹನಿ" ಕಾದಂಬರಿಯ ವಸ್ತು ಬಹಳ ಗಂಭೀರವಾದದ್ದು. ಅದು ಕ್ಷೇತ್ರ ಮತ್ತು ಬೀಜಕ್ಕೆ ಸಂಬಂಧಿಸಿದುದು. ಆದರೆ ಕಾದಂಬರಿಯನ್ನು ನಿರ್ವಹಿಸಿರುವ ಕ್ರಮದಲ್ಲಿ ಒಳಿತು ಮತ್ತು ಕೆಡಕುಗಳ ನಡುವಿನ ಹೋರಾಟವೇ ಪ್ರಾಧಾನ್ಯ ಪಡೆಯುತ್ತದೆ. ಲಕ್ಷ್ಮಿ ಮತ್ತು ಮಂಜುಳಾ ಅಕ್ಕತಂಗಿಯರಾದರೂ, ಒಬ್ಬಳು ಕೆಡುಕಿನ ಸಾಕಾರವಾದರೆ, ಇನ್ನೊಬ್ಬಳು ಒಳಿತಿನ ಸಲ್ಲಕ್ಷಣಗಳ ಸೂಚನೆಯಾಗುತ್ತಾಳೆ, ತೋರುಗಂಬವಾಗುತ್ತಾಳೆ. ಆದರೆ ಲಕ್ಷ್ಮಿ ಕೆಡುಕಿನ ಮೂರ್ತಿಯಾಗುವುದಕ್ಕೆ ಏನು ಕಾರಣ ? ಎಂಬ ಪ್ರಶ್ನೆಗೆ ಉತ್ತರ ದೊರೆಯುವುದಿಲ್ಲ.

ಲಕ್ಷ್ಮಿಯ ವಿವಾಹಪೂರ್ವ ಚೇಷ್ಟೆಗಳಿಂದಾಗಿ, ಅವಳು ಶ್ರೀಧರನಿಂದ ತಾಯಿಯಾಗುತ್ತಾಳೆ. ಅದೇ ಕಾರಣಕ್ಕೆ ಆಕೆ ಬೊಂಬಾಯಿಗೆ ಹೋಗುತ್ತಾಳೆ. ಮಗುವನ್ನು ತಂದೆತಾಯಿಗಳಲ್ಲಿ ಬಿಟ್ಟು. ಆದರೆ ಅದೇ ಶ್ರೀಧರನೊಂದಿಗೆ ಮಂಜುಳೆಯ ಮದುವೆಯಾಗುತ್ತದೆ. ಮಂಜುಳಾಗೆ ಮಕ್ಕಳಿಲ್ಲದೆ ಒದ್ದಾಡುವ ಸಮಯದಲ್ಲೇ ಲಕ್ಷ್ಮಿ ತನ್ನ ಗಂಡ ದೇಶಪಾಂಡೆ ಜತೆಗೆ ಬೆಂಗಳೂರಿನಲ್ಲಿ ನೆಲೆಸುವ ಉದ್ದೇಶದಿಂದ ಬರುತ್ತಾಳೆ. ಲಕ್ಷ್ಮಿಯ ಮೇಲೆ ನೆಕ್‌ಲೇಸ್ ಕದ್ದ ಆಪಾದನೆ ಬರುತ್ತದೆ, ಅವಳು ಮನೆ ಕಟ್ಟುವುದಕ್ಕೆ ಶ್ರೀಧರ್ ಧನ ಸಹಾಯ ಮಾಡಿದ್ದು ಅನುಮಾನಾಸ್ಪದ ಕಾರಣಕ್ಕೆ ಎಂಬ ಭಾವನೆ ಮೂಡಿ ಬರುತ್ತದೆ, ನಿರೂಪಣೆಯ ಧಾಟಿಯಿಂದ. ಇಂತಹ ಹತ್ತಾರು ಪ್ರಕರಣಗಳಿಗಿಂತ ಮಂಜುಳಾಳನ್ನು ಲಕ್ಷ್ಮಿ ಬೆಂಕಿ ಹಚ್ಚಿ ಸುಡುವ ಪ್ರಯತ್ನ ಮಾಡುತ್ತಾಳೆ. ಇದಕ್ಕೆ ಮೇಲುನೋಟಕ್ಕೆ ಕಂಡು ಬರುವ ಕಾರಣ. ಲಕ್ಷ್ಮಿ–ಶ್ರೀಧರ ಇವರ ಸಂಬಂಧದಿಂದ ಹುಟ್ಟಿದ ಸತೀಶನ ಸಾವು, ಸತೀಶನನ್ನು ಸಾಯಿಸಿ, ತನ್ನದೇ ಗರ್ಭದಲ್ಲಿ ಹುಟ್ಟುವ ಮಗುವಿಗೆ ಎಲ್ಲ ಆಸ್ತಿಯೂ ಸಲ್ಲಬೇಕೆಂಬುದು, ಮಂಜುಳಾಳ ಸಂಚು ಎನ್ನುವುದನ್ನು ಒಪ್ಪದೇ ಇರಲು ಸಾಧ್ಯವಿಲ್ಲ. ಆದರೆ ಸತೀಶನ ಸಾವಿನ ಸಂದರ್ಭದಲ್ಲಿ ಮಂಜುಳಾ ಎಷ್ಟರ ಮಟ್ಟಿಗೆ ಶುಶ್ರೂಷೆ ಮಾಡಿದಳು ; ಅವನಿಗಾಗಿ ಅವಳು ಏನನ್ನು ತ್ಯಾಗ ಮಾಡಲಿಲ್ಲವೆ ? ಅವಳಿಗೆ ಸತೀಶನ ಬಗ್ಗೆ ಪ್ರೀತಿ ಇರಲಿಲ್ಲವೆ ? ಈ ಅಂಶಗಳು ಲಕ್ಷ್ಮಿಯ ಮನಸ್ಸಿಗೆ ಬರಲಿಲ್ಲವೆ ? ಅವಳ ಈ ನಡವಳಿಕೆಗೂ, ಚಿಕ್ಕ ವಯಸ್ಸಿನಲ್ಲಿ ಅವಳು ಬೇಜವಾಬ್ದಾರಿಯಿಂದ ವರ್ತಿಸಿ, ವಿವಾಹಪೂರ್ವದಲ್ಲಿಯೇ ತಾಯಿಯಾದದ್ದಕ್ಕೂ ಏನಾದರೂ, ಕಾರ್ಯಕಾರಣ ಸಂಬಂಧವಿದೆಯೇ ?—ಹೀಗೆ ನಾವು ಆಲೋಚಿಸಬೇಕಾಗಿದೆ. ಕಾದಂಬರಿಯ ವಸ್ತುವಿವರದಲ್ಲಿ, ಇನ್ನೊಂದು ಗಮನಿಸಬೇಕಾದ ವಿಷಯ : ಶ್ರೀಧರನ ವೀರ್ಯವನ್ನೇ ಮಂಜುಳಾಳಿಗೆ ಕೊಟ್ಟಿದ್ದೇವೆ, ಎಂದು ಹೇಳುವ ಡಾ॥ ಅನಿತಾ ಮೆಹ್ತಾಳ ಮಾತು. ಈ ವಿವರಕ್ಕೂ ಉಪರಿಚರ ಮತ್ತು ಅದ್ರಿಕೆ—ಇವರುಗಳ ನಡುವಿನ ಸಂಬಂಧಕ್ಕೂ ತಾಳೆ ಮಾಡಲಾಗಿದೆ. ಉಪರಿಚರ ತನ್ನ ಹೆಂಡತಿಗೆ ವೀರ್ಯವನ್ನು ಅನ್ಯಮಾರ್ಗದಿಂದ ಕಳಿಸುವ

ಹವಣಿಕೆಯಲ್ಲಿದ್ದ, ಎಂಬ ಮಾತನ್ನು ಒಪ್ಪಿಕೊಂಡರೂ, ಅಂತಹ ಒಂದು ಕ್ರಮಕ್ಕೆ ಬೇರೆ ಬೇರೆ ಕಾರಣಗಳಿರಬಹುದು. ಆದರೆ ಶ್ರೀಧರ ಮತ್ತು ಮಂಜುಳಾ, ಇವರ ಮಧ್ಯೆ ? ಬಹುಶಃ ಮಂಜುಳಾ ಡೈವೋರ್ಸ್‌ಗೆ ಪ್ರಯತ್ನಿಸಿ, ಶ್ರೀಧರನಿಂದ ದೂರ ಉಳಿದಳು, ಎಂಬ ಕಾರಣವೆ ? ಹಾಗಿದ್ದಲ್ಲಿ ಕಾದಂಬರಿಯಲ್ಲಿ ಅವರ ಬಗ್ಗೆ ಇನ್ನಷ್ಟು ಒತ್ತು ನೀಡಬೇಕಾಗಿತ್ತು. ಮಂಜುಳಾಳಿಗೆ, ಶ್ರೀಧರನ ಬಗ್ಗೆ ಬೇಸಗೆ ಉಂಟಾಗಲು, ಒಂದೆರಡು ಸೂಚನೆಗಳಿವೆಯೇ ಹೊರತು, ಪ್ರಖರವಾದ ಚಿತ್ರಣಗಳಿಲ್ಲ.

"ಮಣ್ಣಿನ ಮಗ" ಕಾದಂಬರಿಯ ಯಶಸ್ಸು "ಸ್ವಾತಿಯ ಜನ"ಯ ಯಶಸ್ಸಿಗಿಂತಲೂ ಹೆಚ್ಚು ಮೆಚ್ಚಿಕೆಯಾಗುವಂಥದ್ದು. ಇಲ್ಲಿನ ಸಂಕೀರ್ಣತೆ, ಕರಿಯಣ್ಣ ಮತ್ತು ಅವನ ಮಗಳು ಚೆನ್ನಿ—ಈ ಪಾತ್ರಗಳ ಆಕಾಂಕ್ಷೆ, ಅಸಹಾಯಕತೆಗಳಿಂದ ಕೂಡಿದ್ದು. ಕರಿಯಣ್ಣ ಹೊಲೆಯರ ಜಾತಿಗೆ ಸೇರಿದವನು. ಚೆನ್ನಿಯ ಅಜ್ಜಿ ಅಥವಾ ಇನ್ನು ಯಾರೋ ಹಳೆ ತಲೆಮಾರಿನವಳೊಬ್ಬಳು ವೇಶ್ಯೆಯಾಗಿದ್ದವಳು. ಈ ಎರಡು ಅಂಶಗಳು, ಅವರ ಮಹತ್ವಾಕಾಂಕ್ಷೆಗಳನ್ನು ಹೊಸಕಿ ಹಾಕುತ್ತದೆ. ಕರಿಯಣ್ಣನಿಗೆ ಜಮೀನು ಮಾಡಬೇಕು ಎಂಬ ಆಕಾಂಕ್ಷೆ ಇರುವ ರೀತಿಯಲ್ಲಿಯೇ ಚೆನ್ನಿಗೆ ಮಾವ ನರಸಯ್ಯನನ್ನು (ಜಮೀನ್ದಾರನ ಮಗ ಮರಿಯಣ್ಣನ ಜತೆ ಅವಳು ಸಾಕಷ್ಟು ಆಟವಾಡಿದ್ದರೂ ಅವನನ್ನು ಮದುವೆಯಾಗುವ ಕನಸನ್ನೂ ಕಾಣುವುದು ದುಸ್ಸಾಧ್ಯ) ಮದುವೆಯಾಗುವ ಆಕಾಂಕ್ಷೆ. ಆದರೆ ಈ ಎರಡು ಆಕಾಂಕ್ಷೆಗಳೂ ಕಮರಿ ಹೋಗುತ್ತವೆ. ಅದಕ್ಕಿಂತ ಘೋರವಾದ ಅಂಶವೆಂದರೆ, ಚೆನ್ನಿ ವೇಶ್ಯಾ ವೃತ್ತಿಗೆ–ದೇವರಿಗೆ ಬಿಡುವುದರ ಮೂಲಕ ತಳ್ಳಲ್ಪಡುತ್ತಾಳೆ. ಇದರಲ್ಲಿ ತಂದೆತಾಯಿಗಳು ಅಸಹಾಯಕರಾಗಿ ಉಳಿಯಬೇಕಾಗುತ್ತದೆ.

ಈ ಕಾದಂಬರಿ ಅರವತ್ತರ ದಶಕದಲ್ಲಿ ಬರೆಯಲ್ಪಟ್ಟದ್ದು ಎಂಬ ಅಂಶವನ್ನು ಗಮನಿಸಿದಾಗ, ಗ್ರಾಮೀಣ ಪರಿಸರದ ಚಿತ್ರಣ, ಆ ಕಾಲದ ಸಾಮಾಜಿಕ ನಡಾವಳಿಗಳು, ರೀತಿರಿವಾಜುಗಳು—ಇವುಗಳನ್ನು ಶ್ರೀ ಶ್ರೀನಿವಾಸರಾಯರು ಚೊಕ್ಕವಾಗಿ ಚಿತ್ರಿಸಿದ್ದಾರೆ. ಈ ಕಾರಣಗಳಿಗಾಗಿ, ಇದೊಂದು ಗಮನಾರ್ಹ ಕೃತಿಯಾಗಿದೆ.

ಶ್ರೀ ಶ್ರೀನಿವಾಸರಾಯರ ಈ ಎರಡು ಕೃತಿಗಳ ಮೂಲಕ ನಾವು ಕಂಡುಕೊಳ್ಳುವ ಪ್ರಪಂಚ, ವಾಸ್ತವವಾದೀ ಪ್ರಪಂಚ. ಇಲ್ಲಿ ಕಲ್ಪನಾಲಹರಿಗೆ ಅವಕಾಶವಿಲ್ಲ. ನೇರ ನಿರೂಪಣೆ. ಹಿತಮಿತ ವರ್ಣನೆ, ಸ್ಪಷ್ಟ ನಿಲುವುಗಳು—ಇವುಗಳ ಮೂಲಕ ಶ್ರೀ ಶ್ರೀನಿವಾಸರಾಯರು ತಮ್ಮ ಕಾದಂಬರಿಗಳನ್ನು ಸಮಕಾಲೀನ ಸಾಮಾಜಿಕ ವ್ಯಾಖ್ಯೆಯನ್ನಾಗಿ ಮಾಡುವುದರಲ್ಲಿ ಯಶಸ್ವಿಯಾಗಿದ್ದಾರೆಂದು ನಿಸ್ಸಂದೇಹವಾಗಿ ಹೇಳಬಹುದು.



# ಕನ್ಯಾದಾನ-'ಸೃಜನಶೀಲ ಕೃತಿ'

ಎ.ವಿ. ವೇಣುಗೋಪಾಲ್.

ಐವತ್ತರ ದಶಕದಲ್ಲಿ ಅಂದರೆ ತಮ್ಮ 20 ನೇ ವಯಸ್ಸಿನಲ್ಲೇ ಶ್ರೀಯುತರು ಈ ಕಾದಂಬರಿಯ ರಚನೆ ಪ್ರಾರಂಭಿಸಿದ್ದು, ಇದನ್ನು ಶ್ರೀಯುತ ನಿರಂಜನರು ಪರಿಶೀಲಿಸಿ, ಲೇಖಕರ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ, ಬೆನ್ನು ತಟ್ಟಿದ್ದೇ ಶ್ರೀನಿವಾಸ ರಾಯರ ಕೈಯಲ್ಲಿ ಕಾದಂಬರಿಗಳ ಸರಮಾಲೆಯೇ ಬೆಳೆದು ಬರಲು ನೆರವಾಯಿತು. ಅನಂತರ "ಮಕ್ಕಳೇ, ಇವರನ್ನು ನೀವು ಬಲ್ಲಿರಾ" "ಕನ್ನಡ ಸಾಹಿತಿ ದರ್ಶನ" ಮುಂತಾದ ವೈಶಿಷ್ಟ್ಯ ಪೂರ್ಣ ಕೃತಿಗಳು ಹೊರ ಬರುವಂತಾಯಿತು.

ಮಂಗಳ ವಾದ್ಯಗಳ ಹಿನ್ನೆಲೆಯಲ್ಲಿ ರೂಪ ತಾಳುವ ಈ ಕಾದಂಬರಿ ಓದುಗ ನನ್ನು ಸಂಪೂರ್ಣ ಹಿಡಿತದಲ್ಲಿಟ್ಟುಕೊಂಡು ಕ್ಷಣ ಕ್ಷಣಕ್ಕೂ ಮುಂದೇನಾಗಬಹುದು ಎಂಬ ಕೌತುಕ ಸೃಷ್ಟಿಸುತ್ತಲೇ ಸಾಗುತ್ತದೆ. ತಾನೊಂದು ಬಗೆದರೆ ದೈವವೊಂದು ಬಗೆಯಿತು ಎನ್ನುವ ಹಾಗೆ ಕೆಲವೆಡೆ ಓದುಗರು ಛೇ ! ಲೇಖಕರು ಹೀಗೆ ಮಾಡಬಾರದಿತ್ತು, ಛೇ, ಇದೇನು ಶಕುಂತಳೆಯ ಒಣ ಭಾಷಣ ! ಮುಂದಿನ ಪುಟಕ್ಕೆ ಜಿಗಿಯೋಣ ಎನ್ನುವ ಮಿಶ್ರ ಭಾವನೆಗಳೊಂದಿಗೆ ಕಾದಂಬರಿ ಸಾಗುತ್ತದೆ.

ಹೇರಳವಾದ ಆಸ್ತಿಯನ್ನು ಮೈಗೂಡಿಸಿಕೊಂಡು ಬಂದ ವೆಂಕಟರಾಯರಿಗೆ ಪತ್ನಿ ಸೀತಮ್ಮಳ ಮೇಲೆ ಅಗಾಧವಾದ ಪ್ರೇಮ. ಅಷ್ಟೇ ಗೌರವ ತಾಯಿ ಸಾವಿತ್ರಮ್ಮನ ಮೇಲೆ. ಇವರೆಡಕ್ಕೂ ಮಿಗಿಲಾದ ಪದವೊಂದಿದ್ದರೆ ಅದು ವಯೋವೃದ್ಧ ಸುಬ್ಬಣ್ಣನ ಮೇಲೆ. ಮದುವೆಯಾಗಿ ಎಂಟು ವರ್ಷಗಳ ನಂತರ ವೆಂಕಟರಾಯರ ಆಶಾಕಿರಣ ಶಕುಂತಲೆಯ ಜನನ. ಬಾಲ್ಯ, ಪ್ರೌಢಾವಸ್ಥೆಯ ವಿಶ್ಲೇಷಣೆ ನಾಟಕೀಯವಾಗಿ ಇರದೇ ನಮ್ಮ ಮನೆಯಲ್ಲೇ ನಡೆಯುತ್ತಿರುವಂತೆ ವಾಸ್ತವವಾಗಿ ರಚಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ.

ವೆಂಕಟರಾಯರ ಬಾಲ್ಯದ ಗೆಳೆಯ ರಾಮರಾಯರಿಗೆ ಏಕೈಕ ಪುತ್ರ ಗೋಪಾಲ. ಮೊದಲಿನಿಂದಲೂ ರಾಮರಾಯರು ತಮ್ಮ ಸೊಸೆ ಶಕುಂತಳೆಯೇ ಎಂದು ನಿರ್ಧರಿಸಿರುತ್ತಾರೆ. ಶಕುಂತಳೆಯ ಬಾಲ್ಯ ಗೋಪಾಲನೊಡನೆ ಆಟ ಜಗಳಗಳಲ್ಲಿ ಕಳೆಯುವುದರೊಂದಿಗೇ, ವಿದ್ಯೆ, ನಾಗರಿಕತೆಯ ಪ್ರತೀಕವಾದ ಶೀನಿಯೊಂದಿಗೆ ಸಾಗುತ್ತದೆ.

ಈ ದಿನಗಳಲ್ಲಿ ಕಾದಂಬರಿಯನ್ನು ಓದುವಾಗ ಓದುಗನಿಗೆ ಇದೊಂದು ತ್ರಿಕೋನ ಪ್ರೇಮ ಕಾದಂಬರಿ, ತೀರಾ ಸಾಮಾನ್ಯ ಎನಿಸಬಹುದಾದರೂ ಈ ಕಾದಂಬರಿಯು ಸೃಷ್ಟಿಗೊಂಡಿದ್ದು ನಾಲ್ಕು ದಶಕಗಳ ಹಿಂದೆ ಎನ್ನುವುದನ್ನು ನೆನೆದಾಗ ಆದಿನಗಳಲ್ಲಿ ಶ್ರೀನಿವಾಸರಾಯರ ಯೋಚನೆ, ಕ್ರಿಯಾಶೀಲತೆಯ ಬಗ್ಗೆ ನಿಜವಾಗಿ ಹೆಮ್ಮೆ ಮೂಡುತ್ತದೆ.

ಗೋಪಾಲನೊಂದಿಗೆ ವಿವಾಹ ಶಕುಂತಳೆಗೆ ಬೇಡವಾಗಿರುತ್ತದೆ. ಆ ಬೇಡದ ಮದುವೆಯೇ ಗೋಪಾಲನ ಸಾವಿಗೆ ಕಾರಣವಾಗುತ್ತದೆ. ಶೀನಿಯೊಂದಿಗೆ ಹಿರಿಯರು ನಿಷ್ಕರ್ಷೆ ಮಾಡುವ ಮದುವೆಯ ತೆರೆಯಲ್ಲಿ ಶಕುಂತಳೆ ನೆರೆಮನೆಯ ಲಲಿತೆಗೆ ಶೀನಿಯನ್ನು ತ್ಯಾಗ ಮಾಡುತ್ತಾಳೆ. ಅಗಾಧವಾದ ಪ್ರೇಮ, ಗೌರವವನ್ನು ಶಕುಂತಳೆಗೆ ಧಾರೆ ಎರೆದಿದ್ದ ಶೀನಿ ಲಲಿತೆಯನ್ನು ತಿರಸ್ಕರಿಸುತ್ತಾನೆ.

ಮನೆಯ ಹಿತೈಷಿ ಸುಬ್ಬಣ್ಣ ಒಳ್ಳೆಯ ಸಂಬಂಧವೆಂದು ದಾವಣಗೆರೆಯ ಅನಂತ ನಾರಾಯಣನೊಂದಿಗೆ ಶಕುಂತಳೆಯ ಮದುವೆ ಗೊತ್ತು ಮಾಡುತ್ತಾನೆ. ದ್ವಿತೀಯ ವಿವಾಹದಿಂದಲೇ ಯಶಸ್ಸು ಎಂದು ನಂಬಿರುವ ಅನಂತನಾರಾಯಣನಿಗೆ ಮೊದಲ ಮದುವೆ ಕೇವಲ ಶಾಸ್ತ್ರಕ್ಕೆ. ಇಲ್ಲಿ ಶಕುಂತಳೆ ನೇರವಾಗಿ ಬಲಿಪಶುವಾಗುತ್ತಾಳೆ. ಈ ಕೊರಗಿನಲ್ಲಿ ಸಾವಿತ್ರಮ್ಮ ಕೊನೆಯುಸಿರೆಳೆಯುತ್ತಾರೆ. ಈ ಹಂತದಲ್ಲಿ ಶೀನಿ ವೆಂಕಟ ರಾಯರ ಕುಟುಂಬಕ್ಕೆ ಮತ್ತೊಮ್ಮೆ ಹತ್ತಿರವಾಗುತ್ತಾನೆ. ಈ ವೇಳೆಗಾಗಲೇ ಭಗ್ನ ಹೃದಯಿಯಾದ ಶೀನಿ ಸಾಕಷ್ಟು ಹಾಳಾಗಿರುತ್ತಾನೆ.ಆದರೂ ವೆಂಕಟರಾಯರಿಗೆ ಶೀನಿ ಮೇಲಿನ ಗೌರವ, ಅಭಿಮಾನ ಹಾಗೆಯೇ ಇರುತ್ತದೆ. ಶೀನಿಯ ಈ ದುಶ್ಚಟಗಳು ಯಾವ ಹಂತಕ್ಕೆ ಬರುತ್ತದೆ ಎಂದರೆ ಅವನಿಗೆ ಮಕ್ಕಳಾಗದ ವಿಷಯ ತಿಳಿದು ರಾಯರು ಅವನನ್ನು ದೂರ ತಳ್ಳುತ್ತಾರೆ. ಆದರೆ ಶಕುಂತಳೆ ತಂದೆಯನ್ನು ಧಿಕ್ಕರಿಸಿ ಶೀನಿಯೊಂದಿಗೆ ಬೆರೆಯುತ್ತಾಳೆ. ವೆಂಕಟರಾಯರು ನಿಟ್ಟುಸಿರೊಂದಿಗೆ ಕನ್ಯಾದಾನ ಮಾಡುತ್ತಾರೆ.

ಕಾದಂಬರಿ ಓದಿ ಮುಗಿಸಿದ ನಂತರ ಶಕುಂತಳೆಯ ಪಾತ್ರದ ಬಗ್ಗೆ ಓದುಗನಿಗೆ ಬಹಳ ಬೇಸರವಾಗುತ್ತದೆ. ಒಬ್ಬಳೇ ಮಗಳಾದ ಶಕುಂತಳೆ ಬಯಸಿದ್ದೇ ಒಂದು, ಆಗುವುದೇ ಇನ್ನೊಂದು. ಗೃಹಿಣಿಯಾಗಿ ಸಂಸಾರ ಉತ್ತಮ ರೀತಿಯಲ್ಲಿ ಸಾಗಿಸ ಬೇಕು, ಹೆಂಡತಿಯಾಗಿ, ತಾಯಿಯಾಗಿ, ಸಂಸಾರದಲ್ಲಿ ಯಶಸ್ವಿಯಾಗಬೇಕು ಎನ್ನುವ ಹಂಬಲ. ಪ್ರತಿ ಹಂತದಲ್ಲೂ ಪ್ರಾಮುಖ್ಯತೆ ಪಡೆಯುತ್ತದೆ. ಹೆಣ್ಣಿಗೆ ಇಂದಿನ ಶಿಕ್ಷಣ ಪದ್ಧತಿ ಯಾವುದೇ ರೀತಿಯಲ್ಲೂ ಸಹಾಯಕಾರಿಯಾದುದಲ್ಲ. ರಸಾಯನ ಶಾಸ್ತ್ರ, ಬೀಜಗಣಿತ ಇವುಗಳು ಸಂಸಾರದ ಚಕ್ರಗಳು ಸುಗಮವಾಗಿ ಸಾಗಲು

ಪ್ರಾಮುಖ್ಯವಲ್ಲ ಎನ್ನುವ ಭಾವನೆ ಕೆಲವರಿಗೆ ಹಾಸ್ಯಾಸ್ಪದವಾಗಿ ಕಂಡರೂ ವಾಸ್ತವವಾಗಿ ಸರಿ ಎಂದೆನಿಸುತ್ತೆ. ಯಾವ ವಿದ್ಯೆ ಶಕುಂತಳೆಗೆ ಬೇಡವಾಗಿರುತ್ತದೊ ಅದೇ ವಿದ್ಯೆ ಕಾದಂಬರಿಯ ಅಂತ್ಯದಲ್ಲಿ ಅವಳಿಗೆ ನೆಮ್ಮದಿ ತರುತ್ತದೆ.

ಗೋಪಾಲನೊಡನೆ ಲಗ್ನ ಬೇಡವಾಗಿರುತ್ತದೆ. ಶೀನಿಗೆ ಮನಸ್ಸು ಲಗ್ಗೆ ಹಾಕಿರುತ್ತದೆ. ಲಲಿತೆಗೆ ಶೀನಿಯನ್ನು ಬಿಟ್ಟು ಕೊಡುವ ವೇಳೆಗಾಗಲೇ ಗೋಪಾಲ ವಿಧಿವಶನಾಗುತ್ತಾನೆ. ಇಲ್ಲಿಯೂ ಸಹ ಶಕುಂತಳೆಗೆ ನಿರಾಸೆ. ಹೀಗೆ ಕ್ಷಣ ಕ್ಷಣಕ್ಕೂ ನಿರಾಸೆಯ ಅಲೆಗಳು ಶಕುಂತಳೆಗೆ ಅಪ್ಪಳಿಸುತ್ತಲೇ ಕಾದಂಬರಿ ಸಾಗುತ್ತದೆ.

ಮೂರು ನಾಲ್ಕು ದಶಕದ ಹಿಂದಿನ ಕೆಲ ಕುಟುಂಬ ಜೀವನಕ್ಕೆ ಈ ಕಾದಂಬರಿ ಕನ್ನಡಿ ಹಿಡಿಯುತ್ತದೆ.



# ಮಬ್ಬು ಮುಂಜಾವು-ಒಂದು ಸಮೀಕ್ಷೆ

—ಆಳವಂದಾರ್ ಗೋಪಾಲಾಚಾರ್

ನನ್ನ ಸನ್ಮಿತ್ರರೊಬ್ಬರು ಇತ್ತೀಚೆಗೆ ಅಕಸ್ಮಾತ್ ಭೇಟಿಯಾದಾಗ ನನ್ನನ್ನು ವಿಶ್ವಾಸದಿಂದ ಅವರ ಆಫೀಸಿನ ಖಾಸಾ ಕೋಣೆ (ಛೇಂಬರ್) ಯೊಳಕ್ಕೆ ಕರೆದೊಯ್ದು ಕುಳ್ಳಿರಿಸಿ ಕಾಫಿ ತರಿಸಿದರು. ಇಬ್ಬರೂ ಕಾಫಿಯನ್ನು ಹೀರುತ್ತಾ ಕೆಲವು ವಿಷಯಗಳ ಬಗೆಗೆ ಮಾತನಾಡುತ್ತಿದ್ದಾಗ ನನ್ನ ಸನ್ಮಿತ್ರರು ನನಗೊಂದು ಸೂಚನೆಯನ್ನಿತ್ತರು.

"ಅದೇನೂಂತ ವಿಷಯವನ್ನು ತಿಳಿಸಿ" ಎಂದೆ.

"ಆಳವಂದಾರ್‌ರವರೇ....ನೀವೊಂದು ಲೇಖನವನ್ನು ಬರೆದುಕೊಡಬೇಕು...." ಎಂದರು.

"ಯಾರ ಬಗ್ಗೆ ?....ಯಾವ ವಿಷಯದ ಮೇಲೆ ? ಪ್ರಶ್ನಿಸಿದೆ.

"ನಿಮ್ಮ ಮತ್ತು ನಮ್ಮ ಗೆಳೆಯರಾದ ಎಸ್. ವಿ. ಶ್ರೀನಿವಾಸರಾವ್‌ರವರು ಕಾದಂಬರಿಕಾರರಾಗಿ ಅನೇಕ ಕಾದಂಬರಿಗಳನ್ನೂ, ಸಣ್ಣ ಕತೆಗಳನ್ನೂ ಬರೆದು ಪ್ರಕಟಿಸಿ ಸಾರಸ್ವತ ಲೋಕಕ್ಕೆ ಸಾರ್ಥಕವಾದ ಸೇವೆಯನ್ನು ಸಲ್ಲಿಸಿದ್ದಾರೆ. ಅವರಿಗೆ ಈಗ 60 ವರ್ಷಗಳು ತುಂಬುತ್ತಿರುವ ಸಂದರ್ಭದಲ್ಲಿ ಗೆಳೆಯರಾದ ನಾವೆಲ್ಲರೂ ಶ್ರೀನಿವಾಸರಾಯರ ಬಗ್ಗೆ ಒಂದು ಅಭಿನಂದನಾ ಗ್ರಂಥವನ್ನರ್ಪಿಸಿ ಸನ್ಮಾನಿಸ ಬೇಕೆಂದಿದ್ದೇವೆ. ಅಭಿನಂದನಾ ಗ್ರಂಥಕ್ಕೆ ನಿಮ್ಮ ಲೇಖನವೊಂದು ಅಗತ್ಯವಾಗಿ ಬೇಕಾಗಿದೆ. ದಯವಿಟ್ಟು ಬರೆದುಕೊಡಿ" ಎಂದು ವಿನಂತಿಸಿಕೊಂಡರು.

"ಅಭಿನಂದನಾ ಗ್ರಂಥಕ್ಕೆ ಲೇಖನವನ್ನು ಬರೆಯುವಷ್ಟು ನಾವು ಪ್ರಬುದ್ಧನಲ್ಲ ...." ಎಂದೆ.

"ಆಳವಂದಾರ್‌ರವರೇ ನೀವೂ ಒಬ್ಬ ಕಾದಂಬರಿಕಾರರು. ಒಬ್ಬ ಕಾದಂಬರಿ ಕಾರರ ಕೃತಿಯಲ್ಲಿನ ಅಂತಃಸತ್ವವನ್ನು ಮತ್ತೊಬ್ಬ ಕಾದಂಬರಿಕಾರ ಮಾತ್ರ ಅರಿಯ ಬಲ್ಲ. ನೀವು ಲೇಖನವೊಂದನ್ನು ಬರೆಯಲು ಸಮರ್ಥರು ಎಂಬುದು ನನಗೆ ಗೊತ್ತಿದೆ. ದಯವಿಟ್ಟು ಲೇಖನವನ್ನು ಬರೆದುಕೊಡಿ. ಹಾಗೆಯೇ ಈ ಕೃತಿಯ

ಬಗ್ಗೆ ಪರಿಚಯಿಸಿ" ಎಂದು ಹೇಳಿ ಎಸ್. ವಿ. ಶ್ರೀನಿವಾಸರಾಯರು ಬರೆದಿದ್ದ "ಮಬ್ಬು ಮುಂಜಾವು" ಎಂಬ ಕಾದಂಬರಿಯ ಪ್ರತಿ ಒಂದನ್ನು ನನ್ನ ಕೈಗಿತ್ತರು. ನನ್ನ ಸನ್ಮಿತ್ರರ ಸ್ನೇಹದ ಪಾಶಕ್ಕೆ ಕಟ್ಟುಬಿದ್ದು ನಿರಾಕರಿಸಲಾಗದೆ ಈ ಲೇಖನವನ್ನು ಬರೆಯಲು ಒಪ್ಪಿಕೊಂಡೆ.

ಎಸ್. ವಿ. ಶ್ರೀನಿವಾಸರಾಯರು ನನ್ನ ಸಾಹಿತಿ ಸನ್ಮಿತ್ರರಲ್ಲೊಬ್ಬರು. ಅನೇಕ ಕಾದಂಬರಿಗಳನ್ನೂ, ಸಣ್ಣ ಕತೆಗಳನ್ನೂ ಬರೆದು ಕರ್ನಾಟಕದಲ್ಲಿ ಖ್ಯಾತನಾಮರಾಗಿದ್ದಾರೆ. ಆಗಾಗ್ಗೆ ನಾನೂ ಮತ್ತು ಶ್ರೀನಿವಾಸರಾಯರು ಸಾಹಿತ್ಯ ಸಮ್ಮೇಳನಗಳಲ್ಲಿ ಭೇಟಿಯಾದಾಗ ನಮ್ಮಿಬ್ಬರ ಸ್ನೇಹದ ವಿನಿಮಯವನ್ನು ಮಾಡಿ ಕೊಳ್ಳುತ್ತೇವೆ. ಶ್ರೀನಿವಾಸರಾಯರು ಎಲ್ಲರೊಂದಿಗೂ ಹಸನ್ಮುಖಿಯಾಗಿ ಸೌಜನ್ಯತೆ ಯಿಂದ ಮಾತನಾಡಿಸುತ್ತಾರೆ. ಇದು ಅವರ ಹುಟ್ಟುಗುಣ.

ಎಸ್.ವಿ. ಶ್ರೀನಿವಾಸರಾಯರು ಬರೆದು ಪ್ರಕಟಿಸಿರುವ 'ಮಬ್ಬು ಮುಂಜಾವು' ಕೃತಿಯನ್ನು ಒಂದು ವಾರದ ಕಾಲ ನಿಧಾನವಾಗಿ ಓದಿ ಅದರಲ್ಲಿನ ಅಂತಃಸತ್ವವನ್ನು ಗ್ರಹಿಸಿದ ನಂತರವೇ ಈ ಲೇಖನವನ್ನು ಬರೆಯಲುಪಕ್ರಮಿಸಿದೆ. ಆದರೆ ನಾನು ಆ ಕೃತಿಯ ಬಗ್ಗೆ ವಿಮರ್ಶೆ ಮಾಡಲು ಹೊರಟಿಲ್ಲ. ಆ ಕಾದಂಬರಿಯಲ್ಲಿನ ಕೆಲವು ಉತ್ತಮಾಂಶಗಳನ್ನು ಮಾತ್ರ ಆರಿಸಿ ಬರೆಯುತ್ತಿದ್ದೇನೆ ಅಷ್ಟೆ.

'ಮಬ್ಬು ಮುಂಜಾವು' ಕಾದಂಬರಿ 70ರ ದಶಕದಲ್ಲಿ ಪ್ರವಾಸೋದ್ಯಮದ ಹಿನ್ನೆಲೆಯಲ್ಲಿ ಬರೆದಿದ್ದು 'ಸುಧಾ' ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟ ಗೊಂಡು ಓದುಗರ ಮೆಚ್ಚುಗೆಯನ್ನು ಪಡೆದ ಕೃತಿ. ಧಾರಾವಾಹಿಯಾಗಿ ಪ್ರಕಟ ವಾಗುತ್ತಿದ್ದಂತೆಯೇ ನಾನೂ ಸಹ ಓದಿ ಸಂತೋಷ ಪಟ್ಟಿದ್ದೆ. ಈಗ ಮತ್ತೊಮ್ಮೆ ಓದಲು ಅವಕಾಶ ಸಿಕ್ಕಿತು.

ಈ ಕಾದಂಬರಿಯಲ್ಲಿ ಮೂಡಿಬರುವ ಮುಖ್ಯ ಪಾತ್ರಧಾರಿ ಆನಂದ. ಪ್ರವಾಸೋದ್ಯಮ ಸಂಸ್ಥೆಯೊಂದರಲ್ಲಿ ಮ್ಯಾನೇಜರಾಗಿ ಸೇರಿ ಕನ್ನಡ ನಾಡು ಮತ್ತು ಹೊರನಾಡುಗಳ ಪ್ರೇಕ್ಷಣೀಯ ಸ್ಥಳಗಳಿಗೆ ಪ್ರವಾಸಗಳನ್ನೇರ್ಪಡಿಸಿ ಪ್ರವಾಸಿಗಳನ್ನು ಜೊತೆಯಲ್ಲಿ ಕರೆದೊಯ್ದು ಆಯಾ ನಾಡುಗಳ ಸಂಸ್ಕೃತಿ–ಕಲೆಗಳ ಬಗ್ಗೆ ಪರಿಚಯ ವನ್ನು ಮಾಡಿಕೊಟ್ಟು, ಅಲ್ಲಿನ ಜನಗಳೊಡನೆ ಕಲೆತು, ನಕ್ಕು ನಲಿದು ಮನದ ಬೇಸರವನ್ನು ಪರಿಹರಿಸಿಕೊಳ್ಳುವ ಅವಕಾಶವನ್ನು ಕಲ್ಪಿಸಿ, ಅವರ (ಪ್ರವಾಸಿಗರ) ತೃಪ್ತಿಯಲ್ಲೇ ತನ್ನೆಲ್ಲಾ ಕಷ್ಟ-ಸುಖಗಳನ್ನು ಮರೆಯುವ ಒಬ್ಬ ನಿಷ್ಠಾವಂತ ಪ್ರವಾಸೋದ್ಯಮಿಯ ನೈಜಚಿತ್ರಣ ಈ ಕಾದಂಬರಿಯಲ್ಲಿ ಮೂಡಿ ಬಂದಿದೆ.

ಆನಂದ ಕುಣಿಗಲನ ರಾಜಾರಾಯರ ಹಿರಿಯ ಮಗ. ವಿದ್ಯಾವಂತ ತರುಣ ಸ್ಫುರದ್ರೂಪಿ, ಬುದ್ಧಿವಂತ ಮತ್ತು ಬ್ರಹ್ಮಚಾರಿ ! ಇವನ ತಂದೆ ರಾಜಾರಾಯರು ಕುದುರೆಯ ಜೂಜನ್ನು ಹವ್ಯಾಸವನ್ನಾಗಿ ಹಚ್ಚಿಕೊಂಡು, ಅವರ ಪಿತ್ರಾರ್ಜಿತವಾದ ಅಪಾರ ಆಸ್ತಿಯೆಲ್ಲವನ್ನೂ ಹಾಳುಮಾಡಿ, ಸಾಲಗಾರರ ಕಾಟದಿಂದ ತಪ್ಪಿಸಿಕೊಳ್ಳುವ ಸಲುವಾಗಿ, ಹೆಂಡತಿ (ಶಾರದಮ್ಮ), ಮಗಳು (ವನಜ), ಹಿರಿಯ ಮಗ (ಆನಂದ), ಕಿರಿಯ ಮಗ (ಶ್ರೀನಿವಾಸ) ಇವರುಗಳನ್ನು ಅನಾಥರನ್ನಾಗಿ ಮಾಡಿ, ಯಾರಿಗೂ ಹೇಳದೆ ಅಗೋಚರ ಸ್ಥಳಕ್ಕೆ ದೇಶಾಂತರ ಹೊರಟುಹೋಗುತ್ತಾರೆ. ಸಂಸಾರದ ಹೊಣೆಯನ್ನು ಹೊತ್ತ ಆನಂದ, ತನ್ನ ತಾಯಿ, ತಂಗಿ, ತಮ್ಮನೊಂದಿಗೆ ಬೆಂಗಳೂರಿಗೆ ವಲಸೆ ಬಂದು, ಸಂಸಾರದ ನಿರ್ವಹಣೆಗಾಗಿ ಸಾಂಬಶಿವನ್ ಎಂಬುವರು ನಡೆಸುತ್ತಿದ್ದ ಪ್ರವಾಸೋದ್ಯಮ ಸಂಸ್ಥೆಯಲ್ಲಿ ಮೊದಲಿಗೆ ಗೈಡಾಗಿ ಸೇರುತ್ತಾನೆ. ಇವನ ದಕ್ಷತೆ ಸೇವಾನಿಷ್ಠೆಗಳನ್ನು ಗಮನಿಸಿದ ಆ ಸಂಸ್ಥೆಯ ಛೇರ್ಮನ್ ಸಾಂಬಶಿವನ್‌ರವರು ಕೆಲವು ಕಾಲಾನಂತರ ಆ ಸಂಸ್ಥೆಯ ಮ್ಯಾನೇಜರ್ ಆಗಿ ಆನಂದನನ್ನು ನೇಮಿಸುತ್ತಾರೆ. ಆ ಸಂಸ್ಥೆಯ ಹೆಚ್ಚಿನ ಹೊಣೆ ಆನಂದನ ಮೇಲೆ ಬೀಳುತ್ತದೆ. ಅದರಿಂದಾಗಿ 'ಟೂರ್' (ಪ್ರವಾಸ)ನಲ್ಲೇ ಇದ್ದು ತನ್ನ ಮನೆಗೆ ಬರುವುದೇ ಅಪರೂಪವಾಗುತ್ತದೆ. ಇವನ ತಾಯಿ ಶಾರದಮ್ಮನಿಗೆ ಒಂದೇ ಯೋಚನೆ. ಮದುವೆಯ ವಯಸ್ಸಿಗೆ ಬಂದ ಮಗಳು ವನಜಳ (24) ಮದುವೆಯ ಬಗ್ಗೆ ಮಗನಿಗೆ ಎಷ್ಟೋ ಸಲ ತಿಳಿಸಿದರೂ ಆನಂದ ನಿರ್ಲಕ್ಷ್ಯ ಮನೋಭಾವದಿಂದಿದ್ದು ತನ್ನ ಕರ್ತವ್ಯದ ಕಡೆಗೇ ಹೆಚ್ಚು ಗಮನ ಕೊಟ್ಟು ಅದರಲ್ಲೇ ತಲ್ಲೀನನಾಗುತ್ತಾನೆ, ಇವನ ಕಚೇರಿಯಲ್ಲಿದ್ದ ಟೈಪಿಸ್ಟ್ ವಿನುತ ಆಕರ್ಷಣೀಯ ಬೆಡಗಿನ ಹುಡುಗಿ. ಇವನನ್ನು ಆಕರ್ಷಿಸಲೆತ್ನಿಸುತ್ತಾಳೆ, ಆದರೆ ಆನಂದ ವಿನುತಳ ಬೆಡಗು ಬಿನ್ನಾಣಗಳಿಗೆ ಮಣಿಯದೆ ತನ್ನ ಕರ್ತವ್ಯದಲ್ಲೇ ನಿರತನಾಗಿರುತ್ತಾನೆ.

ಈ ಮಧ್ಯೆ ಒಮ್ಮೆ ಸಂಸ್ಥೆಯ ಬಸ್ಸೊಂದು ಪ್ರವಾಸಿಗರನ್ನು ಪ್ರೇಕ್ಷಣೀಯ ಸ್ಥಳಗಳಿಗೆ ಕರೆದೊಯ್ಯುತ್ತಿದ್ದಾಗ ಆ ಬಸ್ಸು ಅಪಘಾತಕ್ಕೊಳಗಾಗಿ, ಅದೇ ಬಸ್ಸಿನಲ್ಲಿ ಪ್ರಯಾಣ ಮಾಡುತ್ತಿದ್ದ ಗಿರೀಶ ಎಂಬ ಪ್ರವಾಸಿಗನ ಕಾಲುಗಳು ಜಜ್ಜಿ ಹೋಗಿ ಅವನನ್ನು ಆಸ್ಪತ್ರೆಗೆ ಸೇರಿಸಿದ ಆನಂದ, ಗಿರೀಶನ ತಂಗಿ ಪುಷ್ಪಾ ಎಂಬುವವಳನ್ನು ತನ್ನ ಮನೆಗೆ ಕರೆ ತಂದು ಇರಿಸಿಕೊಳ್ಳುತ್ತಾನೆ. ಆಗಾಗ್ಗೆ ಆಸ್ಪತ್ರೆಗೆ ಹೋಗಿ ಗಿರೀಶನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿರುತ್ತಾನೆ. ಈ ಮಧ್ಯೆ ಗಿರೀಶನ ತಂಗಿ ಪುಷ್ಪ (ತರುಣಿ) ಆನಂದನ ರೂಪರೇಷೆಗಳಿಗೆ ಮರುಳಾಗಿ ಅವನನ್ನು ತನ್ನವನನ್ನಾಗಿ ಮಾಡಿಕೊಳ್ಳಲು ಎಷ್ಟೋ ಸಲ ಯತ್ನಿಸಿ ನಿರಾಶಳಾಗುತ್ತಾಳೆ. ಕೆಲವು ಕಾಲದ ನಂತರ ಗಿರೀಶ ಗುಣಮುಖನಾಗಿ ಆಸ್ಪತ್ರೆಯಿಂದ ಬಿಡುಗಡೆ ಹೊಂದುತ್ತಾನೆ. ಆದರೆ ಕುಂಟನಾಗಿಯೇ ಬಾಡಿಗೆಯ ಮನೆಯೊಂದರಲ್ಲಿ ತನ್ನ ತಂಗಿ ಪುಷ್ಪಳೊಡನೆ

ವಾಸಿಸುತ್ತಾನೆ. ಆನಂದ ಆಗಾಗ್ಗೆ ಗಿರೀಶನ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವ ಸಲುವಾಗಿ ಗಿರೀಶನ ಮನೆಗೆ ಬಂದು ಹೋಗುತ್ತಿದ್ದಾಗ ಪುಷ್ಪ ತನ್ನ ಬೆಡಗು ಬಿನ್ನಾಣಗಳಿಂದ ಆಕರ್ಷಿಸಲೆತ್ನಿಸುತ್ತಾಳೆ. ಆನಂದ ಇವಳ ಬಲೆಗೆ ಬೀಳದೆ ತಪ್ಪಿಸಿಕೊಳ್ಳುತ್ತಲೇ ಇರುತ್ತಾನೆ. ಜೀವನ ನಿರ್ವಹಣೆಗಾಗಿ ಪುಷ್ಪ ಒಂದು 'ಸ್ಯಾರಿ ಎಂಪೋರಿಯಂ'(ಸೀರೆಗಳನ್ನು ಮಾರುವ ಅಂಗಡಿ)ನಲ್ಲಿ 'ಸೇಲ್ಸ್ ಗರ್ಲ್' ಆಗಿ ಸೇರಿ ಕೆಲವು ದಿನಗಳ ನಂತರ ಆ ಕೆಲಸವನ್ನು ಬಿಟ್ಟು ಹ್ಯಾಂಡಿಕ್ರಾಫ್ಟ್ ಎಂಪೋರಿಯಂನಲ್ಲಿ ಕ್ಲರ್ಕ್ : ಟೈಪಿಸ್ಟಾಗಿ ಸೇರುತ್ತಾಳೆ. ಅದೇ ಸಂಸ್ಥೆಯಲ್ಲಿದ್ದ ಮುಕುಂದ ಎಂಬ ಉದ್ಯೋಗಿ ತರುಣನನ್ನು ಆಕರ್ಷಿಸುತ್ತಾಳೆ. ಮುಕುಂದ ನಾಲ್ಕಾರು ದಿನ ಪುಷ್ಪಳೊಂದಿಗೆ ಅಲೆದಾಡುತ್ತಾನೆ. ಆದರೆ ಪುಷ್ಪ ಅವನನ್ನು ಬಯಸಿದಂತೆ ನಟಿಸುತ್ತಾ ಅವನೊಂದಿಗೆ ಚಕ್ಕಂದವಾಡುತ್ತಾಳೆ.

ಈ ಮಧ್ಯೆ ಆನಂದ ಪ್ರವಾಸಿಗರೊಂದಿಗೆ ಕೊಲಂಬೊ (ಸಿಲೋನ್)ಗೆ ತೆರಳುತ್ತಾನೆ. ಪ್ರವಾಸಿಗರಿಗೆ ಸೌಕರ್ಯವನ್ನೇರ್ಪಡಿಸಲು ಅಲ್ಲಿನ ಸಮಾಜವೊಂದರ ಮ್ಯಾನೇಜರ್ ದೇವಾನಾಂ ಸಿಂಘೆ ಎಂಬುವರ ಪರಿಚಯವನ್ನು ಹೊಂದಿ ಅವರ ಮನೆಯಲ್ಲಿಯೇ ಪ್ರವಾಸಿಗರೆಲ್ಲರಿಗೂ ಊಟೋಪಚಾರಗಳಾಗುತ್ತವೆ. ದೇವಾನಾಂ ಸಿಂಘೆಯ ಮಗಳು ಸುಭದ್ರಾ ಸಿಂಘೆ (ತರುಣಿ) ಎಂಬುವಳು ಆನಂದನನ್ನು ನೋಡಿ ತನ್ನತ್ತ ಆಕರ್ಷಿಸುತ್ತಾ ಅವನೊಂದಿಗೆ ಚೆಲ್ಲಾಟವಾಡುತ್ತಾಳೆ. ತನ್ನನ್ನು ಮದುವೆಯಾಗೆಂದು ಒತ್ತಾಯಿಸುತ್ತಾಳೆ. ಆದರೆ ಆನಂದ ಅವಳ ಮೋಹಪಾಶಕ್ಕೊಳಗಾಗದೆ. ಕೊಲಂಬೋದಲ್ಲಿದ್ದ, ಐತಿಹಾಸಿಕ ಅವಶೇಷಗಳಾದ 12ನೇ ಶತಮಾನದಲ್ಲಿ ರಾಜ ಪರಾಕ್ರಮ ಬಾಹು ಕಟ್ಟಿಸಿದ್ದ 'ಪೊನ್ನುರುವಾ' ಎಂಬ ಆಗ ಉಚ್ಛ್ರಾಯ ಸ್ಥಿತಿಯಲ್ಲಿದ್ದು, ಈಗ ಪಾಳು ಬಿದ್ದಿರುವ 7 ಅಂತಸ್ತಿನ ಕುರುಹಾಗಿ ಉಳಿದಿರುವ ಎರಡು ಅಂತಸ್ತಿನ ಮುರಿದು ಬಿದ್ದ ಅರಮನೆ, ಶಿವಾಲಯ, 'ವತದಾಗೆ' ಎಂಬ ಗುಂಡಾಗಿ ಕಟ್ಟಿಸಿರುವ ಬೌದ್ಧ ವಿಹಾರ–ಲಂಕವಿಹಾರ–ಕಿರಿವಿಹಾರ–ಗಾಲ್‌ವಿಹಾರದಲ್ಲಿ ನಿಂತಿರುವ ಬುದ್ಧನ ವಿಗ್ರಹ ಎಲ್ಲವನ್ನೂ ಸಂದರ್ಶಿಸಿದ ನಂತರ ಪ್ರವಾಸಿಗರನ್ನು ಭಾರತಕ್ಕೆ ವಾಪಸ್ಸು ಕರೆತರುತ್ತಾನೆ. ಸಿಲೋನ್ ದೇಶದ ಪ್ರಕೃತಿ ಸೌಂದರ್ಯಗಳನ್ನು ಲೇಖಕರು ಚೆನ್ನಾಗಿ ವರ್ಣಿಸಿರುತ್ತಾರೆ.

ಆನಂದನ ಕರ್ತವ್ಯ ಶ್ರದ್ಧೆ, ಹುರುಪು ಉತ್ಸಾಹಗಳನ್ನು ಕಂಡ ಪ್ರವಾಸೋದ್ಯಮ ಸಂಸ್ಥೆಯ ಮುಖ್ಯಸ್ಥರು ಆನಂದನನ್ನು ಆ ಸಂಸ್ಥೆಯ 'ಜನರಲ್ ಮ್ಯಾನೇಜರ್' ಆಗಿ ನೇಮಿಸುತ್ತಾರೆ.

ತಾಯಿ ಶಾರದಮ್ಮನ ಒತ್ತಾಯಕ್ಕೆ ಮಣಿದ ಆನಂದ, ತನ್ನ ತಂಗಿ ವನಜಳ

ಮದುವೆಯ ಬಗ್ಗೆ ಜವಾಬ್ದಾರಿಯನ್ನು ಹೊತ್ತು ಮಂಡ್ಯ ಜಿಲ್ಲೆಯ ಹೊಸಳ್ಳಿಯ ಸಾಹುಕಾರ ಅಶ್ವತ್ಥಯ್ಯನ ಮಗ ವಿಶ್ವನಾಥ ಎಂಬ ತರುಣನಿಗೆ ತನ್ನ ತಂಗಿ ವನಜಳನ್ನು ಕೊಟ್ಟು ಮದುವೆ ಮಾಡಲು ನಿರ್ಧರಿಸಿ, ಮದುವೆಯ ಬಗ್ಗೆ ಮಾತುಕತೆ ಗಳನ್ನಾಡಲು ತನ್ನ ತಂಗಿ ವನಜಳನ್ನು ತನ್ನೊಂದಿಗೆ ಹೊಸಳ್ಳಿಯ ಸಾಹುಕಾರ ಅಶ್ವತ್ಥಯ್ಯನ ಮನೆಗೆ ಕರೆತರುತ್ತಾನೆ. ಅಶ್ವತ್ಥಯ್ಯನ ಮಗ ವಿಶ್ವನಾಥ ತರುಣ ; ಬಿ.ಎಸ್.ಸಿ. ಅಗ್ರಿಕಲ್ಚರ್‌ನಲ್ಲಿ ಫೇಲ್ ಆಗಿದ್ದ. ಮೇಲಾಗಿ ಸಂಸ್ಕೃತ ಪಂಡಿತ. ತನ್ನ ಮನೆತನದ ಆಚಾರ ವ್ಯವಹಾರಗಳನ್ನು ರೂಢಿಸಿಕೊಂಡಿರುತ್ತಾನೆ. ಹಿರಿಯರ ಸಮಕ್ಷಮದಲ್ಲಿ ಹುಡುಗ ಹುಡುಗಿಯರ (ವಿಶ್ವನಾಥ ಮತ್ತು ವನಜ) ನೋಡಾಟ ವಾದ ನಂತರ, ವನಜ ವಿಶ್ವನಾಥನನ್ನು ಮದುವೆಯಾಗಲು ಒಪ್ಪದೆ ನಿರಾಕರಿಸು ತ್ತಾಳೆ. ವಿಶ್ವನಾಥ ತನ್ನ ತಲೆಯಲ್ಲಿ ಜುಟ್ಟನ್ನು ಬಿಟ್ಟಿದ್ದ ಎಂಬ ಒಂದೇ ಕಾರಣ ದಿಂದ ! ತಂಗಿ ವನಜಳ ನಿರಾಕರಣೆಯಿಂದ ಬೇಸತ್ತ ಆನಂದ ಬೆಂಗಳೂರಿಗೆ ಹಿಂದಿರುಗಿದ ನಂತರ ತನ್ನ ಕರ್ತವ್ಯದ ಮೇಲೆ ಕಲ್ಕತ್ತಕ್ಕೆ ಹೊರಟು ಹೋಗುತ್ತಾನೆ. ಕೆಲವು ದಿನಗಳ ನಂತರ ಆನಂದ ತನ್ನ ತಂಗಿ ವನಜಳಿಗೆ ಕಲ್ಕತ್ತದ ರಂಗನಾಥ (ತರುಣ, ಪದವೀಧರ-ಉದ್ಯೋಗಿ) ಎಂಬುವನನ್ನು ಗೊತ್ತು ಪಡಿಸಿ, ಹಾಗೆಯೇ ಗಿರೀಶನಿಗೆ ಒಂದು ಬಡ ಹೆಣ್ಣನ್ನು ಗೊತ್ತು ಮಾಡಿಕೊಂಡು ಬರುತ್ತಾನೆ. ವನಜಳನ್ನು ನೋಡಲು ಬಂದ ರಂಗನಾಥ ವನಜಳನ್ನು ಒಪ್ಪದೆ ವನಜಳ ಜೊತೆ ಯಲ್ಲಿದ್ದ ಪುಷ್ಪಳನ್ನು ನೋಡಿ ಮೆಚ್ಚಿಕೊಂಡು ಮದುವೆಯಾಗಲು ಇಚ್ಛಿಸುತ್ತಾನೆ. ಆದರಿಂದಾಗಿ ಶಾರದಮ್ಮನ ಸುಡುವ ಕಣ್ಣು ಪುಷ್ಪಳತ್ತ ಹೊರಡುತ್ತದೆ. ಆದರೆ ಪುಷ್ಪಳಿಗೆ ರಂಗನಾಥನನ್ನು ಮದುವೆಯಾಗಲು ಇಷ್ಟವಿಲ್ಲವೆಂಬುದನ್ನರಿತ ಗಿರೀಶ ತನ್ನ ತಂಗಿ ಪುಷ್ಪಳನ್ನು ಹತ್ತಿರಕ್ಕೆ ಕರೆದು,

"ನಿಂಗೆ ಬುದ್ಧಿ ಇಲ್ಲ ಪುಷ್ಪss, ಸುಖಾನ ಅಟ್ಟಿಸಿಕೊಂಡು ಹೋದರೆ ಅದು ಎಂದೂ ಸಿಗೋಲ್ಲ. ಸುಖ ಅನ್ನೋದು ಮರುಳುಗಾಡಿನ ಮೃಗಜಲದ ಹಾಗೆ. ಸಿಕ್ಕಿದ್ರಲ್ಲಿ ತೃಪ್ತಿ ಕಾಣೋ ಪ್ರವೃತ್ತಿ ಬೆಳೆಸ್ಕೊಂಡ್ರೆ, ಸುಖ ತಾನೇ ತಾನಾಗಿ ಸಿಗುತ್ತೆ, ನೀನು ರಂಗನಾಥನನ್ನೇ ಮದುವೆಯಾಗಿ ಅವನೊಂದಿಗೆ ಅನುಸರಿಸಿ ಕೊಂಡು ಹೋಗೋದನ್ನ ಕಲಿ. ಏಕೆ ನೀನು ಸುಖವಾಗಿರೋಲ್ಲ ಅನ್ನೋದನ್ನ ನಾನು ನೋಡ್ತೀನಿ. ಸುಖ ದುಃಖ ಅನ್ನೋದು ತೃಪ್ತಿ ಅತೃಪ್ತಿಯ ಇನ್ನೊಂದು ಮುಖ ಅಷ್ಟೇ ಪುಷ್ಪಾss" ಎಂದು ಬುದ್ಧಿವಾದ ಹೇಳುತ್ತಾನೆ. ಆದರೆ ಪುಷ್ಪ ತನ್ನ ಮನಸ್ಸಿಗೆ ಆನಂದನ ಗೀಳನ್ನು ಹಚ್ಚಿಕೊಂಡು ಕೊರಗುತ್ತಿರುತ್ತಾಳೆ. ರಂಗನಾಥನನ್ನು ತನ್ನ ಗಂಡ ನನ್ನಾಗಿ ಅಂಗೀಕರಿಸಲು ಒಪ್ಪದೆ ತೊಳಲಾಟಕ್ಕೆ ಸಿಕ್ಕಿ, ಒಮ್ಮೆ ಆನಂದ, ಮತ್ತೊಮ್ಮೆ

ಮುಕುಂದನತ್ತ ಇವಳ ಚಂಚಲ ಮನಸ್ಸು ಅತ್ತಿಂದಿತ್ತ ಇತ್ತಿಂದತ್ತ ತೂಗುಯ್ಯಾಲೆ ಹರಿದಾಡುತ್ತಿರುತ್ತದೆ.

ಪುಷ್ಪ ಒಮ್ಮೆ ಮುಕುಂದನನ್ನು ಕಂಡು ತನ್ನನ್ನು ಮದುವೆಯಾಗೆಂದು ಒತ್ತಾಯಿಸಿದಾಗ, ಮುಕುಂದ ಪುಷ್ಪಾಳ ಅಭಿಲಾಷೆಯನ್ನು ನಿರಾಕರಿಸಿ, ಪುಷ್ಪಳ ಜೊತೆಯಲ್ಲಿದ್ದ ವನಜಳನ್ನು ಮೆಚ್ಚಿ, ವನಜಳನ್ನು ಮದುವೆಯಾಗುವುದಾಗಿ ತಿಳಿಸಿದಾಗ, ಪುಷ್ಪಳ ಆಶೆಆಕಾಂಕ್ಷೆಗಳು ಭಗ್ನಗೊಳ್ಳುತ್ತವೆ !

ಈ ಮಧ್ಯೆ ಆನಂದ, ಗಿರೀಶ ಮತ್ತು ಅವನ ತಂಗಿ ಪುಷ್ಪಳ ಮದುವೆಗಳನ್ನು ಒಟ್ಟಿಗೆ ನೆರವೇರಿಸಲು ಮುಂದಾಗಿ, ಗಿರೀಶನಿಗೆ ಧನಸಹಾಯ ಮಾಡುತ್ತಾನೆ. ಗಿರೀಶ ತನ್ನ ತಂಗಿ ಪುಷ್ಪಳೊಂದಿಗೆ ಅವೆನ್ಯೂ ರಸ್ತೆಯಲ್ಲಿನ ಆಭರಣಗಳ ಅಂಗಡಿಗೆ ಹೋಗಿ ಪುಷ್ಪಳಿಗೆ ಬೇಕಾದ ಆಭರಣಗಳನ್ನೂ, ತನಗೆ ಬೇಕಾದ ಜವಳಿ ಬಟ್ಟೆಗಳನ್ನೂ ಖರೀದಿಸಿ ಒಂದು ಆಟೋರಿಕ್ಷಾದಲ್ಲಿ ತನ್ನ ಮನೆಗೆ ಹಿಂದಿರುಗಿ ಬರುತ್ತಿದ್ದಾಗ ಗ್ರಹಚಾರವಶಾತ್ ಸಿಟಿ ಮಾರ್ಕೆಟ್‌ನ ಬಳಿ ದುರ್ಘಟನೆ ನಡೆದು ಎದುರಿನಿಂದ ಬಂದ ಲಾರಿಯೊಂದು ಆಟೋರಿಕ್ಷಾಕ್ಕೆ ಡಿಕ್ಕಿ ಹೊಡೆದುದರ ಪರಿಣಾಮವಾಗಿ, ರಿಕ್ಷಾ ಉರುಳಿ ಬಿದ್ದು ಲಾರಿ ರಿಕ್ಷಾದ ಮೇಲೆ ಹರಿದುದರ ಪರಿಣಾಮವಾಗಿ, ಗಿರೀಶ ಸ್ಥಳದಲ್ಲೇ ಅಸುನೀಗುತ್ತಾನೆ. ಅಪಘಾತದಲ್ಲಿ ಗಾಯಗೊಂಡ ಪುಷ್ಪ ಮತ್ತು ಆಟೋ ಡ್ರೈವರನ್ನು ಸಾರ್ವಜನಿಕರು ವಿಕ್ಟೋರಿಯಾ ಆಸ್ಪತ್ರೆಗೆ ಸೇರಿಸುತ್ತಾರೆ. ಈ ದುರ್ಘಟನೆಯಲ್ಲಿ ಪುಷ್ಪಳ ಕಾಲುಗಳಿಗೆ ಹೆಚ್ಚು ಪೆಟ್ಟಾಗಿ ಅವಳ ಕಾಲುಗಳ ಮೂಳೆಗಳು ಮುರಿದಿರುತ್ತವೆ. ಪುಷ್ಪ ಪ್ರಜ್ಞಾಹೀನಳಾಗುತ್ತಾಳೆ. ಈ ದುರ್ಘಟನೆಯ ವಿಷಯವನ್ನು ತಿಳಿದ ಆನಂದ ವಿಕ್ಟೋರಿಯಾ ಆಸ್ಪತ್ರೆಗೆ ಬಂದು ಅರೆ ಪ್ರಜ್ಞಾವಸ್ಥೆಯಲ್ಲಿದ್ದ ಪುಷ್ಪಳನ್ನು ಕಂಡು ವ್ಯಥೆಗೊಳ್ಳುತ್ತಾನೆ. ಪುಷ್ಪ ಪ್ರಜ್ಞೆ ತಿಳಿದ ನಂತರ, ಆನಂದ ಅವಳ ಪಕ್ಕದಲ್ಲಿ ಕುಳಿತು ಸಮಾಧಾನಪಡಿಸಲು ಯತ್ನಿಸಿದಾಗ, ಪುಷ್ಪ ಆನಂದನನ್ನು ನೋಡಿ ಗಹಗಹಿಸಿ ನಗುತ್ತಾ,

"ನನ್ನ ಕೈಕಾಲುಗಳು ಮುರಿದುಹೋಗಿವೆ. ಈಗ್ಲಾದ್ರೂ ನನ್ನನ್ನು ಮದುವೆಯಾಗ್ತೀರಾ ಆನಂದ !"

ಎಂದಾಗ, ಅವನು ಒಂದು ನಿರ್ಧಾರಕ್ಕೆ ಬಂದು ಪುಷ್ಪಳ ತಲೆಯನ್ನು ನೇವರಿಸುತ್ತಾ "ನಾನು ನಿನ್ನನ್ನು ಮದುವೆಯಾಗುವ ಸಲುವಾಗಿಯೇ ನಿನ್ನಲ್ಲಿಗೆ ಬಂದಿದ್ದೇನೆ ಪುಷ್ಪಾಽಽ.... ನಾಳೆಯೇ ನಮ್ಮಿಬ್ಬರ ರಿಜಿಸ್ಟರ್ ಮದುವೆ ! ಈಗ್ಲಾದ್ರೂ ನೀನು ಶಾಂತಚಿತ್ತಳಾಗು" ಎಂದು ಹೇಳಿ, ಪುಷ್ಪಳನ್ನು ಸಾಂತ್ವನಗೊಳಿಸಿ ಭರವಸೆ

ಯನ್ನಿತ್ತು, ತನ್ನ ಕರ್ತವ್ಯದ ಮೇಲೆ ಹೊರಟುಹೋಗುತ್ತಾನೆ. ಆಗ ಪುಷ್ಪಳ ಮಬ್ಬು ಹರಿದಂತೆ ಕಂಡುಬರುತ್ತದೆ. ಸೊಬಗಿನ ಮುಂಜಾವನ್ನು ನಿರೀಕ್ಷಿಸಿದ ಪುಷ್ಪ ಹಸನ್ಮುಖಿಯಾಗುತ್ತಾಳೆ.

ಆನಂದ ಪುಷ್ಪಳನ್ನು ಮದುವೆಯಾದನೇ ಇಲ್ಲವೇ ? ತನ್ನ ತಂಗಿ ವನಜಳ ಮದುವೆ ಮಾಡಿದನೇ ಇಲ್ಲವೇ ? ಎಂಬ ಪ್ರಶ್ನೆಗಳು ನಿಗೂಢವಾಗಿಯೇ ಉಳಿಯುತ್ತವೆ. ಇಷ್ಟೇ ಈ ಕಾದಂಬರಿಯ ಸೂಕ್ಷ್ಮ ಪರಿಚಯ.

ಲೇಖಕರ ಶೈಲಿ ಕಥೆಯನ್ನು ಹೆಣೆಯುವುದರಲ್ಲಿ ಪಳಗಿದೆ. ಓದುಗರನ್ನು ಸುಲಲಿತವಾಗಿ ಓದಿಸಿಕೊಂಡು ಹೋಗುತ್ತದೆ ಈ ಕೃತಿ 'ಮಬ್ಬು ಮುಂಜಾವು'.

ಕಡೆಯದಾಗಿ ಒಂದು ಮಾತು–

ಎಸ್.ವಿ. (ಸಾರಂಗಿ ವೆಂಕಟರಾಮಯ್ಯನವರ ಮಗ) ಶ್ರೀನಿವಾಸರಾಯರಿಗಿಂತಲೂ ನಾನು ವಯಸ್ಸಿನಲ್ಲಿ ಹಿರಿಯನಾದುದರಿಂದ ಅವರನ್ನು ಆಶೀರ್ವದಿಸುವ ಅಧಿಕಾರವೂ ಸಹ ನನಗಿರುವುದರಿಂದ, ನನ್ನ ಆತ್ಮೀಯರೂ ಸ್ನೇಹಜೀವಿಯೂ ಆದ ಶ್ರೀನಿವಾಸರಾಯರನ್ನು, ಅವರಿಗೆ 60 ವರ್ಷಗಳು ತುಂಬುತ್ತಿರುವ ಈ ಸುಸಂದರ್ಭದಲ್ಲಿ ತುಂಬು ಹೃದಯದಿಂದ,

"ವರುಷ 60 ತುಂಬಿದರೂ ಹರುಷ ತುಂಬಿದ ಹೃದಯ
ಬಾಳಿನಲಿ ತಮಗಿರಲಿ ಶತವರುಷದ ಸೂರ್ಯೋದಯ"

ಎಂದು ಹರಸುತ್ತಾ ನನ್ನ ಈ ಕಿರು ಲೇಖನವನ್ನು ಮುಕ್ತಾಯಗೊಳಿಸುತ್ತೇನೆ.



# ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು

—ಪ್ರೇಮಾಭಟ್

ವಿದ್ಯೆ ವ್ಯಕ್ತಿಯನ್ನು ಜ್ಞಾನ ಸಂಪನ್ನನನ್ನಾಗಿಯೂ ಸಂಸ್ಕಾರವಂತನನ್ನಾಗಿಯೂ ಮಾಡುತ್ತದೆಯೇ ಹೊರತು, ಸಾಹಿತಿಯನ್ನಾಗಿ ಮಾಡುವುದಿಲ್ಲ. ಸಾಹಿತ್ಯ ಎಲ್ಲರ ಸ್ವತ್ತಂತು ಅಲ್ಲ. ಕೆಲವರ ಕೈಗೆ ಮಾತ್ರ ಎಟುಕುವ, ಉಳಿದವರ ಭಾಗಕ್ಕೆ ಮರೀಚಿಕೆಯಾಗುಳಿದಿರುವ ಸಾಹಿತ್ಯ ಲೋಕಾನುಭವ. ನಿರಂತರ ಅಭ್ಯಾಸದೊಂದಿಗೆ ಹುಟ್ಟು ಪ್ರತಿಭೆಯನ್ನು ಹುಟ್ಟುಹಾಕಿಕೊಂಡು ಅಥವಾ ಕಲೆಹಾಕಿಕೊಂಡು ಸ್ಥೈದಾಳಿ ನಿಲ್ಲುತ್ತದೆ. ಹೀಗೆ ಲಕ್ಷಕ್ಕೊಬ್ಬರಿಗೆ ಜನ್ಮದಾತವಾಗಿ ಲಭ್ಯವಾಗುವ ಈ ಒಂದು ಮಹೋನ್ನತ ನೆಲೆ ವ್ಯಕ್ತಿಯ ಅಂತರ್ಯದಲ್ಲಿ ಆವಿರ್ಭವಿಸುತ್ತದೆ. ಹೀಗೆ ವ್ಯಕ್ತಿಯ ಅಂತರ್ಯದಲ್ಲಿ ಮೂರ್ತಿಭವಿಸಿದ ಈ ನೆಲೆ ಕಲೆ, ಕಾವ್ಯ, ಸಾಹಿತ್ಯವಾಗಿ ಅನಾವರಣ ಗೊಂಡು ಹೊರಹೊಮ್ಮುತ್ತದೆ, ಧುಮ್ಮಿಕ್ಕಿ ಬರುತ್ತದೆ. ಇತ್ತೀಚಿನ ದಿವಸಗಳಲ್ಲಿ ಎಲ್ಲರೂ ಲೇಖಕರಾಗಬೇಕೆಂಬ ಹುಮ್ಮಸ್ಸು ಹೊತ್ತಿರುವುದನ್ನು ನಾವು ಕಾಣು ತ್ತಿದ್ದೇವೆ. ಆದರೆ ಇದು ಸಾಧ್ಯವಿಲ್ಲದಮಾತೇ ಸರಿ. ಬಹು ಕಸರತ್ತಿನಿಂದ ಕಾರ್ಯರಂಗಕ್ಕಿಳಿದರೂ ಅದು ನಿರಂತರ ನೆಲೆಯಾಗಿ ನಿಲ್ಲಲಾರದು.

ಭಾರತ ಸರ್ಕಾರದ ರಕ್ಷಣಾ ಇಲಾಖೆಯಲ್ಲಿ ಸೈಂಟಿಫಿಕ್ ಅಧಿಕಾರಿಗಳಾಗಿ ಸೇವೆ ಸಲ್ಲಿಸಿ ನಿವೃತ್ತರಾದ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರದ್ದು ಬಹುಮುಖ ಪ್ರತಿಭೆ. ಅಂತೆಯೇ ಅವರ ಲೋಕಾನುಭವವೂ ಹಿರಿದು. ಸಾಹಿತ್ಯದ ವಿವಿಧ ಪ್ರಕಾರ ಗಳಲ್ಲಿ ಅವರು ಕೈಯಾಡಿಸಿದ್ದಾರೆ.

ಶ್ರೀಯುತರ ಕಾದಂಬರಿಗಳಲ್ಲಿ ಬರುವ ಹೆಣ್ಣು ಪಾತ್ರಗಳೂ ಸರಳ ಸುಂದರ. ಹೆಣ್ಣು ಎಂದಾಕ್ಷಣ ಕಣ್‌ದೆರೆದ ಮೇಲೆ ಅಚ್ಚೊತ್ತಿ ನಿಲ್ಲುವುದು ಅವಳ ಭಾವನಾತ್ಮಕ ಸೌಂದರ್ಯ. ಹುಟ್ಟಿನಿಂದ ಕೊನೆಯವರೆಗೂ ಅದೂ ಪರರನ್ನಾಶ್ರಯಿಸಿಕೊಂಡೇ ಬದುಕಬೇಕು ಎನ್ನುವ ವಿಚಾರದ ದಿಕ್ಕು ಇಂದು ಕೊಂಚ ಮಟ್ಟಿಗೆ ಬದಲಾಗಿ ಅವಳ ಸ್ಥಾನಮಾನ ಹೆಚ್ಚಿದೆಯಾದರೂ, ಇಂದಿಗೂ ಅವಳ ಮೇಲೆ ನಡೆಯುತ್ತಿರುವ ದೌರ್ಜನ್ಯ, ಶೋಷಣೆಗಳಿಗೇನೂ ಕಡಿಮೆಯಿಲ್ಲ. ಜೊತೆಗೆ ಸಾಮಾಜಿಕ ಕಟ್ಟುಪಾಡು ಗಳೂ, ಧರ್ಮದ ಬಿಗಿ ಮುಷ್ಟಿಯಲ್ಲಿ ಅವಳಿನ್ನೂ ಬಂಧಿಯಾಗೇ ಇದ್ದಾಳೆ. ಕೊಂಚ

ಧೈರ್ಯವಂತ ಹೆಣ್ಣು ಜಾತಿಯ ಕಟ್ಟುಪಾಡುಗಳಿಂದ ಹೊರಬರಲು ಯತ್ನಿಸಿದಾಗ ಅವಳಿಗೆ ಸಿಗುವ ಸ್ವಗತ ಅಷ್ಟರಲ್ಲೇ ಇದೆ. ಪರಿತ್ಯಕ್ತೆ, ವಿಧವೆ, ಪತಿಯಿಂದ ವಂಚಿತಳಾದ ಹೆಣ್ಣಿನ ಬದುಕಿನಲ್ಲಿ ಈವತ್ತಿಗೂ ಹೆಚ್ಚಿನ ಸುಧಾರಣೆ ಏನೂ ಕಾಣದಿರುವುದನ್ನು ಗಮನಿಸಬಹುದು. ವಸ್ತುಸ್ಥಿತಿ ಹೀಗಿರುವಾಗ ಹೆಚ್ಚಿನ ಚಿತ್ರಣ ಕಥೆ ಕಾದಂಬರಿಗಳಲ್ಲಿ ಇದಕ್ಕಿಂತ ಭಿನ್ನವಾದದ್ದನ್ನು ಕೊಡಲು ಹೇಗೆ ಸಾಧ್ಯ ?

ಶ್ರೀಯುತರು ತಮ್ಮ ಕಾದಂಬರಿಯಲ್ಲಿ ಹೆಣ್ಣನ್ನು ದೇವತೆ ಎಂದಾಗಲಿ ಅಥವಾ ಅವಳೂ ಕೇವಲ ಭೋಗದ ವಸ್ತು ಎಂದಾಗಲಿ ಚಿತ್ರಿಸಿಲ್ಲ. ಅವಳೂ ಹೇಗೆ ಮಮತಾಮಯಿ ತಾಯಿಯಾಗಿ, ವಾತ್ಸಲ್ಯದ ಹೆಂಡತಿಯಾಗಿ, ಅಕ್ಕ, ತಂಗಿಯಾಗಿ ಕುಟುಂಬದ ಹಿತವನ್ನು ಕಾಪಾಡಬಲ್ಲಳು ಎಂಬುದನ್ನು ಸರಳ ಸುಂದರವಾಗಿ ಚಿತ್ರಿಸಿದ್ದಾರೆ.

ಅವರ ಕಾದಂಬರಿಗಳಾದ ರಂಗಸ್ಥಳ, ಹರಿಗೋಲು, ಸ್ವಾತಿಯ ಹನಿ, ಬಾಳೇ ಬಂಗಾರ, ಇಬ್ಬನಿಯಾವೃತೆ, ಕಾದಂಬರಿಯನ್ನು ಕೈಗೆತ್ತಿಕೊಂಡಾಗಲೂ ಕಣ್ಣ ಮುಂದೆ ತಟ್ಟನೆ ಬಂದುನಿಲ್ಲುವುದು ಅವರ ಸ್ತ್ರೀ ಪಾತ್ರಗಳು. ಸತ್ವಪೂರ್ಣವಾದ ಸಹಜ ಶ್ರೀಮಂತಿಕೆಯ ಪಾತ್ರಗಳು ಅವು. ಶ್ರೀಯುತರು ಪುರುಷ ಪಾತ್ರಗಳನ್ನೂ ಹೇಗೆ ಚಿತ್ರಿಸಬಲ್ಲರೊ, ಅಷ್ಟೇ ಸಮರ್ಥನೀಯವಾಗಿ ಸ್ತ್ರೀ ಪಾತ್ರಗಳನ್ನೂ ಸೃಷ್ಟಿಸಬಲ್ಲರು ಎಂದರೆ ಅತಿಶಯೋಕ್ತಿಯಾಗಲಾರದು.

ಸಾಹಿತ್ಯದ ಉದ್ದೇಶವೇನು ? ಮನಸ್ಸಿಗೆ ಉಲ್ಲಾಸವನ್ನು, ಸಂತೋಷವನ್ನು ಕೊಡುವುದು. ಓದು, ಓದುಗನ ಜ್ಞಾನದಾಹವನ್ನು ತಣಿಸಿದರೆ ಮಾತ್ರ ಸಾಲದು, ಅವನಿಗೆ ಸಂತೋಷವನ್ನು ಸುಖವನ್ನು ಕೊಡುವಂತಿರಬೇಕು. ಭೌತಿಕತೆಯನ್ನು ಉದ್ದೀಪನಗೊಳಿಸಲು ಬೇಕಾದ ಮಾನದಂಡ ಕಾದಂಬರಿಕ್ಷೇತ್ರವಲ್ಲವಾದರೂ ಅದು ಜನಸಾಮಾನ್ಯರನ್ನು ತಲುಪುವಂತಿದ್ದರೆ ಗಾತ್ರದ ದೃಷ್ಟಿಯಿಂದ ಅದು ಹಿರಿಮೆ ಎಂದು ಅನ್ನಿಸಿಕೊಳ್ಳುತ್ತದೆ.'ಹರಿಗೋಲು' ಶ್ರೀಯುತರ ಉತ್ತಮವಾದ ಕಾದಂಬರಿ. ವಸ್ತು, ಪ್ರವಾಸ ಹೊರಟ ಕುಟುಂಬ ಒಂದರ ಸಹಜ ಸುಂದರ ಚಿತ್ರಣ. ಪ್ರವಾಸದಲ್ಲಿ ದುರಂತಕ್ಕೊಳಗಾದ ಕುಟುಂಬ ಅನುಭವಿಸುವ ಕಷ್ಟನಷ್ಟಗಳು, ಸಂಸಾರ ದಿಕ್ಕಾಪಾಲಾದಾಗ "ಸುಮನ್" ಪಡುವ ನೋವು ಕರಳು ಮಿಡಿಯುವಂತಹದ್ದು. ಕಾಮುಕರ ದೌರ್ಜನ್ಯಕ್ಕೆ ಬಲಿಯಾಗುವ 'ಸುಮನ್', ಕೃತಿಯ ಉದ್ದಕ್ಕೂ ಮನ ಸೆಳೆಯುತ್ತಾಳೆ. 'ಸುಮನ್' ಅಲ್ಲದೆ ಬೇರೊಬ್ಬ ಹೆಣ್ಣಾಗಿದ್ದರೆ ಮನೋಸ್ಥೈರ್ಯ ವನ್ನು ಕಳೆದುಕೊಳ್ಳುತ್ತಿದ್ದಳು. ಆದರೆ ಬದುಕಿ ಉಳಿದು ಬಂದ 'ಸುಮನ್'

ಮನೋಸ್ಥೈರ್ಯವನ್ನು ಕಳೆದುಕೊಳ್ಳುವುದಿಲ್ಲ. ನೋವೆಲ್ಲವನ್ನು ನುಂಗಿ ಶಾಂತ ಚಿತ್ತದಿಂದ ಸ್ಥಿರ ಚಿತ್ತದಿಂದ ಇರಬಲ್ಲ ಮನೋಸ್ಥೈರ್ಯ ಅವಳಲ್ಲಿದೆ. ಕೊನೆಗೊಮ್ಮೆ ಕಳೆದುಕೊಂಡ ಮಕ್ಕಳ ಹಾಗೂ ಕುಟುಂಬದವರ ಸಮಾಗಮ ವಾಗುತ್ತದೆ. ಸುಮನ್‌ಳನ್ನು ಕುಟುಂಬ ಸ್ವೀಕರಿಸಲು ಇಚ್ಛಿಸುತ್ತದೆ. ಆದರೆ ಅಪ್ಪರಲ್ಲಾಗಲೇ ನರ್ಸ್‌ಆಗಿ ತನ್ನ ಬದುಕನ್ನು ಸೇವೆಗಾಗಿ ಮುಡಿಪಾಗಿಟ್ಟ ಸುಮನ್ ತನ್ನ ಬದುಕಿನಲ್ಲಿ ನಡೆದುಹೋದ ದುರ್ಘಟನೆಯನ್ನು ಮರೆಯಲಾರದ್ದಕ್ಕೋ, ಇಲ್ಲ ಸೇವೆಯಲ್ಲೇ ತನ್ನ ಬದುಕನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ಸದುದ್ದೇಶ ದಿಂದಲೋ ತನ್ನ ಕುಟುಂಬದೊಂದಿಗೆ ಬೆರೆಯಲು ಒಪ್ಪದೆ ಹೋಗುತ್ತಾಳೆ. ಅವಳ ವ್ಯಕ್ತಿತ್ವ ನಮ್ಮ ಮುಂದೆ ಪದರುಪದರಾಗಿ ಬಿಚ್ಚಿಕೊಳ್ಳುತ್ತ ಹೋಗುತ್ತದೆ. ಸನ್ನಿವೇಶ ಪಾತ್ರಕ್ಕೆ ತಕ್ಕಂತೆ ಸ್ಪಂದಿಸಬಲ್ಲ ಮತ್ತೊಂದು ಪಾತ್ರ ಸಂಗೀತ.

'ಬಾಳೇ ಬಂಗಾರ'ದಲ್ಲಿ ಹಳ್ಳಿಯ ಮುಗ್ಧ ಹೆಣ್ಣು ನರ್ಮದಾ ಪಟ್ಟ ಯಾತನೆ, ಯಾವುದು ಸುಂದರ ಎಂದು ನಂಬಿದ್ದಳೋ ಯಾವುದು ಸ್ಥಿರ ಎಂದು ಸಂತೋಷಿಸಿ ದ್ದಳೋ ಅದರಿಂದ ಕಳಚಿಕೊಂಡಾಗ, ಅಂದರೆ ಗಂಡನ ಸಾವಿನ ನಂತರದ ಅವಳ ಬದುಕು ತೀರ ಅಸಹನೀಯವಾದದ್ದರಿಂದ ಗಂಡಸರ ಕಾಮುಕ ದೃಷ್ಟಿಯನ್ನು ಎದುರಿಸಲಾಗದೆ ತತ್ತರಿಸಿದ ನರ್ಮದಾ ಎಲ್ಲಾ ಹೆಂಗಸರಂತೆ ಮನೋಸ್ಥೈರ್ಯವನ್ನು ಕಳೆದುಕೊಳ್ಳುವುದು ಸಹಜ. ಸಾವಿನ ದವಡೆಯಲ್ಲೂ ಜೀವಿಸುವ ಸಹಜ ಹಂಬಲ ಬಂದದ್ದಾದರೂ ಹೇಗೆ ? ಕಟ್ಟಿರುವೆಯೊಂದು ಕೈಗೆ ಕಡಿದಾಗ ಅದನ್ನು ಕಿತ್ತು ದೂರ ಎಸೆದರೂ ನೆಲದಲ್ಲಿ ಬಿದ್ದ ಇರುವೆ ಒದ್ದಾಡದೆ ಕ್ಷಣದಲ್ಲೇ ಚೇತರಿಸಿಕೊಂಡು, ಮುದುಡಿದ್ದ ಮೈಯನ್ನು ಕೊಡವಿಕೊಂಡು, ಆಹಾರದ ಶೋಧನೆಗೆ ತೊಡಗಿದ್ದನ್ನು ಕಂಡಾಗ, ಹುಟ್ಟುವುದು ಸಾಯುವುದಕ್ಕಲ್ಲ, ಬಾಳುವುದಕ್ಕೆ ಎನ್ನುವ ತೀರ್ಮಾನಕ್ಕೆ ಬಂದದ್ದು. ಹೆಜ್ಜೆಹೆಜ್ಜೆಗೂ ಕಾಣುವ ಕಾಮ ಪಿಶಾಚಿ ವಿಜಯ್‌ಭಟ್‌ನನ್ನು ಕಂಡಾಗಲೆಲ್ಲ ಸಿಡಿದೇಳುವ ನರ್ಮದಾ ಅವನನ್ನು ಕುರಿತು ಯೋಚಿಸುವುದು, ಮುಗ್ಧೆಯಾದರೂ ನರ್ಮದಾ ಜಾಣೆ, ವಿದ್ಯಾವಂತಳಲ್ಲದಿದ್ದರೂ ವಿವೇಚನೆ ಇರುವ ಹೆಣ್ಣು ಎಂಬುದು ದೃಢಪಡುತ್ತದೆ. ನರ್ಮದಾಳ ಯೋಚನೆ ಹೇಗೆ ಸಾಗುತ್ತದೆ ಎಂಬುದನ್ನು ಗುರುತಿಸಿದಾಗ ಗೋಚರವಾಗುತ್ತದೆ. "ಸಾಕಿದ ಸೋದರಮಾವ ಗಂಡು ಕೊಟ್ಟ ಮಾವ ಯಾರೂ ನನ್ನ ಸಹಾಯಕ್ಕೆ ಬಾರದಿದ್ದಾಗ ಸ್ನೇಹಿತರ ಕಾರುಣ್ಯದ ಛತ್ರಿ ಅಡಿಯಲ್ಲೇ, ಬದುಕಿ ಬಾಳಬೇಕೆ ? ನಾಗರಹೆಡೆಯಲ್ಲಿರುವ ಕರಾಳ ಛಾಯೆ ತಳಿರು ಮಾಮರದ ತಂಪು ನೆರಳಾಗಲು ಸಾಧ್ಯವೆ ?" ಎಂದು ಯೋಚಿಸುವ ನರ್ಮದಾ ವಿದ್ಯಾವಂತಳಲ್ಲದಿದ್ದರೇನಂತೆ ಅನುಭವ ಅವಳಿಗೆ ಪಾಠ ಕಲಿಸಿದೆ. ಆದರೇನು ಅವಳೂ ಬದುಕಿನಲ್ಲಿ ಪಟ್ಟಪಾಡು, ಮುಕ್ತಿ ಅವಳ ಅಸಹಾಯಕತೆಯಲ್ಲಿ

ಗಂಡಿನ ದೌರ್ಜನ್ಯ ಹೇಗೆ ತಾಂಡವ ನೃತ್ಯವಾಡುತ್ತದೆ ಎಂಬುದನ್ನು ಅತ್ಯಂತ ಮಾರ್ಮಿಕವಾಗಿ ಚಿತ್ರಿಸಿದ್ದಾರೆ ಶ್ರೀಯುತರು. ಅವಳ ಬದುಕು ದುರ್ಬಲವಾಗಿ ಅಸಹನೀಯವಾದಾಗ ಆ ಗೆರೆಯನ್ನು ದಾಟಿಸಿ ಸುಖಾಂತವನ್ನು ತಂದುಕೊಟ್ಟಿದ್ದಾರೆ ಲೇಖಕರು. ಏಕಮೇವಾದ್ವಿತೀಯಪಾತ್ರವಾಗಿ ವಿಜೃಂಭಿಸುವ ಪಾತ್ರ ನರ್ಮದಾಳದ್ದು. ಓದುಗರ ಮನಸ್ಸಿನಲ್ಲಿ ಚಿರಕಾಲ ಉಳಿಯುವ ಪಾತ್ರ. ಸತ್ತು ಬದುಕಿದ ನರ್ಮದಾಳಲ್ಲಿ ಒಂದು ರೀತಿಯ ಅನುಕಂಪ ಮೂಡುತ್ತದೆ.

'ಇಬ್ಬನಿ' ಕಾದಂಬರಿಯಲ್ಲಿ ಬರುವ ಪರಿಮಳಳೇ ಆಗಲಿ, ಲತಾಳೇ ಆಗಲಿ, ರಶ್ಮಿಯೇ ಆಗಲಿ ಆಯಾಯ ಪಾತ್ರ ಸನ್ನಿವೇಶಗಳಿಗೆ ತಕ್ಕಂತೆ ಸ್ಪಂದಿಸುತ್ತಾ ಓದುಗರ ಗಮನವನ್ನು ಸೆಳೆದರೆ ಆಶ್ಚರ್ಯಪಡಬೇಕಾಗಿಲ್ಲ. ಒಟ್ಟಾರೆ ಶ್ರೀಯುತರು ಹೆಣ್ಣಿನಲ್ಲಿರುವ ಅನುಕಂಪ, ಪ್ರೀತಿ, ಪ್ರೇಮ, ಅನುರಾಗ ದಯೆಯನ್ನು ಮನಗಂಡಂತೆ ಅವಳಲ್ಲಿರುವ ಅಸೂಯೆ, ಕುಟಿಲತೆ, ಸ್ವೇಚ್ಛಾ ಪ್ರವೃತ್ತಿ, ಶೀಲ, ಅಶ್ಲೀಲಗಳನ್ನು ಮನಗಂಡಿದ್ದಾರೆಂದೂ ಸ್ತ್ರೀಪಾತ್ರಗಳು ಅವರ ಲೇಖನಿಯಲ್ಲಿ ಸತ್ವಪೂರ್ಣವಾಗಿ ವಿಜೃಂಭಿಸಿವೆ ಎಂದೂ ಹೇಳಬಹುದು.



# ಕಾದಂಬರಿಗಳ ಕಥಾಸಮೀಕ್ಷೆ

—ಕಲ್ಪನಾ ಗುರುರಾಜ್

ಮೂರು ದಶಕಕ್ಕೂ ಹೆಚ್ಚು ಕಾಲದಿಂದ ಸಾಹಿತ್ಯಲೋಕಕ್ಕೆ ಅಮೂಲ್ಯ ಕೊಡುಗೆಗಳನ್ನು ನೀಡುತ್ತಿರುವ ಶ್ರೀ ಎಸ್.ವಿ. ಶ್ರೀನಿವಾಸರಾಯರು ಸಾಹಿತ್ಯ ಕ್ಷೇತ್ರಕ್ಕೆ ಈಗಾಗಲೇ 20ಕ್ಕೂ ಹೆಚ್ಚು ಕಾದಂಬರಿಗಳನ್ನು ನೀಡಿ ಅತ್ಯಂತ ಜನಪ್ರಿಯರಾಗಿದ್ದಾರೆ. ಇವರ ಬಹಳಷ್ಟು ಕಾದಂಬರಿಗಳು ಪ್ರತಿಷ್ಠಿತ ಪತ್ರಿಕೆಗಳಲ್ಲಿ ಮೊದಲು ಧಾರಾವಾಹಿಯಾಗಿ ಪ್ರಕಟಗೊಂಡಿರುವುದು ಇವರ ವೈಶಿಷ್ಟ್ಯವೆಂದೇ ಹೇಳಬೇಕು. ಇವರ ಇನ್ನೊಂದು ವಿಶೇಷವೆಂದರೆ ಶ್ರೀಯುತರು ಸಾಮಾಜಿಕ,ಚಾರಿತ್ರಿಕ, ವೈಜ್ಞಾನಿಕ ಕಾದಂಬರಿಗಳನ್ನಲ್ಲದೆ ಮಕ್ಕಳಿಗೂ ಸಹ ಆಕರ್ಷಕ ಕಾದಂಬರಿಯನ್ನಿತ್ತಿದ್ದಾರೆ.

ಈ ಕಾದಂಬರಿಗಳ ಕಥಾ ಸಮೀಕ್ಷೆ ಇಲ್ಲಿದೆ.

## ಕನ್ಯಾದಾನ :

ಶ್ರೀನಿವಾಸರಾಯರು 1960ರ ಸುಮಾರಿನಲ್ಲಿ ರಚಿಸಿದ ಪ್ರಥಮ ಕಾದಂಬರಿ. ಹಸ್ತಪ್ರತಿ ರೂಪದಲ್ಲೆ ಇದನ್ನು ಪ್ರಸಿದ್ಧ ಸಾಹಿತಿ ನಿರಂಜನರು ಪರಿಶೀಲಿಸಿ ಹಲವು ಸೂಕ್ತ ಸಲಹೆಗಳನ್ನಿತ್ತು ಒಂದು ಕಾದಂಬರಿಯಾಗಿ ರೂಪುಗೊಳ್ಳಲು ಕಾರಣರಾಗಿದ್ದರು. 'ಒಳ್ಳೆಯ ಸಾಹಿತಿಯಾಗುವ ಗುಣಗಳು ನಿಮ್ಮಲ್ಲಿವೆ' ಎಂದು ಹರಸಿದ್ದುದು ನಿಜವಾಗಿರುವುದು ಲೇಖಕರ ಸಾಹಿತ್ಯ ಕೃತಿಯನ್ನು ಗಮನಿಸಿದರೆ ಅರಿವಾಗುತ್ತದೆ. ಇದು ಬಹು ಸಂತಸದ ವಿಷಯ.

ಇವರ ಪ್ರಥಮ ಕಾದಂಬರಿಯನ್ನು ಪ್ರಕಟಿಸಿದವರು ತಿಪಟೂರಿನ ಸುದರ್ಶನ ಪ್ರಕಾಶನದ ಶ್ರೀ ತಾ. ರಾ. ನಾಗರಾಜ್‌ರವರು.

ಕಾದಂಬರಿಯ ಸಂಕ್ಷಿಪ್ತ ಕಥೆ :

ನಾಲ್ಕು ದಶಕಗಳ ಹಿಂದೆ ಪ್ರಸ್ತುತವೆನಿಸುತ್ತಿದ್ದ ತ್ರಿಕೋಣ ಪ್ರೇಮ ಕಥೆಯೇ ಈ ಕಾದಂಬರಿಯ ಮೂಲ ದ್ರವ್ಯ.

ಶಕುಂತಲೆ, ಗೋಪಾಲ, ಶೀನಿ, ಲಲಿತೆ ಮುಖ್ಯ ಪಾತ್ರಗಳು. ಶಕುಂತಲೆಗೆ ಶೀನಿಯಲ್ಲಿ ಒಲವು. ಶಕುಂತಲೆಯ ವಿವಾಹ ಅನಂತನಾರಾಯಣನೊಡನೆ ನಡೆಯುತ್ತದೆ.

ಬಲವಂತಕ್ಕೆ ಲಲಿತೆಯನ್ನು ಮದುವೆಯಾದ ಶೀನಿಅವಳನ್ನು ತಿರಸ್ಕರಿಸುತ್ತಾನೆ. ಬೇಡದ ಮದುವೆಯಲ್ಲಿ ಮನಸ್ಸನ್ನು ನೀಡಲಾಗದ ಶಕುಂತಲೆ ಶೀನಿಯನ್ನೇ ಸೇರುತ್ತಾಳೆ. ಕನ್ಯಾದಾನ ಇಲ್ಲಿ ಒಂದು ಧಾರ್ಮಿಕ ಕ್ರಿಯೆಯಾಗಿ ಉಳಿಯುತ್ತದೆಯೇ ಹೊರತು ಮನಸ್ಸು-ಮನಸ್ಸನ್ನು ಬೆಸೆಯುವ ಸಾಧನವಾಗುವುದಿಲ್ಲ.

ಸಂಸಾರದಲ್ಲಿನ ಆಸೆ, ಆಕಾಂಕ್ಷೆ, ಪ್ರೇಮ ಒಲವು-ಗೆಲವು, ನಿರಾಶೆಗಳು ಬಹು ವಾಸ್ತವಿಕವಾಗಿ ರೂಪಿತಗೊಂಡಿವೆ.

## ಮಣ್ಣಿನ ಮಗ :

1962 ರಲ್ಲಿ 'ಹಂಬಲ' ಎಂಬ ಹೆಸರಿನಲ್ಲಿ ಕತೆಗಾರದಲ್ಲಿ ಪ್ರಕಟಗೊಂಡಿತ್ತು.

ಕರಿಯು ಒಂದು ಪುಟ್ಟ ಹಳ್ಳಿಯ ರೈತ. ಎರಡು ಎಕರೆ ಜಮೀನನ್ನು ಹೊಂದಿದ್ದು ಸ್ವಂತ ಸಾಗುವಳಿ ಮಾಡುವ ಹಂಬಲ. ಊರಿನ ಗೌಡರ ಮನೆಯಲ್ಲಿ ಗೇಯ್ದು ದುಡ್ಡು ಸೇರಿಸಿ ಇರುವ ಒಂದು ಹೋರಿ ಜೊತೆಗೆ ಮತ್ತೊಂದು ಹೋರಿ ಕೊಂಡು ಸ್ವತಂತ್ರ ಸಾಗುವಳಿ ಮಾಡಲು ಕನಸು ಕಾಣುತ್ತಿರುತ್ತಾನೆ. ಇರುವ ಒಬ್ಬ ಮಗಳು ಚೆನ್ನಿಗೆ ಮದುವೆ ಮಾಡಲು ಯೋಚಿಸುವಷ್ಟರಲ್ಲಿ ಊರಿನ ಜನರ ಮೂಢ ನಂಬಿಕೆಗೆ ಬಲಿಯಾಗಿ ದೇವರಿಗೆ ಬಸವಿಯಾಗಿ ಊರಿನ ಸ್ವತ್ತಾಗುತ್ತಾಳೆ. ಇದನ್ನು ತಪ್ಪಿಸಲು ಇರುವ ಹೋರಿಯನ್ನು ಮಾರಿ ಬಂದ ದುಡ್ಡಿನಲ್ಲಿ ಹಿಂತಿರುಗುವ ಹೊತ್ತಿಗೆ ಈ ಘಟನೆ ನಡೆದು 'ಮಣ್ಣಿನ ಮಗ' ಕರಿಯನ ಕನಸುಗಳು ಚೂರು ಚೂರಾಗುತ್ತವೆ.

## ಹಸಿರು ಮಂಟಪ :

ಸುಮಂಗಲಿ ಪಾರ್ವತಮ್ಮ ವಿಧವೆಯಾಗಿ ಮಕ್ಕಳು ಪಿತೃಹೀನರಾದಾಗ 'ಮಕ್ಕಳಿಗಾದರೂ ನಾನು ಬಾಳಬೇಕು' ಎಂಬ ದೃಢನಿರ್ಧಾರದಿಂದ ಮಕ್ಕಳಾದ ಶಂಕರ, ನಾಣಿ, ಶಾರದ, ಸರೋಜರನ್ನು ವಿದ್ಯಾವಂತರನ್ನಾಗಿ ಮಾಡಿ ತಮ್ಮ ಕಷ್ಟ ಜೀವನದ ನೆರಳೂ ಮಕ್ಕಳ ಮೇಲೆ ಬೀಳದೆ ಸುಖವಾಗಿರಲೆಂದು ಮಾತೃ ಹೃದಯದ ಔದಾರ್ಯ ಎತ್ತಿ ತೋರಿಸುತ್ತದೆ.

ಶಂಕರ ಓದು ಪೂರೈಸಿ ಕೆಲಸಕ್ಕಾಗಿ ಪರದಾಡಿ ಕೊನೆಗೆ ಸೈನ್ಯಕ್ಕೆ ಸೇರುತ್ತಾನೆ. ನಾಣಿ ಓದು ಮುಂದುವರಿಸಲಾಗದೆ ಫ್ಯಾಕ್ಟರಿಯಲ್ಲಿ ಕೆಲಸಕ್ಕೆ ಸೇರಿ ಕಾರ್ಮಿಕರಿಗಾಗಿ ಹೋರಾಡಿ ಜೈಲು ಸೇರುತ್ತಾನೆ. ಶಾರದ ಸೋದರ ಮಾವನ ಮಗ ಮದುವೆಯಾಗಲು ತಿರಸ್ಕರಿಸಿದಾಗ ಬೇಸರಗೊಂಡರೂ ಮೆಚ್ಚಿ ಮದುವೆಯಾದ ವಾಸುದೇವ

ಮೂರ್ತಿಯೊಡನೆ ಸಂತಸದಿಂದಿರುವಾಗಲೇ ವಿಧಿ ಅವಳ ಪತಿಯನ್ನು ಕೊಂಡೊಯ್ದಾಗ ಜೀವನದಲ್ಲಿ ಬೇಸತ್ತು ವಿಷ ಸೇವಿಸುತ್ತಾಳೆ. ಮುದ್ದು ಮುಖದ ಸರೋಜ ಸೋದರ ಮಾವನ ಮಗ ಶ್ರೀನಾಥ ಮದುವೆಯಾಗುವೆನೆಂದು ಆಸೆ ತೋರಿಸಿ ಮೋಸ ಮಾಡಿದಾಗ ಬೆಂಕಿಯ ಅನಾಹುತಕ್ಕೆ ಈಡಾಗಿ ತಾಯಿಯ ಹೃದಯಕ್ಕೆ ಮತ್ತಷ್ಟು ದುಃಖವುಂಟಾಗುತ್ತದೆ.

ಈ ರೀತಿ ಪಾರ್ವತಮ್ಮನವರಿಗೆ 'ಮಕ್ಕಳ ಬಾಳು ಹಸಿರು ಮಂಟಪ' ವಾಗಲೆಂಬ ಕನಸು ಕನಸಾಗೇ ಉಳಿಯುತ್ತದೆ.

## ಸುಣ್ಣವಿಲ್ಲದ ವೀಳ್ಯ :

1962 ರಲ್ಲಿ "ಕನ್ನಡ ಪ್ರಭ" ದಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿತ್ತು.

ತಂದೆ-ತಾಯಿ, ಪ್ರೀತಿ-ವಾತ್ಸಲ್ಯ ಎಂದರೆ ಏನೆಂಬುದನ್ನೇ ಅರಿಯದ ಅನಾಥ ಬಾಲಕ ಸದಾನಂದ. ಬೊಂಬಾಯಿನ ಅನಾಥಾಶ್ರಮದಿಂದ ಸ್ಕೂಲಿಗೆ ಹೋಗುತ್ತಿರುವಾಗ ಒಮ್ಮೆ ಗೆಳೆಯನಿಗೆ ಆದ ಅನ್ಯಾಯಕ್ಕೆ ಪ್ರತಿಭಟಿಸಲು ಹೋಗಿ ಸ್ಕೂಲಿನಿಂದ ಓಡಿಹೋಗಲು ಅಪಘಾತಕ್ಕೀಡಾಗಿ ಆಸ್ಪತ್ರೆ ಸೇರುತ್ತಾನೆ. ಪೋಲೀಸರೆಂದರೆ ಹೆದರುತ್ತಿದ್ದ ಸದಾನಂದ, ಆಸ್ಪತ್ರೆಯಿಂದ ತಪ್ಪಿಸಿಕೊಂಡು ಮಕ್ಕಳನ್ನು ಅಪಹರಿಸಿಕೊಂಡು ಬಂದು ಕೈಕಾಲುಗಳನ್ನು ಊನ ಮಾಡಿ ಬಿಕ್ಷುಕ ವೃತ್ತಿಗಿಳಿಸಿ ಜೀವನ ಸಾಗಿಸುತ್ತಿದ್ದ ದುಷ್ಕರ್ಮಿಗಳ ಬಲೆಯಲ್ಲಿ ಸಿಕ್ಕಿಬಿದ್ದು ಅಲ್ಲಿಯ ನರಕವನ್ನು ಕಂಡು ಅನುಭವಿಸಿ ಬಿಕ್ಷುಕನಾಗಿ ಸಂಪಾದಿಸುತ್ತಿರುತ್ತಾನೆ. ಒಮ್ಮೆ ಪೋಲೀಸಿನವರ ಹೆದರಿಕೆಯಿಂದ ಇವನನ್ನು ಒಂದು ಹಳ್ಳಿಯಲ್ಲಿ ಎಸೆದು ಹೊರಟು ಹೋದಾಗ ರಾಮಸಿಂಗ್ ಎಂಬ ಬಡ ಕುಟುಂಬದವರ ಆಶ್ರಯದಲ್ಲಿದ್ದು ಕ್ರಿಶ್ಚಿಯನ್ ಕಾನ್ವೆಂಟಿನಲ್ಲಿ ಸೇರಿ ಓದು ಮುಂದುವರಿಸುತ್ತಾನೆ. ಕೆಲ ವರ್ಷಗಳ ನಂತರ ಮತ್ತೆ ಮುಂಬೈ ಸೇರುತ್ತಾನೆ. ಮುಂಬೈನಲ್ಲಿ ಬೂಟ್ ಪಾಲೀಷ್, ಕೂಲಿ ಕೆಲಸ, ಕೊನೆಗೆ ಕಾರ್ಮಿಕನಾಗಿ ದುಡಿದು, ಸಂಪಾದನೆಯ ಎಲ್ಲಾ ಮಾರ್ಗಗಳನ್ನು ಅರಿಯುತ್ತಾನೆ.

ಯೌವನಕ್ಕೆ ಕಾಲಿಡುತ್ತಿರುವ ಸದಾನಂದನ ಜೀವನದಲ್ಲಿ ಮೊದಲ ಹೆಣ್ಣು ಸುಂದ್ರಿ. ಅವಳು ಮೋಸಮಾಡಿದಾಗ ಸಿಹಿ ಒಂದೇ ಕಬ್ಬಿನ ವಿಶಿಷ್ಟಗುಣವೇನಲ್ಲವೆಂದು ಅನೇಕ ಹೆಣ್ಣುಗಳ ಸಹವಾಸ ಮಾಡುತ್ತಾನೆ.

ಕಳ್ಳಬಟ್ಟಿ ಹೆಂಡ ಕುಡಿಯಲು ಬಂದು ಅದೇ ದಂಧೆಯಲ್ಲಿ ನಿಷ್ಣಾತನಾಗುತ್ತಾನೆ.

ಕೊಲಾಬಾದಲ್ಲಿ ಎಲ್ಲಾ ತರಹ ಜೂಜುಗಳ ಕೇಂದ್ರ ಸ್ಥಾಪಿಸುತ್ತಾನೆ. ಎಲ್ಲಾ ಕಡೆಯಿಂದಲೂ ಇವನಿಗೆ ಹಣದ ಹೊಳೆಯೇ ಹರಿದು ಬರುತ್ತದೆ.

ತನ್ನ ಅನಾಥಾಶ್ರಮದ ಬೆಳವಣಿಗೆ ನೆನಪಿಗಾಗಿ ಅನಾಥ ಮಕ್ಕಳನ್ನು ಸೇರಿಸಿ 'ಸದಾನಂದ ಅನಾಥಾಲಯ' ಸ್ಥಾಪಿಸುತ್ತಾನೆ. ಆಸ್ಪತ್ರೆ ಕಟ್ಟಿಸುತ್ತಾನೆ. ಲಾಯರ್ ಶಾಂತಿಲಾಲರ ತಂಗಿ 'ಜಲಜಾ' ಇವನನ್ನು ಪ್ರೀತಿಸಿ ಮದುವೆಯಾಗುತ್ತೇನೆಂದಾಗ ತನ್ನ ಜೀವನ ಚರಿತ್ರೆಯನ್ನರುಹಿ ಒಪ್ಪಿಗೆ ಪಡೆದು ಮದುವೆಗಾಗಿ 'ರಿಜಿಸ್ಟ್ರರ್' ಆಫೀಸಿಗೆ ಕಾರಿನಲ್ಲಿ ಬರುತ್ತಿರುವಾಗ ಅಪಘಾತವಾಗಿ ಲಾರಿಗೆ ಸಿಕ್ಕಿ ಆಸ್ಪತ್ರೆಯಲ್ಲಿ ಸಾಯುತ್ತಾನೆ. ಜಲಜ ಮೂರುತಿಂಗಳ ಗರ್ಭಿಣಿಯಾಗಿದ್ದು, ಇವನಿಗೆ ಮತ್ತೆ ಹೆಣ್ಣಿಂದ ಮೋಸ ನಡೆದಿರುತ್ತದೆ. ಆದರೆ ಈ ವಿಷಯ ತಿಳಿಯದ ಸದಾನಂದನಿಗೆ 'ಸುಣ್ಣವಿಲ್ಲದ ವೀಳ್ಯ'ದ ಅರಿವಾಗುವುದೇ ಇಲ್ಲ.

## ಮಬ್ಬು ಮುಂಜಾವು :

1974ರಲ್ಲಿ 'ಸುಧಾ'ದಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿತ್ತು.

ಆನಂದ ಒಬ್ಬ ಪ್ರವಾಸೋದ್ಯಮಿ. ಪ್ರೇಕ್ಷಣೀಯ ಸ್ಥಳಗಳಿಗೆ ಪ್ರವಾಸ ಏರ್ಪಡಿಸಿ, ಸಂಸ್ಕೃತಿ ಕಲೆಯ ಪರಿಚಯ ಮಾಡಿಸಿಕೊಟ್ಟು, ಹೊಸಹೊಸ ಜನಗಳೊಡನೆ ಕಲೆಯುವ ಹಾಗೂ ನಕ್ಕು ನಲಿದು ಮನದ ಬೇಸರ ಪರಿಹರಿಸಿಕೊಳ್ಳುವ ಅವಕಾಶ ಕಲ್ಪಿಸಿ ಅವರ ತೃಪ್ತಿಯಲ್ಲೆ ತನ್ನೆಲ್ಲ ಕಷ್ಟ ಸುಖವನ್ನು ಮರೆಯುವ ನಿಷ್ಠಾವಂತ ಪ್ರವಾಸೋದ್ಯಮಿ. ಆನಂದನ ಜೀವನದತ್ತ ಇಣಕಿ ನೋಡುವ ಕಾದಂಬರಿ ಮಬ್ಬು ಮುಂಜಾವು.

1970 ರಲ್ಲಿ 'ಸುಧಾ'ದಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡು ಅತ್ಯಂತ ಮೆಚ್ಚುಗೆಯ ಪತ್ರಗಳನ್ನು ಪಡೆದಿದ್ದ ಕಾದಂಬರಿ.

## ಬಾಳೇ ಬಂಗಾರ :

"ಕಾಡು ಬೆಳದಿಂಗಳು" ಹೆಸರಿನಲ್ಲಿ 'ಸುಧಾ'ದಲ್ಲಿ 1970–71 ರಲ್ಲಿ ಪ್ರಕಟ ಗೊಂಡಿತ್ತು.

ಕರ್ನಾಟಕದ ಒಂದು ಮೂಲೆಯ ಹಳ್ಳಿಯಲ್ಲಿ ಸೋದರ ಮಾವನ ಆಶ್ರಯ ದಲ್ಲಿ ಯಾರಿಗೂ ಬೇಡದಂತೆ ಬೆಳೆದ ತಬ್ಬಲಿ ಹೆಣ್ಣು ನರ್ಮದಾ. ಮದುವೆಯಾಗಿ ಬೃಹತ್ ನಗರ ಬೊಂಬಾಯಿ ಸೇರಿ ಸುಖದ ಕನಸು ನನಸಾಗುವ ಮೊದಲೇ ವಿಧವೆಯಾಗುತ್ತಾಳೆ. ಸಹೃದಯ ದಂಪತಿಗಳಾದ ಭಟ್-ಸೋನಾಬಾಯಿ ಸಾಂತ್ವನ

ನೀಡಿ ಗಂಡನ ಆಫೀಸಿನಲ್ಲೆ ಕೆಲಸ ಕೊಡಿಸುತ್ತಾರೆ ನರ್ಮದಳಿಗೆ. ಆಫೀಸಿನಲ್ಲಿ ಜವಾನ ಜಾದವ್‌ನ ಕಿರುಕುಳದಿಂದ ಪಾರು ಮಾಡಿದ ಸಹೋದ್ಯೋಗಿ ನರಗುಂದ ಅವಳನ್ನು ಪ್ರೀತಿಸಿ ಮದುವೆಯಾಗುತ್ತಾನೆ. ಬೊಂಬಾಯಿ ನಗರದಲ್ಲಿ ಒಂಟಿ ಹೆಣ್ಣು ಪಡುವ ಬವಣೆಯ ಕುರಿತಾದ ಈ ಕಾದಂಬರಿಯಲ್ಲಿ ನರ್ಮದಳ ಬಾಳನ್ನು ಬಂಗಾರ ಮಾಡಬಯಸುವ ಹೆಣ್ಣಿನ ಹೋರಾಟದ ಚಿತ್ರಣ ಚೆನ್ನಾಗಿ ಮೂಡಿಬಂದಿದೆ.

## ಸೋನಾರ್ ಬಾಂಗ್ಲಾ :

ಇದು ಕನ್ನಡದ ಪ್ರಸಿದ್ಧ ದಿನಪತ್ರಿಕೆ 'ಕನ್ನಡಪ್ರಭ'ದಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡು (1972) ಅನಂತರ ಪುಸ್ತಕ ರೂಪದಲ್ಲಿ ಪ್ರಕಟಗೊಂಡಿದೆ.

ಪಾಕಿಸ್ತಾನಿಗಳ ಕೈಯಿಂದ ಬಾಂಗ್ಲಾ ವಿಮೋಚನೆ ಅಳಿಸಲು ನಡೆದ ಹೋರಾಟದ ಸಮಯದಲ್ಲಿ ಬಾಂಗ್ಲಾದಲ್ಲಿ ಪಾಕಿಸ್ತಾನಿ ಪಡೆ ನಡೆಸಿದ ಅಮಾನುಷ ಅತ್ಯಾಚಾರ ಹಾಗೂ ಅದರ ವಿರುದ್ಧ ನಡೆದ ರಕ್ಷಣೆಯ ಆಂದೋಳನ ಮಾರ್ಮಿಕವಾಗಿ ರೂಪಿತಗೊಂಡಿದೆ. ಭಾರತದ ಪಡೆ ಜನರಿಗೆ ರಕ್ಷಣೆ ನೀಡುತ್ತದೆ. ನ್ಯಾಯಪರ ಹೋರಾಟಕ್ಕೆ ಬೆಂಬಲ ನೀಡಿ ಜನರಿಗೆ ನ್ಯಾಯ ಹಾಗೂ ಸ್ವಾತಂತ್ರ್ಯ ರಕ್ಷಿಸಿ ಕೊಡುತ್ತದೆ.

## ಸ್ವರಮೇಳ :

'ಸುಧಾ'ದಲ್ಲಿ 1975 ರಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿತ್ತು.

ವಾಣಿಜ್ಯೋದ್ಯಮಿ ಆನಂದರಾಯರು ಗೆಳೆಯ ಗಂಗಾಧರ ಶಾಸ್ತ್ರಿಗಳ ಕುಟಿಲತೆಗೆ ಸಿಕ್ಕಿ ಪ್ರತಿಷ್ಠೆಗಾಗಿ ಅವ್ಯವಹಾರದಲ್ಲಿ ತೊಡಗಿರುವುದನ್ನು ಕಂಡ ಮಗ ಮುಕುಂದನಿಗೆ ಬೇಸರ ಉಂಟಾಗುತ್ತದೆ. ತಂಗಿ ಸರಸ್ವತಿಯನ್ನು ತಂದೆ 'ರೋಪೀಸ್' ಮಾಡಿ ವ್ಯಾಪಾರಕ್ಕಾಗಿ ಬಳಸಿಕೊಳ್ಳುವುದನ್ನು ಸಹಿಸದಾದ. ತಂಗಿಯ ಸ್ನೇಹಿತೆ ಶೀಲಾಳನ್ನು ಪ್ರೀತಿಸುತ್ತಾನೆ. ಶೀಲಾಳ ಅಣ್ಣ ಮಂಜುನಾಥನೊಡನೆ ತಂಗಿಯ ಮದುವೆ ನಿಶ್ಚಯಿಸಬೇಕೆಂದಿರುವಾಗ ಗಂಗಾಧರ ಶಾಸ್ತ್ರಿಗಳ ಮಗ ನಾಗರಾಜ ಮಾಡಿದ ಅತ್ಯಾಚಾರದಿಂದ ಬೇಸತ್ತ ಸರಸ್ವತಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇದೆಲ್ಲದರಿಂದ ಜುಗುಪ್ಸೆಗೊಂಡ ಮುಕುಂದ ಬೊಂಬಾಯಿನಲ್ಲಿ ಸ್ವತಂತ್ರವಾಗಿರಲು ಬಯಸಿ ಅಜ್ಞಾತವಾಗಿರುತ್ತಾನೆ. ಅಲ್ಲಿ ಪ್ರೀತಿಸಿದ ಹುಡುಗಿ ಮುಕ್ತಾಳನ್ನು ಮದುವೆಯಾಗ ಬಯಸಿದಾಗ ಸಂಬಂಧದಿಂದ ತಂಗಿಯಾಗಬೇಕೆಂದು ಅರಿತು ಬೇಸರಗೊಳ್ಳುತ್ತಾನೆ. ಗಂಗಾಧರ ಶಾಸ್ತ್ರಿಗಳ ಸಂಕೋಲೆಯಿಂದ ಬಿಡುಗಡೆಗೊಂಡು ತಂದೆ ಪಶ್ಚಾತ್ತಾಪ ಪಟ್ಟು ಟೆಲಿಗ್ರಾಂ ಕಳುಹಿಸಿದಾಗ ತಂದೆಯ ಆಶೀರ್ವಾದ ಪಡೆದು ಶೀಲಾಳನ್ನು

ಮದುವೆಯಾಗಿ ವ್ಯವಹಾರವನ್ನು ನೋಡಿಕೊಳ್ಳುತ್ತಾನೆ. ಮುಕ್ತಾಳನ್ನು ಶೀಲಾಳ ಅಣ್ಣ ಮಂಜುನಾಥನಿಗೆ ಮದುವೆ ಮಾಡಿ ಕೊಡುತ್ತಾನೆ.

## ಸ್ವಾತಿಯ ಹನಿ :

1976 ಸುಧಾದಲ್ಲಿ 'ಅನುಭವ' ಹೆಸರಿನಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿತ್ತು.

ಮಹಾಭಾರತದ ಕಥೆ ಬಹಳ ಪ್ರಾಚೀನವಾದರೂ ಅದರಲ್ಲಿ ಬರುವ ಅನೇಕ ಘಟನೆಗಳಲ್ಲಿನ ಜಟಿಲತೆಯನ್ನು ಬಿಡಿಸಲು ಆಧುನಿಕ ವಿಜ್ಞಾನಕ್ಕೆ ಶರಣು ಹೋಗಬೇಕಾಗುತ್ತದೆ. ಇಂತಹವುಗಳಲ್ಲಿ ಹೆಸರಿಸಬೇಕಾದ್ದು ಮತ್ಸ್ಯಗಂಧಿ ಪ್ರಕರಣ ಒಂದು.

ವೆಂಕಟೇಶಯ್ಯ-ಕಾವೇರಮ್ಮನವರಿಗೆ ಲಕ್ಷ್ಮಿ ಮಂಜುಳ ಇಬ್ಬರು ಹೆಣ್ಣುಮಕ್ಕಳು. ಒಬ್ಬ ಮಗ. ಲಕ್ಷ್ಮಿ ಹಾಸ್ಟೆಲ್‌ನಲ್ಲಿದ್ದು ಓದುವಾಗಲಿನಿಂದ ಸ್ವಚ್ಛಂದ ಪ್ರವೃತ್ತಿಯವಳು. ಮಂಜುಳಳ ಗಂಡ ಶ್ರೀಧರ ಅನುಕೂಲ ಸ್ಥಿತಿಯಲ್ಲಿದ್ದರೂ ಅನೇಕ ಹೆಣ್ಣುಗಳ ಸಹವಾಸ ಮಾಡಿ ಈಗ ದುರ್ಬಲನಾಗಿರುತ್ತಾನೆ. ಮಂಜುಳಳಿಗೆ ಮಕ್ಕಳಾಗದಿದ್ದಾಗ ತನ್ನ ತಂದೆಯ ಮನೆಯಲ್ಲಿ ಬೆಳೆಯುತ್ತಿರುವ ಸತೀಶನನ್ನು ದತ್ತು ತೆಗೆದುಕೊಳ್ಳಲು ಯೋಚಿಸುತ್ತಾಳೆ. ಆದರೆ ಆ ಹುಡುಗ ತನ್ನಗಂಡ ಹಾಗೂ ಲಕ್ಷ್ಮಿಯಮಗನೆಂದು ಅರಿತ ಮಂಜುಳ ದತ್ತು ತೆಗೆದುಕೊಳ್ಳಲು ನಿರಾಕರಿಸುತ್ತಾಳೆ. ಕೊನೆಗೆ ಆ ಮಗುವಿನ ಪುರೋಭಿವೃದ್ಧಿಗಾಗಿ ಒಪ್ಪಿ ದತ್ತು ತೆಗೆದುಕೊಳ್ಳುತ್ತಾಳೆ. ಆದರೆ ಒಮ್ಮೆ ಪಾರ್ಕಿನಲ್ಲಿ ಆಟವಾಡುತ್ತಿರುವಾಗ ಅವಘಡಕ್ಕೀಡಾಗಿ ಸತೀಶ ಸಾವನ್ನಪ್ಪುತ್ತಾನೆ. ಇದರಿಂದ ಲಕ್ಷ್ಮಿಯ ಗಂಡ ದೇಸಾಯಿ,ಶ್ರೀಧರ ದಂಪತಿಗಳನ್ನು ಸತೀಶನ ಸಾವಿನ ಬಗ್ಗೆ ಬ್ಲಾಕ್ ಮೇಲ್ ಮಾಡಿ ದುಡ್ಡು ಕಸಿದುಕೊಳ್ಳಲು ಹವಣಿಸುತ್ತಾನೆ. ಆನಂದನ ಸಹಾಯದಿಂದ ಈ ಕುತ್ತಿನಿಂದ ಪಾರಾಗುತ್ತಾರೆ ಮಂಜುಳ-ಶ್ರೀಧರ.

ಶ್ರೀಧರನ ವೀರ್ಯವನ್ನು ಸಿರಿಂಜ್ ಮೂಲಕ ಮಂಜುಳಳಿಗೆ ವರ್ಗಾಯಿಸಿ ಅವಳು ಗರ್ಭವತಿಯಾಗುವಂತೆ ಪ್ರಯೋಗ ನಡೆಸುತ್ತಾರೆ ಡಾ॥ ಕೋಮಿಲಾ ವಿಲ್ಸನ್. ಇದರಿಂದ ಎಲ್ಲರೂ ಸಂತೋಷದ ಕಡಲಿನಲ್ಲಿ ಈಜಾಡುತ್ತಾರೆ.

## ಮಂಥನ :

'ಪ್ರಜಾಮತ'ದಲ್ಲಿ 1979--80ರಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿತ್ತು.

ಪ್ರೇಮಕ್ಕೆ ಅಪಜಯವೆಂಬುದೇ ಇಲ್ಲ. ಅದಕ್ಕೆ ಮಣಿಯದವನೂ ಸಹ

ಯಾರೂ ಇಲ್ಲ. ಪ್ರೇಮ–ಕಾಮದ ಮಧುರ ಆಲಿಂಗನದಲ್ಲಿ 'ತೃಪ್ತಿ' ನೆಲೆ ಕಾಣು ತ್ತದೆ. ಈ ಹಿನ್ನೆಲೆಯಲ್ಲಿ 'ಮಂಥನ' ಕಾದಂಬರಿ ರಚಿತವಾಗಿದೆ.

ಬ್ಯಾಂಕಿನಲ್ಲಿ ಆಫೀಸರ್‌ರಾಗಿದ್ದ ನಾಗರಾಜನಿಗೆ ಬೊಂಬಾಯಿನ ಶ್ರೀಮಂತ ಕನ್ಯೆ ಜಯಂತಿಯೊಡನೆ ವಿವಾಹವಾಗುತ್ತದೆ. ಕರ್ತವ್ಯ ಪಾಲನೆಯಲ್ಲಿ ನಿಷ್ಣಾತನಾದ ನಾಗರಾಜ ಸಂಯಮಿ. ಆದರೆ ಜಯಂತಿ ಕಾಮದ ಪುತ್ಥಳಿ. ಇಬ್ಬರಿಗೂ ವಿರಸ ವುಂಟಾಗಿ ಜಯಂತಿ, ಗೆಳತಿ ಜಾಸ್ಮಿನ್ ಮತ್ತು ಅವಳ ಅಣ್ಣ ಒಡ್ಡಿದ ಬಲೆಗೆ ಬಿದ್ದು 'ಡೈವೋರ್ಸ್' ತೆಗೆದುಕೊಳ್ಳಲು ನಿಶ್ಚಯಿಸುತ್ತಾಳೆ. ಕೊನೆಗೆ ಕರ್ತವ್ಯನಿಷ್ಠೆ, ಸದ್ಗುಣಗಳ ಪ್ರತೀಕನಾದ ನಾಗರಾಜನ ನಿಜಗುಣದ ಅರಿವಾಗಿ ಜಯಂತಿ ನಾಗರಾಜನಿಗೆ ಒಳ್ಳೆಯ ಪತ್ನಿಯಾಗಿ ಮಾರ್ಪಾಡಾಗುತ್ತಾಳೆ. ವಿರಸ-ಸರಸದ ಮನೋಜ್ಞವಾದ ಚಿತ್ರಣವಿದೆ 'ಮಂಥನ'ದಲ್ಲಿ.

## ಇಬ್ಬನಿ :

'ಸುಧಾ'ದಲ್ಲಿ 1980 ರಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿತ್ತು.

ಗಂಡು ಹೆಣ್ಣಿನ ನಲ್ಮೆಯುತ ಸಹಬಾಳ್ವೆಯ ಪ್ರೇಮಮಯ ಜೀವನದ ಅಂಕುರಾರ್ಪಣ ಮಧುಚಂದ್ರದಲ್ಲಿ. ಆದ್ದರಿಂದಲೇ ಎಲ್ಲ ವಿವಾಹಿತರೂ ಮಧು ಚಂದ್ರವನ್ನು ರಸಪೂರ್ಣವಾಗಿರಿಸಲು ಆಶಿಸುತ್ತಾರೆ. ಜೀವನ ಪೂರ್ಣ ಈ ಮಧುರ ಸ್ಮೃತಿಯನ್ನು ಜೀವಂತವಾಗುಳಿಸಿಕೊಳ್ಳಲು ಬಯಸುತ್ತಾರೆ. ಅಂತೆಯೇ ಕರ್ನಾಟಕದವನಾದ ಮುರಳಿ ಅಮೇರಿಕಾದಿಂದ ಬಂದು ಮದುವೆಯಾಗಿ ಪತ್ನಿ ಪರಿಮಳಳೊಡನೆ 'ಮಧುಚಂದ್ರ'ಕ್ಕಾಗಿ ಸಿಮ್ಲಾಗೆ ಬರುತ್ತಾನೆ, ಅಲ್ಲಿ ಒಂದು ಕಾಟೇಜಿನಲ್ಲಿ ಇಳಿದುಕೊಳ್ಳುತ್ತಾರೆ. ಇವರಂತೆಯೇ ಪ್ರವಾಸಕ್ಕಾಗಿ ಇತರ ಕಾಟೇಜು ಗಳಲ್ಲಿ 3–4 ಸಂಸಾರಗಳಿರುತ್ತವೆ. ಅದರಲ್ಲಿ 'ಸುಖದೇವ್' ಎಂಬ ವಂಚಕನ ಬಲೆಗೆ ಸಿಕ್ಕಿ ತೊಂದರೆಗೊಳಪಟ್ಟು ರವಿ ಎಂಬ ಹುಡುಗನ ಕೊಲೆಯ ಆಪಾದನೆಗೂ ಒಳಗಾಗಬೇಕಾಗುತ್ತದೆ. ಉಪಾಯದಿಂದ ತಪ್ಪಿಸಿಕೊಂಡು ಪೋಲೀಸರಿಗೆ ಬೇಕಾಗಿದ್ದ ರೌಡಿ ಸುಖದೇವ್‌ನನ್ನು ಹಿಡಿದುಕೊಟ್ಟು ಬೆಂಗಳೂರಿಗೆ ಹಿಂತಿರುಗುತ್ತಾರ. ಈ ರೀತಿ ಅವರ ಮಧುಚಂದ್ರ ಸುತ್ತಲಿನ ಪರಿಸರ ಸನಿಹದ ಸಂಸರ್ಗದಿಂದ ಭೀಷಣ ವಾಗುವುದನ್ನು ಚೆನ್ನಾಗಿ ಚಿತ್ರಿಸಿದ್ದಾರೆ.

## ಹರಿಗೋಲು :

'ಕನ್ನಡಪ್ರಭ' ದಲ್ಲಿ 1982 ರಲ್ಲಿ ಪ್ರಕಟಗೊಂಡಿತ್ತು.

ಕಿಶನ್‌ಲಾಲ್ ಹೆಂಡತಿ ಸುಮನ್ ಮತ್ತು ಮಕ್ಕಳು ಯೋಗೀಶ, ಸಂಗೀತಾ ರೊಡನೆ ಬೆಂಗಳೂರಿನಿಂದ ಉತ್ತರ ಭಾರತ ಪ್ರವಾಸ ಹೊರಡುತ್ತಾರೆ ಸಂತೋಷ ದಿಂದ. ಅಲಹಾಬಾದಿನಲ್ಲಿ ನಡೆಯುವ ಕುಂಭಮೇಳದಲ್ಲಿ ಅಸಾಧ್ಯ ಜನ ಸಂದಣಿಯ ನೂಕು ನುಗ್ಗಲಿನಲ್ಲಿ ಮಕ್ಕಳು ಒಂದು ಕಡೆ, ಕಿಶನ್ ಒಂದು ಕಡೆ, ಸುಮನ್ ಒಂದು ಕಡೆ ಬೇರೆ ಬೇರೆಯಾಗುತ್ತಾರೆ. ಸುಮನ್‌ಳನ್ನು 5-6 ಜನ ರೌಡಿಗಳು ಹೊತ್ತೊಯ್ದು ಅತ್ಯಾಚಾರವೆಸಗಿ ನದಿ ಹತ್ತಿರ ಎಸೆದು ಹೋಗಿರುತ್ತಾರೆ. ಅವಳಿಗೆ ಜ್ಞಾನ ಬಂದು ಪೋಲೀಸ್ ಸ್ಟೇಷನ್‌ಗೆ ದೂರು ಕೊಡಲು ಹೋದಾಗ ಪೋಲೀಸಿ ನವರಿಂದಲೂ ಅತ್ಯಾಚಾರಕ್ಕೊಳಗಾಗಿ ಕಾಣೆಯಾಗುತ್ತಾಳೆ. ಕಿಶನ್‌ಲಾಲ್ ಹುಡುಕಿ ಸಾಕಾಗಿ ಮಕ್ಕಳು-ಹೆಂಡತಿ ಸಿಗದೆ ಬೆಂಗಳೂರಿಗೆ ಹಿಂತಿರುಗುತ್ತಾನೆ. ಮಕ್ಕಳು ಯೋಗೀಶ-ಸಂಗೀತ ಅನೇಕ ಕಷ್ಟಗಳನ್ನೆದುರಿಸಿ ಅವರಿಬ್ಬರೂ ಬೇರೆಬೇರೆಯಾಗಿ ಯೋಗೀಶ ಸ್ಮಗ್ಲರ್‌ನ ದೌರ್ಜನ್ಯಕ್ಕೊಳಗಾಗಿ ಕೊಲೆಯಾಗುತ್ತಾನೆ. ಸಂಗೀತಾ ತಂದೆ ಯನ್ನು ಸೇರುತ್ತಾಳೆ. ಸುಮನ್ ಆತ್ಮಹತ್ಯೆಗೆ ಪ್ರಯತ್ನಿಸಿ ಬದುಕಿ ಜೀವನದ ಸಾಧನೆ ಅಗತ್ಯವೆಂದರಿತು ಮನೆಗೆ ಬಂದಾಗ ಅತ್ಯಾಚಾರಕ್ಕೊಳಗಾದ ಹೆಣ್ಣನ್ನು ಕುಟುಂಬ ದವರು ಆದರಿಸುವುದಿಲ್ಲವೆಂಬ ಕಹಿ ಅನುಭವ ಪಡೆದು ಸಮಾಜ ಸೇವೆಗೆ ತನ್ನ ಜೀವನವನ್ನು ಮುಡುಪಾಗಿಟ್ಟು ನರ್ಸ್ ಆಗಿ ಜೀವನ ಸಾಗಿಸುತ್ತಾಳೆ.

ಗಂಡ-ಹೆಂಡತಿ ಮಕ್ಕಳು ಪರಸ್ಪರ ಬೇರೆಬೇರೆಯಾದಾಗಿನ ಮಾನಸಿಕ ಗೊಂದಲದ ಯಥಾರ್ಥ ಚಿತ್ರಣ ಯಶಸ್ವಿಯಾಗಿ ಮೂಡಿ ಬಂದಿದೆ 'ಹರಿಗೋಲು' ಕಾದಂಬರಿಯಲ್ಲಿ.

## ಪವನ ಚಕ್ರ :

ಆಧುನಿಕ ವಿಜ್ಞಾನದ ಹಿನ್ನೆಲೆಯುಳ್ಳ ಈ ಕಾದಂಬರಿ ವೈಶಿಷ್ಟ್ಯ ಪೂರ್ಣ ವಾಗಿದೆ.

ಮಲ್ಲಿಗೆಯಲ್ಲಿ 1982ರಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿದ್ದು ಅನಂತರ ಬಾಪ್ಕೋ ಪ್ರಕಟಣಾ ಮಾಲೆಯಲ್ಲಿ ಪುಸ್ತಕ ರೂಪದಲ್ಲಿ ಹೊರಬಂದಿದೆ.

ಅತ್ಯಾಧುನಿಕ ಉಪಕರಣಗಳ ಕ್ರಮಬದ್ಧ ಬಳಕೆಯಿಂದ ಅಂತರ ರಾಷ್ಟ್ರೀಯ ಕಳ್ಳಸಾಗಾಣಿಕೆ ಜಾಲವನ್ನು ನಿರ್ಭೀತ, ನಿಷ್ಣಾತ ಯುವ ತಂಡವೊಂದು ಹೇಗೆ ಶಿಥಿಲಗೊಳಿಸಲು ಸಮರ್ಥವಾಯಿತು ಎಂಬುದೇ ಈ 'ಪವನ ಚಕ್ರ' ವೈಜ್ಞಾನಿಕ ಕಾದಂಬರಿಯ ಕಥಾವಸ್ತು.

ಆರ್.ಡಿ. ಮುಕುಂದ್ ಸ್ಕಾಟ್ಲೆಂಡಿನಲ್ಲಿ ವಿಶೇಷ ತರಬೇತಿ ಹೊಂದಿ ವೈಜ್ಞಾನಿಕವಾಗಿ ಕಳ್ಳಸಾಗಾಣೆದಾರರನ್ನು ಕಂಡುಹಿಡಿಯುವ ಪತ್ತೆದಾರ. ಹೊರನೋಟಕ್ಕೆ ಸಮಾಜಸೇವೆ ಮಾಡಿ ಪ್ರಸಿದ್ಧಿ, ಒಳ್ಳೆ ಹೆಸರನ್ನು ಪಡೆದಿದ್ದ ದೇವಿಲಾಲ್‌ನ ಅಂತರ ರಾಷ್ಟ್ರೀಯ ಜಾಲವನ್ನೇ ಪತ್ತೆ ಹಚ್ಚಿ ನಾಶಪಡಿಸುತ್ತಾನೆ ಮುಕುಂದ. ಕಡಲಿನಾಳದಲ್ಲಿನ ಕಳ್ಳಸಾಗಾಣಿಕೆವ್ಯೂಹ ಹಾಗೂ ಅದರ ಭೇದನ ಬಹುರೋಚಕ ರೀತಿಯಲ್ಲಿ ವರ್ಣಿತವಾಗಿದೆ.

## ರಂಗಸ್ಥಳ :

ಪ್ರಜಾಮತದಲ್ಲಿ 1983ರಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿತ್ತು.

ಶ್ರೀಮಂತ ಸಮಾಜದ ವೈಭವೋಪೇತ ಜೀವನದ ವೈಪರೀತ್ಯಗಳನ್ನು ಕಣ್ಣಿಗೆ ಕಟ್ಟುವಂಥ ಚಿತ್ರಣದ ಕಾದಂಬರಿ 'ರಂಗಸ್ಥಳ'.

ಮಹತ್ವಾಕಾಂಕ್ಷಿಯಾದ ಅಪ್ಪೂಸ್ವಾಮಿ ಮೊದಲಿಯಾರ್ ತನ್ನ ಕುಟುಂಬದವರ 'ಭವಿಷ್ಯ'ಕ್ಕಾಗಿ ಸಮಾಜದ ಎಲ್ಲಾ ಕಟ್ಟು ಕಡಿವಾಣಗಳನ್ನು ಕಡಿದು ತನ್ನದೇ ಆದ ನೀತಿ–ನಿಯಮಗಳನ್ನು ರೂಪಿಸಿಕೊಂಡು ಧನಮದದಿಂದ ಬಡಪಾಯಿಗಳ ಜೀವನವನ್ನೇ ಪಗಡೆಯಾಡುತ್ತಾನೆ.

ರಂಗಸ್ವಾಮಿ, ವೆಂಕಟಸ್ವಾಮಿ ಹಾಗೂ ಗಂಡನ ದೌರ್ಬಲ್ಯಗಳನ್ನು ತಿಳಿದಿದ್ದರೂ ನಿಸ್ಸಹಾಯಕಳಾಗುವ ಸಾಧ್ವಿ ಮೀರಾಳ ಪಾತ್ರಗಳು ತುಂಬ ಸಮರ್ಪಕವಾಗಿ ಮೂಡಿಬಂದಿದೆ.

## ಗೆಜ್ಜೆ ಕಟ್ಟಿದ ಹೆಜ್ಜೆ :

ವೈಜ್ಞಾನಿಕ ಹಿನ್ನೆಲೆಯಲ್ಲಿ ರಚಿತಗೊಂಡಿರುವ ವಿಶಿಷ್ಟ ಕೃತಿ. 'ಮಂಗಳ' ವಾರಪತ್ರಿಕೆಯಲ್ಲಿ 1985ರಲ್ಲಿ ಪ್ರಕಟಗೊಂಡು ಅಪಾರ ಜನಮನ್ನಣೆ ಗಳಿಸಿದೆ.

ಮಾರಕ ಮಾದಕ ವಸ್ತುಗಳ ಕಳ್ಳ ಸಾಗಾಣಿಕೆಯನ್ನು ನಿಯಂತ್ರಿಸಲು ಆಧುನಿಕ ಅಣು ವಿಜ್ಞಾನ ನೆರವು ನೀಡಬಲ್ಲದು ಎಂಬುದನ್ನು ಯಶಸ್ವಿಯಾಗಿ ಇಲ್ಲಿ ತೋರಿಸಲಾಗಿದೆ. ಮುಕುಂದ ವಿದೇಶದಿಂದ ಅಪರಾಧಿ ಪತ್ತೆಯ ಬಗ್ಗೆ ವಿಶೇಷ ತರಬೇತಿ ಪಡೆದು ಬಂದ ಅಧಿಕಾರಿ. ಈತನನ್ನು ಮಾದಕ ವಸ್ತುಗಳ ತಯಾರಿ, ಮಾರಾಟ, ವಿತರಣೆ ಬಗ್ಗೆ ತಪಾಸಣೆ ನಡೆಸಲು ಭಾರತ ಸರ್ಕಾರ ನೇಮಿಸುತ್ತದೆ. ಈತ ನೇಪಾಳದ ಖಟಮಂಡುವಿಗೆ ಹೋಗಿ ಅಲ್ಲಿ ನಡೆಸುವ ಶೋಧನೆ, ಈ ಶೋಧನೆಯಲ್ಲಿ ತೋರುವ

ಸಾಹಸ, ಇದಕ್ಕಾಗಿ ಆತ ಉಪಯೋಗಿಸುವ ಅತ್ಯಾಧುನಿಕ ಉಪಕರಣಗಳು, ಐಸೋಟೋಪ್‌ಗಳ ಬಳಕೆ ಮುಂತಾದವು ಬಹು ಮನೋಜ್ಞವಾಗಿ ಕಾದಂಬರಿಯಲ್ಲಿ ರೂಪ ತಳೆದಿವೆ. ಅತ್ಯಂತ ಕುತೂಹಲಕಾರಿಯಾಗಿ ಸಾಗುವ ಕಥಾನಕವಾದ ಕಾದಂಬರಿ ಧಾರಾವಾಹಿಯಾಗಿ ಮಂಗಳದಲ್ಲಿ ಪ್ರಕಟಗೊಂಡಾಗ ಅಪಾರ ಸಂಖ್ಯೆಯಿಂದ ಓದುಗರು ಮೆಚ್ಚುಗೆ ವ್ಯಕ್ತಪಡಿಸಿದ್ದರು. ವೈಜ್ಞಾನಿಕ ಹಿನ್ನೆಲೆಯಲ್ಲಿ ಕತೆ ಕಾದಂಬರಿಗಳೇ ಇಲ್ಲದ ಕನ್ನಡ ಕಾದಂಬರಿ ಕ್ಷೇತ್ರದಲ್ಲಿನ ಕೊರತೆಯನ್ನು (ಈ ವೈಜ್ಞಾನಿಕ ಶೈಲಿಯ ಕಾದಂಬರಿ) ಇದು ತುಂಬುತ್ತದೆ.

## ಪ್ರೌಢಪ್ರತಾಪ ವೀರ ರಾಜೇಂದ್ರ :

'ಕನ್ನಡಪ್ರಭ'ದಲ್ಲಿ ಧಾರಾವಾಹಿಯಾಗಿ 1987ರಲ್ಲಿ ಪ್ರಕಟಗೊಂಡಿತ್ತು.

ಕೊಡಗಿನ ರಾಜಮನೆತನದ ಹಿನ್ನೆಲೆಯಲ್ಲಿ ರಚಿತಗೊಂಡಿರುವ ಈ ಚಾರಿತ್ರಿಕ ಕಾದಂಬರಿ 'ಕನ್ನಡಪ್ರಭ'ದಲ್ಲಿ ಧಾರಾವಾಹಿಯಾಗಿ ರೂಪುಗೊಂಡು ಅನಂತರ ಗ್ರಂಥ ರೂಪದಲ್ಲಿ ಹೊರಬಂದಿದೆ. ಅಪಾರ ಜನಮೆಚ್ಚುಗೆ ಗಳಿಸಿದೆ. ಪ್ರಶಸ್ತಿ, ಬಹುಮಾನ ಗಳಿಸಿದೆ. ಪಾಚ್ಛಾಪುರದ ವಿಶ್ವ ಭಾರತೀಯ ಪರಿಷತ್ತು ನಡೆಸಿದ ಕಾದಂಬರಿ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ರೂ. 4000/– ಗಳಿಸಿದೆ. (ಮೈಸೂರಿನ ಕರುನಾಡು ವಿದ್ಯಾಸಂಸ್ಥೆ, ಒಂದು ದಶಕ (1980--1990)ದ ಅತ್ಯುತ್ತಮ ಕೃತಿಗಳಲ್ಲಿ ಒಂದೆಂದು ಪರಿಗಣಿಸಿ 'ನೃಪತುಂಗ ಸಾಹಿತ್ಯ ಪ್ರಶಸ್ತಿ' ನೀಡಿದೆ) ಕೊಡಗಿನ ರಾಜಮನೆತನದಲ್ಲಿನ ಹೆಸರಾಂತ ವ್ಯಕ್ತಿಗಳೆಂದರೆ ಒಬ್ಬರು ದೊಡ್ಡ ವೀರ ರಾಜೇಂದ್ರ—ಇನ್ನೊಬ್ಬರು ಚಿಕ್ಕ ವೀರ ರಾಜೇಂದ್ರ. ಈ ಕೊನೆಯ ರಾಜ ಚಿಕ್ಕ ವೀರ ರಾಜೇಂದ್ರನ ಬಗ್ಗೆ ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಕಾದಂಬರಿ ರಚಿಸಿದ್ದಾರೆ. ದೊಡ್ಡ ವೀರ ರಾಜೇಂದ್ರನ ಬಗ್ಗೆ ರಚಿಸಿದವರು ಶ್ರೀನಿವಾಸರಾಯರು.

## ಪುಟಾಣಿ ಸಾಹಸಿಗಳು :

ಬಾಲ ಮಂಗಳದಲ್ಲಿ ಧಾರಾವಾಹಿಯಾಗಿ 1991ರಲ್ಲಿ ಪ್ರಕಟಗೊಂಡಿದೆ. ಇಲ್ಲಿ ಮಕ್ಕಳ ಸಾಹಸಕ್ಕೆ ಪ್ರಾಧಾನ್ಯತೆ ನೀಡಲಾಗಿದೆ. ಹೊಟೇಲೊಂದರಲ್ಲಿ ಜರುಗಿದ ಅಗ್ನಿ ದುರಂತದಲ್ಲಿ ಸಿಲುಕಿದ ಮಕ್ಕಳು ತೋರುವ ಸಾಹಸ ಈ ಕಾದುಂಬರಿಯಲ್ಲಿ ಮೈನವಿರೇಳಿಸುವ ರೀತಿಯಲ್ಲಿ ಚಿತ್ರಿತಗೊಂಡಿದೆ. ಮಕ್ಕಳಿಗೆ ಈಜು, ಪ್ರಥಮ ಚಿಕಿತ್ಸೆ, ಸ್ಕೌಟ್ ತರಬೇತಿ ಎಷ್ಟು ಅನಿವಾರ್ಯ ಎಂಬುದು ಈ ಕಥಾನಕವನ್ನು ಓದಿದಾಗ ಅರಿವಾಗುತ್ತದೆ. ಅರ್ಚನಾ, ಅರವಿಂದ, ಬಿಂದು ಹ್ಯಾರಿ ಜ್ಯೂಲಿಯಾ ಅವರು, ಸಾಹಸ ಪ್ರದರ್ಶನದಿಂದಾಗಿ ಮಕ್ಕಳ ಮನಸ್ಸಿನಲ್ಲಿ ಅನುಕರಣೀಯ ವ್ಯಕ್ತಿಗಳಾಗಿ ಉಳಿಯುತ್ತಾರೆ. ಈ ಕಾದಂಬರಿ ಮಕ್ಕಳಿಗಲ್ಲದೆ ಇತರರಿಗೂ ಸಂತೋಷ ನೀಡುತ್ತದೆ.



# ಇಪ್ಪತ್ತೊಂದು ಬಾಂಗ್ಲಾ ಕಥೆಗಳು

ಪ್ರೊ. ಎಸ್. ಶ್ರೀನಿವಾಸನ್

ಇತ್ತೀಚಿನ ದಿನಗಳಲ್ಲಿ ಭಾರತೀಯ ಭಾಷೆಗಳಲ್ಲಿ, ಭಾರತೇತರ ಭಾಷೆಗಳಲ್ಲಿ ರಚಿತವಾದ ಸಣ್ಣ ಕತೆಗಳ ಅನೇಕ ಸಂಪುಟಗಳು ಹೊರಬೀಳುತ್ತಿರುವುದು ಅತ್ಯಂತ ಸಂತಸದ ಸಂಗತಿ. ಈ ಪ್ರಕಟಣೆಗಳು ಒಂದು ಭಾಷೆಯನ್ನಾಡುವವರು ಅರಿತುಕೊಳ್ಳುವುದಕ್ಕೂ ಅವರೊಡನೆ ಪ್ರೇಮ ತಾಳುವುದಕ್ಕೂ ಉತ್ತಮ ಮಾರ್ಗವಾಗುತ್ತದೆ. ಮನುಷ್ಯರನ್ನೂ ಜೀವನವನ್ನೂ ಹೊಂದಿಕೊಂಡಿರುವುದೇ ಒಂದು ಭಾಷೆಯ ಮೊದಲ ವೈಶಿಷ್ಟ್ಯ. ಒಂದು ಭಾಷೆಯಲ್ಲಿ ಪ್ರಕಟವಾಗುವಂಥ ಸೃಷ್ಟಿ ಆ ಭಾಷೆಗೆ ಮಾತ್ರ ಸೇರಿದುದು ಎಂಬುದು ಒಂದು ವೈಶಿಷ್ಟ್ಯವಲ್ಲ. ಮನುಷ್ಯರ ಬಗ್ಗೆ ಮನುಷ್ಯನ ಚಿಂತನೆ, ಭಾಷೆ, ದೇಶ ಎಂಬ ಎಲ್ಲೆಯನ್ನು ದಾಟಿ ಸಂಬಂಧವನ್ನು ಕೊಂಡಾಡುವುದು ನಾಗರೀಕವಾದ ಬೆಳವಣಿಗೆ. ಸಾಹಿತ್ಯ ನಾಗರೀಕತೆಯ ಒರೆಗಲ್ಲು. ಕಟುವಾದ ವಿಮರ್ಶೆಗೂ ಎಲ್ಲೆ ಮೀರಿದ ಮೆಚ್ಚುಗೆಯ ಮಾತುಗಳಿಗೂ ಕಿವಿಗೊಡಬೇಕಾದ ಸಂದರ್ಭಗಳೇನೂ ಕಡಿಮೆಯಿಲ್ಲ. ಆದರೆ ಒದಗಿಬಂದ ಸಂದರ್ಭಗಳನ್ನು ಸದುಪಯೋಗಪಡಿಸಿಕೊಂಡು ಮುಂದುವರಿಯುವುದು ತಿಳಿವಳಿಕೆ ಉಳ್ಳವನ ಲಕ್ಷಣ.

ಎಡ್ಗರ್ ಅಲೆನ್ ಪೋ (*Edgar Allan Poe*) ಹೆನ್ರಿ ಹಡ್ಸನ್ (*Hennry Hudson*) ಬ್ಯಾರಿ ಪೇನ್ (*Barry Paine*) ಮೊದಲಾದವರು ಹೇಳುವ ಕತೆಗಳ ಲಕ್ಷಣಗಳನ್ನು ನೋಡಿದಾಗ ಅವು ಒಂದೇ ಪಟ್ಟಿನಲ್ಲಿ ಓದಿ ಒಂದು ಒಂದೂವರೆ ಗಂಟೆಯೊಳಗಾಗಿ ಓದಿ ಬಿಡುವಂಥವುಗಳಾಗಿರಬೇಕು. ಪ್ರಮಾಣವೂ ಕತೆ ಅಥವಾ ನೀಳ್ಗತೆಯ ಲಕ್ಷಣಗಳಲ್ಲೊಂದಾಗಿದೆ.

ಕಾದಂಬರಿ, ನೀಳ್ಗತೆ, ಸಣ್ಣಕತೆ-ಹೀಗೆ ಕಥನ ಸಾಹಿತ್ಯವನ್ನು ಮೂರು ವಿಧವಾಗಿ ವಿಂಗಡಿಸಬಹುದು. ಕಾದಂಬರಿಗಳಲ್ಲೂ ಸಣ್ಣಕತೆಗಳಲ್ಲೂ ಪಾತ್ರಗಳು ವಾಸ್ತವಿಕವಾಗಿಯೂ ಸಜೀವವಾಗಿಯೂ ಇರಬೇಕೆಂದು ನಿರೀಕ್ಷಿಸಲಾಗದಿದ್ದರೂ, ಸಣ್ಣಕತೆಗಳ ಹಲವು ಪಾತ್ರಗಳನ್ನು ಪೂರ್ತಿಯಾಗಿ ನಿರ್ಮಿಸಿ ತೋರಿಸುವ ಅವಶ್ಯಕತೆ ಇರುವುದಿಲ್ಲ. ಮಾತುಕತೆಗಳಲ್ಲಿಯೇ ಪಾತ್ರಗಳ ಗುಣ ವಿಶೇಷಗಳು ಸೂಚಿತವಾಗುವಂತೆ ರಚಿಸುವುದು ಸಾಧ್ಯ. ಪಾತ್ರಗಳ ಅಂಗರಚನೆಯನ್ನೂ ರೂಪವಿಶೇಷ

ಗಳನ್ನೂ ವರ್ಣಿಸಲು ಕೆಲವು ಅರ್ಥಗರ್ಭಿತವಾದ ಶಬ್ದಗಳನ್ನು ಪ್ರಯೋಗಿಸಲೂ ಸಾಧ್ಯವಾಗುವುದು. ಕ್ರಮಕ್ರಮವಾಗಿ ಹಲವು ವಾಕ್ಯಗಳಲ್ಲಿ ಪಾತ್ರಗಳನ್ನು ವರ್ಣಿಸ ಬೇಕಾಗಿರುವುದು ಕಾದಂಬರಿಗಳಲ್ಲೂ ನೀಳ್ಗತೆಗಳಲ್ಲೂ ನಿರೀಕ್ಷಿಸಬಹುದು. ಆದರೆ ಈ ಬಗೆಯ ದೀರ್ಘವರ್ಣನೆಗಳು ಸಣ್ಣಕತೆಗೆ ಹೊಂದುವುದಿಲ್ಲ. ಕಾದಂಬರಿಗಳು ಬಿಡುವಿರುವ ಹಣವಂತರು ಸಾವಕಾಶವಾಗಿ ಸವಿದು ಉಣ್ಣುವ ದೊಡ್ಡ ಹಬ್ಬದ ಊಟದಂತೆ. ಸಣ್ಣ ಕತೆಗಳು ಚಟುವಟಿಕೆಯಿಂದ ಕೂಡಿದ ಕೆಲಸದವರು ತಿನ್ನುವ ಉಪ್ಪೇರಿ ಚೂರುಗಳಂತೆ. ಕೆಲವು ವೇಳೆ ಸಣ್ಣ ಕತೆಗಳಲ್ಲಿ ಅಡಕವಾಗಿರುವ ವೃತ್ತಾಂತವೇ ಒಂದು ನೀಳ್ಗತೆಗೆ ಬೀಜ ಸ್ವರೂಪದಲ್ಲಿರಲೂಬಹುದು. ಆದರೆ ಬರೆಯುವಾಗ ಮನಸ್ಸಿನಲ್ಲಿ ಸಜೀವವಾಗಿ ರೂಪ ತಾಳುವ ಜನರನ್ನು ಕುರಿತು ಬರೆಯುವುದೇ ಸಮರ್ಪಕವಾದೀತು. ಜೀವವಿಲ್ಲದ ಪ್ರೇತಗಳನ್ನು ಕುರಿತೋ, ಬೇಸರವನ್ನುಂಟುಮಾಡುವ ಬೊಂಬೆಗಳನ್ನು ಕುರಿತೋ ಬರೆಯದೆ ಇರುವುದು ಉತ್ತಮ. ಕಲ್ಲನ್ನು ಕುರಿತೋ ಶಿಲೆಯನ್ನು ಕುರಿತೋ ಬರೆದರೆ ಕಲ್ಲಿನ ರೂಪದಲ್ಲಿ ಅಡಗಿರುವ ಕಲೆಯ ಲಕ್ಷಣವನ್ನು ಎತ್ತಿ ತೋರಿಸುವಂತೆ ಕತೆಯು ರಚನೆಯಾಗಬೇಕು. ದಕ್ಷ ಕತೆಗಾರನಿಗೆ ಕೆಲವು ಘಟನೆಗಳನ್ನು ಪೋಣಿಸಿ ಅವು ಒಂದೇ ಘಟನೆಯಾಗಿ ತೋರುವಂತೆ ಮಾಡುವ ಯೋಗ್ಯತೆ ಇರುತ್ತದೆ.

ಕತೆಗಳ ನಡೆ ಹೇಗಿರಬೇಕು ? ಅದು ನೀತಿಯನ್ನು ಬೋಧಿಸಬೇಕೇ ? ಎಂಬುದಕ್ಕೆ ಸರಳವಾಗಿ ಪಾತ್ರಗಳು ಮಾತಾಡುವಂತೆ, ಸಂಭಾಷಣೆ ಲವಲವಿಕೆ ಯಿಂದಿರುವಂತೆ, ಸಹಜವಾಗಿ ನಾಟಕದಂತೆ ತೋರುವುದಾಗಿಯೂ ಇರುವುದು ಉತ್ತಮ. ಉತ್ತಮ ಕಥೆಯ ಶ್ರೇಷ್ಠವಾದ ಗುರಿ ಜನರ ಆತ್ಮಶಕ್ತಿಯನ್ನು ಪ್ರಚೋದಿಸುವುದೇ ಆಗಿದೆ.

ಈ ದೃಷ್ಟಿಯಿಂದ ನೋಡಿದರೆ ಬಾಂಗ್ಲಾ ದೇಶದ ಕತೆಗಳ ಉತ್ಕರ್ಷವನ್ನು ಅಲ್ಲಗಳೆಯುವಂತಿಲ್ಲ. ಮಧ್ಯಮವರ್ಗದ ಜನಗಳ ಸಮಸ್ಯೆಯಿಂದ ತುಂಬಿರುವ ನಗರ ಜೀವನ, ಉಕ್ಕಿ ಹರಿಯುತ್ತಿರುವ ನದಿಗಳು, ಪಶ್ಚಿಮದ ಪ್ರಭಾವದ ಏರಿಳಿತಕ್ಕೆ ಸಿಲುಕಿದ ಗ್ರಾಮೀಣ ಜೀವನ ಹೊರಡಿಸುವ ಸುಸ್ವರದಿಂದಾಗಿ ಇಪ್ಪತ್ತೊಂದು ಬಾಂಗ್ಲಾ ಕತೆಗಳಿಗೆ ಒಂದು ವೈಶಿಷ್ಟ್ಯತೆ ಲಭಿಸಿದೆ.

ಈ ಸಂಗ್ರಹದಲ್ಲಿನ ಕತೆಗಾರರು ಒಂದಲ್ಲ ಒಂದು ರೀತಿಯ ಅತ್ಯಂತ ಪ್ರತಿಷ್ಠಿತ ವ್ಯಕ್ತಿಗಳು. ಶರತ್‌ಚಂದ್ರರ ನಂತರ ಬಾಂಗ್ಲಾ ಕಥಾ ಸಾಹಿತ್ಯದಲ್ಲಿ ಸುಪ್ರಸಿದ್ಧ ರಾದವರು ತಾರಾ ಶಂಕರ ಬಂದೋಪಾಧ್ಯಾಯರು, ಬಲಾಯಿಚಾಂದ್ ಮುಖ್ಯೋಪಾಧ್ಯಾಯರು, ಅಚಿಂತ್ಯಕುಮಾರ್ ಸೇನ್ ಗುಪ್ತ ಪ್ರೇಮೇಂದ್ರ ಮಿತ್ರ,

ಮುಂತಾದ ಜ್ಞಾನಪೀಠ ಪ್ರಶಸ್ತಿ, ಪದ್ಮಭೂಷಣ, ಪದ್ಮಶ್ರೀ, ಸಾಹಿತ್ಯ ಸಮ್ಮಾನ್ ಪ್ರಶಸ್ತಿಗಳ ಸರಮಾಲೆಯನ್ನೇ ಪಡೆದ ಮಹನೀಯರು. ಇವರೆಲ್ಲರ ಕತೆಗಳಲ್ಲಿ ಯಥಾರ್ಥವಾದ ಸೆಳೆತವನ್ನು ಸ್ಪಷ್ಟವಾಗಿ ಕಾಣಬಹುದು. ಗ್ರಾಮೀಣ ಜೀವನ ಹಾಗೂ ನಗರ ಜೀವನಗಳ ಅಂತರವನ್ನು ಮನೋಜ್ಞವಾಗಿ ವರ್ಣಿಸಿದ್ದಾರೆ. ಈ ಲೇಖಕರ ಕತೆಗಳನ್ನೆಲ್ಲ ಕಾಲದ ಮಾನದಂಡದಂತೆ ಎರಡು ವಿಧವಾಗಿ ವಿಭಾಗಿಸ ಬಹುದು. ಮಾನವನ ಮನಸ್ಸಿನ ತಳ ಮುಟ್ಟುವ ಆಸೆಯುಳ್ಳ ಕತೆಗಳು ಕೆಲವಿವೆ. ಅನೇಕ ಕತೆಗಳಲ್ಲಿ ಆನಂದರ, ಮಾಸ್ತಿಯವರ ಕತೆಗಳ ಹೋಲಿಕೆ ಹಾಗೂ ಬನಿ ಕಂಡು ಬರುತ್ತವೆ.

ಜಗತ್ತಿನ ಸರ್ವಶ್ರೇಷ್ಠ ಕಥಾ ಲೇಖಕರ ಶ್ರೇಣಿಯಲ್ಲಿ ಈ ಇಪ್ಪತ್ತೊಂದು ಜನ ಮಹನೀಯರು ಕುಳಿತಿದ್ದಾರೆ. ಇವರೆಲ್ಲರೂ ಇದುವರೆವಿಗೆ ಜಗತ್ತು ಕಂಡ ಅತ್ಯುತ್ತಮ ಸಾಹಿತ್ಯಕರಾಗಿದ್ದಾರೆ. ಅಖಂಡಭೂಮಂಡಳದಲ್ಲಿ ಎಲ್ಲ ಕಾಲಕ್ಕೂ ಅದ್ವಿತೀಯರಾಗಿ ಮೆರೆದಿದ್ದಾರೆ. ಉಳಿದ ಸಾಹಿತ್ಯ ಪ್ರಕಾರಗಳಲ್ಲಿಯೂ ಅಷ್ಟೇ ಶ್ರೇಷ್ಠ ಸಿದ್ಧಿಯನ್ನು ಸಂಪಾದಿಸಿದ ಅಸಾಮಾನ್ಯ ವ್ಯಕ್ತಿಗಳಾಗಿದ್ದಾರೆ. ಇವರು ಅತ್ಯಂತ ಯಶಸ್ವಿಯಾಗಿ ಬಳಸಿಕೊಳ್ಳದ ಸಾಹಿತ್ಯ ಪ್ರಕಾರವೇ ಇಲ್ಲ. ಇವರ ನಿರ್ಮಿತಿಯು, ಪರಿಮಿತಿ ಮತ್ತು ವೈವಿಧ್ಯಗಳು ಬೆರಗುಗೊಳಿಸುವಂಥವು, ಸಾಹಿತ್ಯದ ಸೃಷ್ಟಿ ನವೋನವ ರೂಪವನ್ನೂ ನಿರುಪಮ ಲಾವಣ್ಯವನ್ನೂ ಹೊಂದಿದೆ. ಇವರ ಆಳವಾದ ಹರವಾದ ಬರಹ ಜಾಜ್ವಲ್ಯಮಾನವಾಗಿದ್ದು ಶ್ರೇಷ್ಠತೆಯು ಕಡೆಗೆ ಸಾಗಿದೆ. ಯಾವುದೇ ರೂಪದಲ್ಲಿದ್ದ ಅತ್ಯಾಚಾರ ಅನ್ಯಾಯಗಳ ವಿರುದ್ಧ ಹೂಡಿದ ಪ್ರತಿಭಟನೆ, ಸ್ವಾತಂತ್ರ ಸಂಗ್ರಾಮದ ರಾಷ್ಟ್ರೀಯ ಆಂದೋಲನ, ಜಗತ್ತಿನ ಜನಾಂಗಗಳಿಗೆಲ್ಲ ಸಂದೇಶ ಪ್ರಸರಣ-ಅವರ ಜಾಗತಿಕ ಸ್ವರೂಪದ ಸ್ಥಾನಮಾನದಿಂದಾಗಿ ಪ್ರಪಂಚದ ಪ್ರತಿ ಜನಾಂಗ, ಪ್ರತಿ ಪ್ರದೇಶದ ಮಹಾಪುರುಷರ ಸಂಪರ್ಕಸಾಧನ, ಕೃತಾರ್ಥ ಕರ್ತವ್ಯ ಕಾರ್ಯಗಳ ಸಾಮರಸ್ಯ ಸಾಮಂಜಸ್ಯಗಳು ಇಲ್ಲಿ ಮೈಗೂಡಿ ನಿಂತಿವೆ.

ಇಲ್ಲಿನ ಕಥೆಗಳ ಮೀಮಾಂಸೆಗಳ ಕಡೆ ಹೊರಳಿ ನೋಡುವುದಾದರೆ ಅವು ತಮ್ಮದೇ ಆದ ಒಂದು ವಿಶಿಷ್ಟ ದಾರಿಯಲ್ಲಿ ನಡೆದು ಮುಂದುವರಿದಿವೆ. ಬಂಗಾಲದಲ್ಲಿ ಆಗಿನ ಕಾಲಕ್ಕೆ ಸರಿಯಾದ ಮಾರ್ಗದರ್ಶಕರಿಲ್ಲದೆ ಕಥನ, ಕಲೆಯಲ್ಲಿ ತಾವೇತಾವಾಗಿ, ಸರ್ವಥಾ ಏಕೈಕರೂ ದೇದೀಪ್ಯಮಾನರೂ ಆಗಿ ಇದರ ಲೇಖಕರು ವಿರಾಜಿಸಿದ್ದಾರೆ. ಪ್ರತಿಭೆಯ ಗುಣವಿಶೇಷಗಳನ್ನೂ, ಲಕ್ಷಣಗಳನ್ನೂ ವ್ಯಕ್ತಪಡಿಸುವಲ್ಲಿ ಇಲ್ಲಿನ ಕತೆಗಳು ಲೇಖಕರ ಶಕ್ತಿಗೇ ಮಾರುಹೋಗಿವೆ.

ಹಳ್ಳಿಗಳಲ್ಲಿ ತಿರುಗಾಡುವಾಗ ತಾವು ಪ್ರತ್ಯಕ್ಷ ಕಂಡವರ ಸ್ವಭಾವ ಚಿತ್ರಣವನ್ನೇ,

ಜಮೀನುದಾರರ ಭಯಂಕರ ಕ್ರೌರ್ಯವನ್ನೇ "ಕೊನೆಯ ಮಾತು" ಜ್ವಲಂತವಾಗಿ ಚಿತ್ರಿಸಿದೆ. ವೃದ್ಧ ಸುಖದಲ್ಲೂ ನಗುತ್ತಾನೆ, ದುಃಖದಲ್ಲೂ ನಗುತ್ತಾನೆ ಚಿಂತೆಯಲ್ಲೂ ನಗುತ್ತಾನೆ ಎಂಬ ನಾನು ಸಾಯುತ್ತೇನೆ—ಮೃತ್ಯು ಬಹು ಸುಂದರ, ಮೃತ್ಯು ಆನಂದದಾಯಕ-ಇವೆಲ್ಲ ಭಯಂಕರ ವೇದನೆಯ ಪ್ರತೀಕಗಳೇ ಆಗಿವೆ.

ಅನೈತಿಕವೂ ಅತಿಮಾನುಷವೂ ಆದ "ಕಪ್ತಾನ", ಅಮಿತ ಭೋಗ ನಿಮಗ್ನ ಗತಕಾಲದ ದರ್ಶನ, ಅಂದಿನ ಪ್ರೇಮ ಪ್ರಣಯ ಕ್ರೌರ್ಯ, ಅತೃಪ್ತ ಕ್ಷುಧಿತ ರಾಗಾವೇಗಗಳನ್ನು ಚಿತ್ರಿಸುತ್ತದೆ.

ಇಲ್ಲಿನ ಕಥೆಗಳಲ್ಲಿ ಅತಿ ಶ್ರೇಷ್ಠವಾದುವುಗಳೆಂದರೆ ಒಂದು ಪ್ರೇಮಕಥೆ, ಒಂದು ವೃಕ್ಷ, ಭಾರತವರ್ಷ, ಇಸ್ಪೀಟ್ ಮನೆ, ಮುಚ್ಚಂಜೆಯ ಎರಡು ಮುಖ, ಹಾಗೂ ನನ್ನನ್ನು ನೋಡಿ ಎಂಬುವು. ಪರಮಪುರುಷನ ವಿಷಯಕ್ಕೆ ಒಬ್ಬ ವಿವಾಹಿತ ಕಾಂತೆಯ ಪ್ರಣಯಾಂಕುರ, ಪ್ರಣಯವರ್ಧನ ಹೇಗಾಯ್ತು ಎಂಬುದರ ಸೂಕ್ಷ್ಮಾಂಶವಿದೆ, ಸೂಕ್ಷ್ಮಾವಲೋಕನವಿದೆ. ನಾರೀ ಜೀವನದ ಕೃತಾರ್ಥತೆಯು ಕೇವಲ ಪತ್ನೀತ್ವದಲ್ಲಿಯೇ ಇಲ್ಲ ಎಂಬ ಪ್ರತೀತಿ ಎದ್ದುಕಾಣುತ್ತದೆ. ಮನೆಯೊಳಗಿನ ಸ್ವಾರ್ಥ ಸಂಕುಲ ವಾತಾವರಣ, ಹೇಳಲಾರದ ಹೀನ ವೃತ್ತಿ ಅಬದ್ಧ ಮಿಥ್ಯಾಚಾರ ಕುಟುಂಬದ ಪುರುಷವರ್ಗ-ಇವುಗಳನ್ನು ಸ್ತ್ರೀಯರು ಸ್ವಾಭಾವಿಕವೆಂದೇ ಅಂಗೀಕರಿಸಬೇಕೆಂಬ ನಿರೀಕ್ಷಣೆಯನ್ನು ಆತ್ಮಸತ್ವ ಪ್ರತಿಭಟಿಸಿ ಹೊರಬೀಳಬೇಕು. ತನ್ನಲ್ಲಿ ತನ್ನದೆಂಬ ಆತ್ಮ ಜೀವಂತವಿದೆ,ವ್ಯಕ್ತಿತ್ವ ಉಳಿದುಕೊಂಡಿದೆ ಎಂಬುದನ್ನೂ ಇದರಿಂದ ಅವರ್ಣನೀಯ ಆನಂದವುಂಟಾಗುತ್ತದೆಂಬುದನ್ನೂ ಶ್ರೀ ಎಸ್. ವಿ. ಶ್ರೀನಿವಾಸ್ ರಾವ್ ಅವರು ತಮ್ಮ ಇಪ್ಪತ್ತೊಂದು ಬಾಂಗ್ಲಾ ಕಥೆಗಳು ಅನುವಾದದಲ್ಲಿ ಸರಳವಾಗಿ, ಆಕರ್ಷಕವಾಗಿ ಅವರ ಭಾವನಾಮಯ ಮನಸ್ಥಿತಿಯ ಪರಿಚಯ ಮಾಡಿಕೊಡುವಂತೆ ಲಲಿತವಾಗಿ, ಸಾಮಾನ್ಯ ಜನತೆಗೂ ವಾಚನಾಭಿರುಚಿಯನ್ನು ಹುಟ್ಟಿಸುವಂತೆ ಮನೋಹರವಾಗಿ ಅನುವಾದಿಸಿದ್ದಾರೆ. ಕೃತಿಯ ಕೊನೆಯಲ್ಲಿ ಎಲ್ಲಾ ಮೂಲ ಲೇಖಕರ ಪರಿಚಯ ನೀಡಿರುವುದು ಬಹು ಪ್ರಯೋಜನಕಾರಿಯಾಗಿದೆ.

ಶ್ರೀಯುತರು ಇಷ್ಟೊಂದು ಗುಣ ವಿಶೇಷಗಳನ್ನು ಹೊಂದಿರುವುದು ಒಂದು ಅಸಾಮಾನ್ಯ ಲಕ್ಷಣವೇ. ಇದಕ್ಕಿಂತ ಹೆಚ್ಚಿನ ಲಕ್ಷಣವೆಂದರೆ ಇವರಲ್ಲಿ ರಕ್ತಗತವಾಗಿರುವ ನಾನಾವಿಧವಾದ ಶಕ್ತಿ ಸಂಮೋಹಗಳ ಸಾಮರಸ್ಯ. ಕುಡಿಗೊಂಡು ಕವಲೊಡೆದು ಹರವಿದ ಅವರ ಒಳ ಜೀವನದ ವೃತ್ತಿ ಪ್ರವೃತ್ತಿಗಳೆಲ್ಲ ಮನೋಜ್ಞವಾಗಿ ಹೊಂದಿ ಹೆಣೆಕೆಗೊಂಡು ಅವರಿಗೆ ಅತ್ಯಂತ ಪ್ರಭಾವಶಾಲಿಯಾದ ಸರ್ವ ಸುಂದರ ವ್ಯಕ್ತಿತ್ವವನ್ನು ತಂದುಕೊಟ್ಟಿವೆ. ಇವರು ಕೈಕೊಂಡ ಹಾಗೂ ಪೂರೈಸಿದ

ಕಾರ್ಯಗಳು ವೈವಿಧ್ಯ ಪೂರ್ಣ ಹಾಗೂ ಅಸಾಧಾರಣ. ಇವರ ಕಾರ್ಯ ನಿರ್ವಹಣ ಪದ್ಧತಿಯಲ್ಲಿ ಆಡಂಬರ, ಸದ್ದುಗದ್ದಲ ಎಂದೂ ಇದ್ದಿಲ್ಲ ಈಗಲೂ ಇಲ್ಲ ಎಲ್ಲವನ್ನೂ ನಿರಾಯಾಸವಾಗಿ ಸುಲಭವಾಗಿ ಅಭಿರಾಮವಾಗಿ ಮಾಡಬಲ್ಲ ಸಹಜವಾದ ಕಾರ್ಯ ನೈಪುಣ್ಯ ಇವರದು. ಇದನ್ನು ದೂರದಿಂದ ಕಂಡವರಿಗೆ ಇದೇನು ತೀರ ಸರಳ ಎಂದು ತೋರಿದರೂ ಇದರ ಹಿಂದೆ ಜೀವನದುದ್ದಕ್ಕೂ ಮೈಗೂಡಿಸಿಕೊಂಡು ಬಂದ ಅನುಭವ–ಜೀವಮಾನದ ಪೂರ್ವಸಿದ್ಧತೆ ಇದೆ. ಮಹತ್ತೆಂಬುದನ್ನು ಕಂಡಾಗಲೆಲ್ಲ ಅವರು ಮಣಿದಿದ್ದಾರೆ. ಪರಾತ್ಪರ ಪರಮ ಪುರುಷನ ಅಸ್ತಿತ್ವವನ್ನು ನಂಬಿದ ಅವರು ಸಾಧ್ಯವಾದಷ್ಟು ಮಟ್ಟಿಗೆ ಅವರ ಕೃತಿಗಳೆಲ್ಲವನ್ನೂ ಕೃತಜ್ಞಭಾವದಿಂದ ಒಟ್ಟುಗೂಡಿಸಿ ಆ ಪುರುಷೋತ್ತಮನಿಗೆ ನಿವೇದಿಸಿದ್ದಾರೆ. ಹೊರಗಿನಿಂದ ವಿರೋಧ ಎದುರಿಸ ಬೇಕಾದಾಗ ಆಂತರಿಕ ಸಂತೃಪ್ತಿಯಿಂದ ಅದನ್ನು ಎದುರಿಸಿ, ಯಾತ್ರಿಕನಾಗಿ ಮಾನವ ಇತಿಹಾಸದ ಕೇಂದ್ರವರ್ತಿಯಾಗಿ ಶ್ರೀ ಎಸ್. ವಿ. ಶ್ರೀನಿವಾಸರಾಯರು ನಿಂತಿದ್ದಾರೆ. "ಯತ್ರ ವಿಶ್ವಂ ಭವತ್ಯೇಕ ನೀಡಂ" ಅವರ ಮನೋಮಂದಿರದಲ್ಲಿ ಈ ವಿಶಾಲ ವಿಶ್ವ ಒಂದು ಗೂಡಾಗಿ ಬಿಡಾರ ಬಿಟ್ಟಿದೆ. ಅವರು ಈ ತಲೆಮಾರಿನ ಕಾಲಮಾನದ ಮೇಲೆಯೇ ಒಂದು ಬಗೆಯ ಮಾಜದ (ಮಾಯದ) ಪ್ರಭಾವ ಬೀರಿದ್ದಾರೆ ಎಂದು ನಿರ್ವಿವಾದವಾಗಿ ಅವರ ಬರವಣಿಗೆಗಳು ಸಾರುತ್ತಿವೆ. ಅವರ ಬರವಣಿಗೆ ಯಾವತ್ತೂ ಸ್ಮರಣೀಯ. ಮೇಲಾಗಿ ಭಾಷಾಂತರ ಕಲೆಯಲ್ಲಿ ಸಿದ್ಧಹಸ್ತರಿದ್ದು ಶ್ರೀಯುತರು ಮೂಲದ ಸ್ವಾರಸ್ಯಕ್ಕೆ ಎಲ್ಲಿಯೂ ಕುಂದನ್ನುಂಟು ಮಾಡದಂತೆ ಇಲ್ಲಿನ ಕತೆಗಳನ್ನು ತಿಳಿಯಾಗಿ ಸಮರಸವಾಗಿ ಅನುವಾದಿಸಿದ್ದಾರೆ.

ಇವರ ಈ ಕೃತಿ ಕೊಂಡು ಮನೆಯಲ್ಲಿ ಇಟ್ಟು ಓದಲು ಸರ್ವಥಾಯೋಗ್ಯ. ಕನ್ನಡಿಗರು ಇದನ್ನು ಆತ್ಮೀಯತೆಯಿಂದ ಬರಮಾಡಿಕೊಳ್ಳಲಿ ಎಂದು ಆಶಿಸುತ್ತೇನೆ.



# ಹೃದಯಂಗಮ ಚಿತ್ರಣ-ಸೋನಾರ್ ಬಾಂಗ್ಲಾ

—ರಾಜಾ ಚೆಂಡೂರ್

"ಯುದ್ಧ"ಗಳು ಮಾನವಕುಲಕ್ಕೆ ಬಹಳ ದೊಡ್ಡ ಶಾಪ. ಕೆಲವರ ಪ್ರತಿಷ್ಠೆ, ಅಹಂಕಾರ, ಮಹಾಕಾಂಕ್ಷೆಗಳ ಅಧರ್ಮಯಜ್ಞಕ್ಕೆ ನಿರಾಯುಧ, ಮುಗ್ಧ, ಯಾವ ಪಾಪವನ್ನೂ ಅರಿಯದ ಜನಸಾಮಾನ್ಯನೇ ಸಮಿತ್ತು. ಈ ಯುದ್ಧಗಳ ಕಾರಣ ಕ್ಷುಲ್ಲಕ. ಕದನ ಭೀಕರ. ಪರಿಣಾಮವಂತೂ ಮಹಾಘೋರ. ಇಷ್ಟೆಲ್ಲದರ ಅರಿವಿದ್ದೂ ಮನುಷ್ಯ, ಚರಿತ್ರೆಯಿಂದ ಪಾಠ ಕಲಿಯದೆ ಈ ತಪ್ಪನ್ನು ಪುನರಾವರ್ತಿಸುತ್ತಲೇ ಬಂದಿದ್ದಾನೆ. ಬಡತನದೊಡನೆ ಯುದ್ಧದಲ್ಲೇ ಪ್ರತಿಕ್ಷಣವೂ ಹೋರಾಡುತ್ತಿರುವ ಪಾಕಿಸ್ತಾನ ಭಾರತದಂತಹ ದೇಶಗಳಿಗಂತೂ ಈ ಯುದ್ಧಗಳು ಕನಸು-ಮನಸಿನಲ್ಲೂ ಸುಳಿಯಬಾರದು. ಆದರೂ ನಡೆದೇಹೋಯಿತು—ಬಂಗ್ಲಾ ವಿಮೋಚನೆಗಾಗಿ 1971ರ ಭಾರತ ಪಾಕಿಸ್ತಾನ ಯುದ್ಧ.

ಪಾಕಿಸ್ತಾನ ಸೋಲನ್ನೊಪ್ಪಿಕೊಂಡಿತು—ಭಾರತ ವಿಜಯ ಸಾಧಿಸಿತು.

ಬಂಗ್ಲಾ ಸ್ವತಂತ್ರದೇಶವಾಯಿತು. ಎಲ್ಲಾ ಸರಿಯೇ—ಆದರೆ ಮೇಲಿನ ಮೂರೂ ದೇಶಗಳ ಪ್ರಜೆಗಳ ತಲ್ಲಣ, ಅನುಭವಿಸಿದ ಹಿಂಸೆ, ಕಳೆದುಕೊಂಡ ಆಸ್ತಿ-ಪಾಸ್ತಿ, ಪ್ರಾಣಹಾನಿ ಇವೆಲ್ಲದರ ಬಗ್ಗೆ ಯಾರು ತಾನೆ ವಿಜಯೋತ್ಸವ ಆಚರಿಸಲು ಸಾಧ್ಯ ?

ಈ ವಿಷಯದ ಆಧಾರದ ಮೇಲೆ ಬಹಳ ಸೊಗಸಾಗಿ, ಹೃದಯಸ್ಪರ್ಶಿಯಾಗಿ, ಅಪರೂಪಕ್ಕೆಂಬಂತೆ ಕನ್ನಡದಲ್ಲಿ ಬಂದಿರುವ ಕೃತಿಯೇ ಸೋನಾರ್ ಬಾಂಗ್ಲಾ.

ಈ ದುರಂತ ಚಿತ್ರಣವನ್ನು ನನ್ನ ನೆಚ್ಚಿನ ಹಿರಿಯ ಲೇಖಕರಾದ ಶ್ರೀ ಎಸ್.ವಿ. ಶ್ರೀನಿವಾಸರಾಯರು ತುಂಬಾ ಹೃದಯಂಗಮವಾಗಿ, ಮನಮಿಡಿಯುವಂತೆ ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. 70ರ ದಶಕದ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಜನಪ್ರಿಯ ಕಾದಂಬರಿಗಳನ್ನು ಬರೆದ ಇಬ್ಬರು ನನ್ನ ಅಭಿಮಾನಿ ಲೇಖಕರಲ್ಲಿ ಶ್ರೀ ಶ್ರೀನಿವಾಸರಾವ್‌ರವರು ಒಬ್ಬರು. ಟಿ. ಕೆ. ರಾಮರಾವ್ ಮತ್ತೊಬ್ಬರು. ಜನಪ್ರಿಯ ವಾರಪತ್ರಿಕೆಯಲ್ಲಿ ಬರುತ್ತಿದ್ದ ಅವರ ಹಲವು ಧಾರಾವಾಹಿ ಕಾದಂಬರಿಗಳು ನನ್ನಂತಹ ಯುವ ಓದುಗರಿಗೆ ಮೋಡಿಯೇ ಮಾಡುತ್ತಿತ್ತು.

ಶ್ರೀ ಶ್ರೀನಿವಾಸರಾಯರು ಈ ಕಾದಂಬರಿಯ ಮೂಲಕ ಬಂಗ್ಲಾ ಯುದ್ಧದ ಹಿನ್ನೆಲೆಯಲ್ಲಿ ನಡೆದ ದುರಂತವನ್ನು ಹೃದಯಂಗಮವಾಗಿ ಚಿತ್ರಿಸಿ, ಶಾಂತಿಪ್ರಿಯರ ಮನಸ್ಸನ್ನು ಕಲಕುವಂತೆ ಮಾಡಿದ್ದಾರೆ. ನಾಯಕ ಹವಿಾದನ ಉಜ್ವಲ ರಾಷ್ಟ್ರಪ್ರೇಮ ಮತ್ತು ಚಾಂದಳ ಭವ್ಯ ವ್ಯಕ್ತಿತ್ವ, ಕಾದಂಬರಿಯ ಓದುಗಾರಿಕೆಯನ್ನು ಸಾರ್ಥಕ ಗೊಳಿಸುತ್ತದೆ.ಕಾದಂಬರಿಯನ್ನು ಓದಿಮುಗಿಸಿದ ಯಾರಿಗೇ ಆಗಲೀ ಶಾಂತಿಮಂತ್ರದ ರಸಾನುಭವ ಮನಸ್ಸಿನಾಳದಲ್ಲಿ ಇಳಿಯದೇ ಇರದು !

ಇಂತಹ ಹಿರಿಯ ಲೇಖಕರ ಚರಿತ್ರೆಯನ್ನಾಧರಿಸಿದ ಕೃತಿಗಳು ಇಂದಿನ ಪೀಳಿಗೆಯ ಲೇಖಕರಿಗೆ ಮಾರ್ಗದರ್ಶನವಾಗಿ, ಕನ್ನಡದಲ್ಲಿ ಮತ್ತಷ್ಟು ಚಾರಿತ್ರಿಕ ವಸ್ತುವಿನ ಹಿನ್ನೆಲೆಯ ಕಾದಂಬರಿಗಳು ಮೂಡಿಬರಲೆಂದು ಆಶಿಸುತ್ತೇನೆ.

ಶ್ರೀ ಎಸ್.ವಿ. ಶ್ರೀನಿವಾಸರಾಯರ ಈ ಕೃತಿ ಕನ್ನಡದ ಚಾರಿತ್ರಿಕ ಕಾದಂಬರಿಗಳಲ್ಲೇ ವಿಶಿಷ್ಟವಾದ ಮತ್ತು ಉತ್ತಮವಾದ ಪ್ರಯತ್ನ. ಅವರ ಎಲ್ಲಾ ಕಾದಂಬರಿಗಳೂ ಮರು ಮುದ್ರಣಗೊಂಡು ಇಂದಿನ ಓದುಗರಿಗೆ ಲಭ್ಯವಾಗಲೆಂದು ನನ್ನ ಆಸೆ.



# ಕಾಕಾಸಾಹೇಬ್ ಕಾಲೇಲ್‌ಕರ್

—ಎಸ್. ಮಂಚಯ್ಯ

"ಎಲ್ಲ ಅನುವಾದವೂ ಅಕ್ಷರಶಃ ಭಾಷಾಂತರ ಪ್ರಯತ್ನ ಮತ್ತು ಅನುವಾದ ಕಾರನ ನುಡಿಗಟ್ಟುಗಳ ಪ್ರಯೋಗದ ನಡುವಿನ ಒಪ್ಪಂದ"

ಕಾಕಾ ಕಾಲೇಲ್ಕರ್‌ರ ಜೀವನ ಚರಿತ್ರೆಯನ್ನು ಕೇಂದ್ರ ಸಾಹಿತ್ಯ ಅಕಾಡೆಮಿ 1985ರಲ್ಲಿ ಹಿಂದಿ ಭಾಷೆಯಲ್ಲಿ ಪ್ರಕಟಿಸಿತು. ಇದನ್ನು ರಚಿಸಿದವರು ವಿಷ್ಣುಪ್ರಭಾಕರ್. ಈ ಪುಸ್ತಕವನ್ನು ಶ್ರೀ ಎಸ್. ವಿ. ಶ್ರೀನಿವಾಸರಾಯರು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಮಹಾತ್ಮ ಗಾಂಧೀಜಿಯವರ ಸಮೀಪವರ್ತಿ ಅನುಯಾಯಿ ಗಳಲ್ಲಿ ಒಬ್ಬರಾಗಿದ್ದು ರಚನಾತ್ಮಕ ಕಾರ್ಯದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿ ಕೊಂಡಿದ್ದ ನಾಯಕ ಕಾಕಾ ಸಾಹೇಬ್. ದೇಶಕ್ಕಾಗಿ ತ್ಯಾಗ ಮಾಡಿದ, ಕಷ್ಟನಷ್ಟ ಗಳನ್ನು ಅನುಭವಿಸಿದ, ಗಾಂಧೀಜಿಯವರ ತತ್ತ್ವಗಳನ್ನು ಪಾಲಿಸಿಕೊಂಡು ಜೀವಿಸಿದ ಇಂತಹ ಮಹಾ ವ್ಯಕ್ತಿಗಳ ಜೀವನ ಚರಿತ್ರೆ ಎಲ್ಲ ಭಾರತೀಯ ಭಾಷೆಗಳಲ್ಲೂ ಪ್ರಕಟವಾಗಿ ಓದುಗರ ಕೈಸೇರಬೇಕು. ಇಂತಹವರ ಜೀವನ ಚರಿತ್ರೆ ಓದುವುದರಿಂದ ಜನರರಿಗೆ ಆದರಲ್ಲೂ ಕಿರಿಯ ಪೀಳಿಗೆಯವರಿಗೆ ಅವರು ಜೀವನದಲ್ಲಿ ಎತ್ತಿಹಿಡಿದ ಮೌಲ್ಯಗಳು, ಅವರ ಉದಾತ್ತಧ್ಯೇಯಗಳು ಮತ್ತು ಅವರು ನಡೆಸಿದ ಜೀವನ ಪ್ರಭಾವ ಬೀರಿ ಅವರು ನಡೆದ ದಾರಿಯತ್ತ ದೃಷ್ಟಿಹರಿಸುವ ಮನಸ್ಸುಂಟಾಗುವುದು, ಅವರ ಪ್ರಭಾವಕ್ಕೆ ಒಳಗಾಗಿ ಅವರು ತಮ್ಮ ವ್ಯಕ್ತಿತ್ವವನ್ನು ಸರಿಮಾರ್ಗದಲ್ಲಿ ನಿಯಂತ್ರಿಸಿಕೊಂಡು ಉತ್ತಮ ಮನುಷ್ಯರಾಗಿ ಬೆಳೆಯಲು ಸಾಧ್ಯವಾಗಬಹುದು ಎಂಬುದು ನಮ್ಮ ನಂಬಿಕೆ. ಆ ದೃಷ್ಟಿಯಿಂದ ಈ ಪುಸ್ತಕ ಕನ್ನಡ ಪುಸ್ತಕ ಸಂಗ್ರಹಕ್ಕೆ ಒಂದು ಹೊಸ ಸೇರ್ಪಡೆ ಮತ್ತು ಓದಬಹುದಾದ ಪುಸ್ತಕ.

ಎಲ್ಲ ಭಾಷೆಗಳಲ್ಲೂ ಎಲ್ಲ ವಿಷಯಗಳನ್ನೂ ಕುರಿತಂತೆ ರಚಿಸಿದ ಪುಸ್ತಕಗಳು ಇರುವುದಿಲ್ಲ. ವಿಶ್ವದ ಬೇರೆ ಬೇರೆ ಭಾಷೆಗಳಲ್ಲಿ ಪ್ರಕಟವಾದ ಮತ್ತು ಬೇರೆ ಬೇರೆ ಭಾಷೆಗಳಲ್ಲಿ ಪ್ರಕಟವಾಗುವ ಉತ್ತಮ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸು ವುದರಿಂದ ಕನ್ನಡ ಸಾಹಿತ್ಯ ಎಲ್ಲ ಪ್ರಕಾರಗಳೂ ಸಮೃದ್ಧವಾಗುವುವು. ಓದುಗರಿಗೆ

ಅವರವರ ಅಭಿರುಚಿಗೆ ತಕ್ಕಂತಹ ಸಾಹಿತ್ಯವನ್ನು ಆಯ್ಕೆ ಮಾಡಿಕೊಂಡು ಓದಲು ಅವಕಾಶವಾಗುವುದು.

ಭಾಷಾಂತರ ಕಾರ್ಯ ಹಿಂದಿನಿಂದಲೂ ನಡೆದು ಬಂದಿದೆ. ವೇದೋಪನಿಷತ್ತುಗಳು, ಕಾವ್ಯಗಳು ಸಂಸ್ಕೃತದಿಂದ ಇತರ ಭಾರತೀಯ ಭಾಷೆಗೆ ಭಾಷಾಂತರ ಆಗಿವೆ. ಇಂದು ಪುಸ್ತಕಗಳು ಅಧಿಕ ಸಂಖ್ಯೆಯಲ್ಲಿ ಪ್ರಕಟವಾಗುತ್ತಿರುವುದರಿಂದ ಅನುವಾದಿತ ಪುಸ್ತಕಗಳೂ ಅಧಿಕಸಂಖ್ಯೆಯಲ್ಲಿ ಪ್ರಕಟವಾಗುತ್ತಿವೆ.

ಭಾಷಾಂತರ ಒಂದು ಕಲೆ. ಭಾಷಾಂತರಕ್ಕೂ, ಅನುವಾದಕ್ಕೂ ಅಂತರ ಇದೆ. ಭಾಷಾಂತರ ಎಂದರೆ ಮೂಲದ ವಾಕ್ಯಗಳನ್ನು ಮತ್ತು ವಾಕ್ಯಾರ್ಥವನ್ನು ಹಾಗೆಯೇ ಉಳಿಸಿಕೊಂಡು ಭಾಷಾಂತರಕಾರನ ಭಾಷೆಗೆ ಬೇರೆ ಭಾಷೆಯಲ್ಲಿರುವ ಕೃತಿಯನ್ನು ಅನುವಾದಿಸುವುದು.

ಅನುವಾದ ಅಂದರೆ ಮೂಲ ಭಾಷೆಯಲ್ಲಿ ಅಭಿವ್ಯಕ್ತಗೊಂಡಿರುವ ಅಭಿಪ್ರಾಯಗಳನ್ನು, ಭಾವನೆಗಳನ್ನು, ಭಾವಾವೇಶಗಳನ್ನು ಅದೇ ಮಟ್ಟದಲ್ಲಿ ಉಳಿಸಿಕೊಂಡು ಅನುವಾದಕಾರ ತನ್ನ ಭಾಷೆಯ ನುಡಿಗಟ್ಟುಗಳನ್ನು ಬಳಸಿಕೊಂಡು ಅಭಿವ್ಯಕ್ತಪಡಿಸುವುದು. ಗಂಭೀರ ವಿಷಯಗಳನ್ನು ಕುರಿತು ರಚಿಸಿದ ಲಘು ವಿಷಯಗಳ ಪುಸ್ತಕಗಳನ್ನು ಅನುವಾದ ಮಾಡುವುದು ಸಾಧಾರಣವಾಗಿ ಸುಲಭ. ಅಲ್ಲದೆ ಅವು ಲಘು ವಿಷಯಗಳಾಗಿರುವುದರಿಂದ ಅವುಗಳನ್ನು ಭಾಷಾಂತರ ಮಾಡುವುವರಲ್ಲಿ ಭಾಷಾಂತರಕಾರ ಎಡವಿದ್ದರೂ ಓದುಗರು ಅದನ್ನು ಗಮನಿಸುವುದಿಲ್ಲ.

ಗಂಭೀರ ವಿಷಯಗಳನ್ನು ಕುರಿತು ರಚಿಸಿದ ಪುಸ್ತಕಗಳು, ವಿಜ್ಞಾನ ಮತ್ತು ತಾಂತ್ರಿಕ ಜ್ಞಾನ ಕುರಿತು ರಚಿಸಿದ ಗ್ರಂಥಗಳು ಮತ್ತು ಸಾಹಿತ್ಯಕ ಗ್ರಂಥಗಳನ್ನು ಅನುವಾದಿಸುವವರು ಬಹಳ ಎಚ್ಚರಿಕೆಯಿಂದ ಆ ಕೆಲಸ ಮಾಡಬೇಕು. ಏಕೆಂದರೆ ಅವುಗಳನ್ನು ಓದುವವರು ಆ ಗ್ರಂಥಗಳಲ್ಲಿರುವ ವಿಷಯಗಳಿಗೆ ಸಂಬಂಧಿಸಿದಂತೆ ಸಾಕಷ್ಟು ಜ್ಞಾನ ಹೊಂದಿರುತ್ತಾರೆ. ಅವುಗಳನ್ನು ಅವರು ಅನ್ವೇಷಣೆಯ ದೃಷ್ಟಿಯಿಂದ ಓದುವರು. ಆದುದರಿಂದ ಅವರಿಗೆ ಅನುವಾದಿಸುವುದರಲ್ಲಿ ಸಂಭವಿಸಬಹುದಾದ ಭಾಷಾದೋಷಗಳು ಚೆನ್ನಾಗಿ ಕಾಣುವುವು.

ಅನುವಾದಕನಿಗೆ ಮೂಲದ ಭಾಷೆ ಮತ್ತು ತನ್ನ ಭಾಷೆ ಎರಡರಲ್ಲೂ ಪ್ರಭುತ್ವ ಇರಬೇಕು. ಹಾಗಿದ್ದರೇನೆ ಅನುವಾದಕಾರ ಮೂಲದ ಭಾವನೆಗಳನ್ನು ಅರ್ಥ ಮಾಡಿಕೊಂಡು ಯಾವುದೇ ರೀತಿಯಿಂದಲೂ ಅವುಗಳ ಅರ್ಥಕ್ಕೆ ಊನಬಾರದಂತೆ, ಭಾವಾವೇಶಗಳು ಅವುಗಳ ಪರಿಣಾಮವನ್ನು ಕಳೆದುಕೊಳ್ಳದಂತೆ ಎಚ್ಚರ ವಹಿಸಿ

ಅವುಗಳನ್ನು ತನ್ನ ಭಾಷೆಯ ನುಡಿಗಟ್ಟುಗಳಿಂದ ಹಿಡಿದಿಡಲು ಸಾಧ್ಯ. ಅದು ಸಾಧ್ಯ ವಾಗದಿದ್ದರೆ ಅದು ಭಾಷಾಂತರವಾಗುವುದೇ ವಿನಹ ಅನುವಾದವಾಗುವುದಿಲ್ಲ. ಅನುವಾದಿಸುವಾಗ ನಾವು ಗಮನಿಸಬೇಕಾದ ಅಂಶಗಳು :

1) ಗ್ರಂಥಕರ್ತ ಏನು ಹೇಳುತ್ತಾನೆ ?
2) ಅವನ ಮಾತಿನ ಅರ್ಥ ಏನು ?
3) ಅವನು ಹೇಗೆ ಹೇಳುತ್ತಾನೆ ?

ಅನುವಾದದ ಗುಣಮಟ್ಟ ನಿರ್ಧರಿಸಲು ಮುಂದೆ ಸೂಚಿಸಿರುವ ಅಂಶಗಳನ್ನು ಮಾನದಂಡವಾಗಿಟ್ಟುಕೊಳ್ಳಬೇಕು.

1) ಅನುವಾದ ಮೂಲದ ಭಾವನೆಗಳ ಪಡಿಯಚ್ಚಾಗಿರಬೇಕು.
2) ಶೈಲಿ ಮತ್ತು ರೀತಿ ಮೂಲದಂತೆಯೇ ಇರಬೇಕು.
3) ಅನುವಾದ ಸ್ವತಂತ್ರವಾಗಿ ರಚಿಸಿದ ಗ್ರಂಥದಂತಿರಬೇಕು.

ಮೇಲೆ ಸೂಚಿಸಿರುವ ಎಲ್ಲ ಅಂಶಗಳನ್ನೂ ಗಮನದಲ್ಲಿಟ್ಟುಕೊಂಡು ಅನುವಾದಕ ತನ್ನ ಕೆಲಸ ಮಾಡಬೇಕು. ಇದು ಶ್ರಮದ ಕೆಲಸವೇ. ಈ ಮಾನದಂಡವನ್ನು ಇಟ್ಟುಕೊಂಡು ಶ್ರೀ ಶ್ರೀನಿವಾಸರಾಯರು ಭಾಷಾಂತರಿಸಿರುವ (ಇಲ್ಲಿ ಉದ್ದೇಶ ಪೂರ್ವಕವಾಗಿ ಅನುವಾದ ಪದದ ಬದಲಿಗೆ ಭಾಷಾಂತರ ಪದ ಬಳಸಿದ್ದೇನೆ) "ಕಾಕಾಕಾಲೇಲ್‌ಕರ್" ಜೀವನ ಚರಿತ್ರೆ ಪರಿಶೀಲಿಸಿದರೆ ಮೂಲದ ಭಾವನೆಗಳು ಮತ್ತು ಭಾವಾವೇಶಗಳನ್ನು ಯಥಾಸ್ಥಿತಿಯಲ್ಲಿ ಕಾಯ್ದುಕೊಳ್ಳಲು ವಿಶೇಷ ಶ್ರಮ ಪಟ್ಟಿದ್ದರೂ ಆ ಗುರಿ ಮುಟ್ಟಲು ಪೂರ್ಣವಾಗಿ ಸಫಲರಾಗಿಲ್ಲ. ಪ್ರಾರಂಭದಲ್ಲಿನ ಕಂಡಿಕೆಯನ್ನು ಒಬ್ಬ ಲೇಖಕ ಸ್ವತಂತ್ರವಾಗಿ ಬರೆದಿದ್ದರೆ ಹೇಗಿರುತ್ತಿತ್ತು ಎಂಬುದನ್ನು ಪರಿಶೀಲಿಸಿದರೆ ಅನುವಾದ ಎಷ್ಟು ಕಷ್ಟ ಎಂಬುದರ ಅರಿವಾಗುವುದು.

"ಕಾಕಾಸಾಹೇಬರು ತಮ್ಮ ಸಂಕ್ಷಿಪ್ತ ಆತ್ಮಕತೆಯಲ್ಲಿ ಬರೆದಿದ್ದಾರೆ" ಎಂದು ಪ್ರಾರಂಭಿಸಿದ್ದಾರೆ. ತಾವೇ ಒಂದು ಜೀವನ ಚಿತ್ರ ಬರೆಯುವಾಗ ಹೀಗೆ ಪ್ರಾರಂಭಿಸು ವುದಿಲ್ಲ. ಆ ಶೈಲಿಯೇ ಬೇರೆಯಾಗುವುದು. "1917 ಏಪ್ರಿಲ್ ತಿಂಗಳ ದಿನಾಂಕ 10 ರಂದು ಚಂಪಾರಣಕ್ಕೆ ಪ್ರಯಾಣಿಸುತ್ತಿರುವಾಗ ಬಡೌದೆ ಸ್ಟೇಷನ್‌ನಲ್ಲಿ ಪೂಜ್ಯ ಬಾಪೂಜಿಯವರನ್ನು ಸಂಧಿಸುವ ಅವಕಾಶ ದೊರಕಿತು. ನನ್ನನ್ನು ಕುರಿತು ಅವರು "ನಾನು ಈಗ ತಾನೆ ಒಂದು ಆಶ್ರಮ ಪ್ರಾರಂಭಿಸಿದ್ದೇನೆ. ನನ್ನ ಎಲ್ಲ ಸಮಯವನ್ನೂ ಆಶ್ರಮಕ್ಕೆ ಮೀಸಲಿಡಬೇಕಾಗುವುದು. ಆದರೆ ಸೇವಾಕಾರ್ಯಕ್ಕಾಗಿ ಹೊರಗಿನಿಂದ ಆಮಂತ್ರಣಗಳು ಬರುತ್ತಲೇ ಇರುತ್ತವೆ. ಅವುಗಳನ್ನು ನಿರಾಕರಿಸುವುದು ಹೇಗೆ ?

ಅಂತಹ ಒಂದು ಆಹ್ವಾನದಿಂದಾಗಿಯೇ ನಾನು ಚಂಪಾರಣಕ್ಕೆ ಹೋಗುತ್ತಿದ್ದೇನೆ. ನೀವು ಅನುಭವಿಗಳು. ಶಾಂತಿನಿಕೇತನದಲ್ಲಿ ಆಶ್ರಮವಾಸಿಗಳೊಡನೆ ಒಂದೇ ಮನೆಯವರಂತೆ ಬೆರೆತುಹೋಗಿದ್ದೀರಿ. ನಾವು ಪ್ರಾರಂಭಿಸಿರುವ ಆಶ್ರಮಕ್ಕೆ ಹೋಗಿ ಜವಾಬ್ದಾರಿ ಹೊತ್ತುಕೊಂಡರೆ ನಾನು ನಿಶ್ಚಿಂತೆಯಿಂದ ಇರುವೆ" ಎಂದು ಹೇಳಿದರು. ನಾನು ಅವರ ಮಾತಿಗೆ ಒಪ್ಪಿ ಆಶ್ರಮಕ್ಕೆ ಹೋಗಿ ಅಲ್ಲಿನ ಎಲ್ಲ ಚಟುವಟಿಕೆಗಳಲ್ಲೂ ಆಸಕ್ತಿ ವಹಿಸಲು ಪ್ರಾರಂಭಿಸಿದೆ" ಎಂದು ಕಾಕಾಸಾಹೇಬ್ ತಮ್ಮ ಸಂಕ್ಷಿಪ್ತ ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾರೆ ಎಂದು ಅನುವಾದಿಸಿದ್ದರೆ ಚೆನ್ನಾಗಿತ್ತು.

ಮೇಲಿನದು ಒಂದು ಉದಾಹರಣೆ ಅಷ್ಟೆ. ಇಂತಹ ಸಣ್ಣಪುಟ್ಟ ಲೋಪಗಳು ಅಲ್ಲಲ್ಲಿ ಕಾಣುತ್ತವೆ. ಇದಕ್ಕೆ ಕಾರಣ ಶ್ರೀನಿವಾಸರಾಯರಲ್ಲ. ಅವರು ಉತ್ತಮ ಬರಹಗಾರರು. ಆದರೆ ಅವರು ಮೂಲ ಕೃತಿಗೆ ವಿಶೇಷ ವಿಧೇಯತೆಯನ್ನು ತೋರಿದುದರಿಂದ ಉಂಟಾಗಿರುವ ಲೋಪಗಳು ಇವು. ಅನುವಾದದ ಮಾರ್ಗ ಹಿಡಿದು ತಮ್ಮ ಶೈಲಿಯಲ್ಲಿಯೇ ಈ ಕಾರ್ಯ ಮಾಡಿ ಕನ್ನಡದ ನುಡಿಗಟ್ಟುಗಳನ್ನೇ ಉಪಯೋಗಿಸಿಕೊಂಡಿದ್ದರೆ ಈ ಅನುವಾದ ಇನ್ನೂ ಉತ್ತಮವಾಗಿರುತ್ತಿತ್ತು ಎಂದು ಹೇಳದೆ ವಿಧಿಯಿಲ್ಲ. ಆದರೂ ಈ ಅನುವಾದ ಚೆನ್ನಾಗಿದೆ. ಅವರ ಶ್ರಮ ಸಾರ್ಥಕವಾಗಿದೆ. ಇದೊಂದು ಕಣ್ಣಿಗೆ ಹಾಯಿಸಬಹುದಾದ ಪುಸ್ತಕ.



# ಮಂಥನ

—ಎನ್. ಪಂಕಜ

ಶೀರ್ಷಿಕೆಯೇ ಹೇಳುವಂತೆ ತೀವ್ರತರ ಮಾನಸಿಕ ಮಂಥನವನ್ನು ಒಳಗೊಂಡಿರುವ ಅಪೂರ್ವ ಕಥಾವಸ್ತು. ನವಿರಾದ ಬೆಳವಣಿಗೆ, ಕುತೂಹಲಕಾರಿಯಾದ ನಿರೂಪಣೆ.

ಕಥಾನಾಯಕನಾದ ನಾಗರಾಜ ಮೇಲುನೋಟಕ್ಕೆ ನಾರ್ಮಲ್ ಮನುಷ್ಯನೇ, ಮೇಲ್ಮಟ್ಟದ ವರನೇ. ಅಂತೆಯೇ, ಜಯಂತಿ ಅವನನ್ನು ಮೆಚ್ಚಿ ಮದುವೆಯಾದುದರಲ್ಲಿ ಆಶ್ಚರ್ಯವೇನಿಲ್ಲ.

ಅವಳೂ ಯಾವುದರಲ್ಲೂ ಕಮ್ಮಿಯಿರಲಿಲ್ಲ. ಆದ್ದರಿಂದಲೇ ಅವನ ತಂದೆ ಅವಳನ್ನು ಆರಿಸಿದ್ದರು, ತಮ್ಮ ಏಕೈಕ ಮುದ್ದುಮಗನಿಗೆ.

ಜೋಡಿ ಅನುರೂಪವಾಗಿತ್ತು ; ದೃಷ್ಟಿಯಾಗುವಂತೆಯೇ ಇತ್ತು-ಎಲ್ಲರ ಕಣ್ಣಿಗೂ. ಎಲ್ಲ ದಂಪತಿಗಳಂತೆ ಈ ದಂಪತಿಗಳೂ ಸುಖ ಕನಸುಗಳನ್ನೇ ಕಾಣುತ್ತಿದ್ದರು. ಆದರೆ...........

ಎಲ್ಲಾ ಕಾದಂಬರಿಗಳಲ್ಲಿ ಬರುವಂತೆ ಮೂರನೆಯವರ ಕಿತಾಪತಿಯಾಗಲೀ, ಹಿರಿಯರ ಕಿರುಕುಳವಾಗಲಿ, ಏನೊಂದೂ ಇಲ್ಲ, ಈ ಕೃತಿಯಲ್ಲಿ. ಅಭಿಪ್ರಾಯ ಭೇದಗಳ ಘರ್ಷಣೆಯೂ ಎತ್ತಿ ಕಾಣುವಷ್ಟು ವ್ಯಾಪಿಸಿಲ್ಲ. ಆದರೂ, ಆ ಒಂದು ಬಿರುಕು ಹೇಗೆ ಹುಟ್ಟಿತು, ಹೇಗೆ ತಾನೇ ಅಗಾಧವಾಗುತ್ತಾ ಹೋಯಿತು, ಕೊನೆಗೆ ಹೇಗೆ ಅವರ ವೈವಾಹಿಕ ಜೀವನವನ್ನೇ ಚೂರು ಚೂರು ಮಾಡಿ ಹಾಕಿತು ?

ನಾಗರಾಜ ಒಬ್ಬ ಮೇಧಾವಿ–ಪುಸ್ತಕದ ಹುಳ. ಜೊತೆಗೆ ಬರಹಗಾರ ಬೇರೆ. ಡೆಡಿಕೇಟೆಡ್ ಬರಹಗಾರರ ಸಾಲಿಗೆ ಸೇರಿದವ. ಬರಹಗಾರನ ಒತ್ತಡವನ್ನು ಅರಿಯುವ ತಾಳ್ಮೆ ಪತ್ನಿಗೆ ಇರಲಿಲ್ಲ. ಗಂಡ ಅರಸಿಕ ಎಂಬ ಭಾವನೆ ಬೇರೆ, ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದ ಅವಳಿಗೆ ಶೃಂಗಾರಬಾಳಿನತ್ತ ಒಲವು. ಸಂಪ್ರದಾಯಸ್ಥ ಮನೆತನದಲ್ಲಿ ಬೆಳೆದ ಅವನು ಸ್ವಲ್ಪ ವಿಷಯಗಳಲ್ಲಿ ಕಟ್ಟುನಿಟ್ಟು—ಬೇರೆಯ ರೀತಿಯಲ್ಲಿ ಬೆಳೆದ ಅವಳು ತದ್ವಿರುದ್ಧ.

ತಾಳ್ಮೆ ಪ್ರೀತಿಯಿಂದ ಕಾಲಕ್ರಮೇಣ ಸಂಸಾರ ಸರಿಹೋಗುವ ಅವಕಾಶವಿತ್ತು. ಆದರೆ............

ಆ ದಾಂಪತ್ಯದ ಬಿರುಕಿನ ಹಾಗೂ ಕಥೆಯ ಹಿನ್ನೆಲೆ ಇರುವುದು ಕಥಾನಾಯಕನ ಬಾಲ್ಯದ ಒಂದು ದಾರುಣ ಅನುಭವದಲ್ಲಿ-ಹೃದಯ ಸ್ಪರ್ಶಿ ಘಟನೆಯಲ್ಲಿ. ಆ ಬಳಿಕ, ಕಥಾನಾಯಕಿಯ, ಹಾಗೂ ಗೆಳತಿ ಜಾಸ್ಮಿನ್‌ಳ ಸ್ನೇಹ ಸಂಬಂಧದ ಒಂದು ಎಳೆಯಲ್ಲಿ. ವಿಕೃತ ರೀತಿಯಲ್ಲಿ ತಿರುಗಿದ ಅವರ ಸ್ನೇಹ ಅವಳನ್ನೇ ಬಲಿ ತೆಗೆದು ಕೊಳ್ಳುವುದು-ಸ್ವಲ್ಪ ಸ್ವಲ್ಪವಾಗಿ.

ದಂಪತಿಗಳ ವಿರಸದಲ್ಲಿ ಕೊನೆಗೆ ದುರಂತದಲ್ಲಿ ಕೊನೆಗೊಳ್ಳುವುದು ಅವಳ ಬಾಳೇ ; ಹೆಣ್ಣಾಗಿದ್ದರಿಂದಲೇ ? ಗಂಡಸಾಗಿದ್ದರಿಂದಲೋ ಏನೋ ನಾಗರಾಜ ಚೇತರಿಸಿಕೊಳ್ಳುವನು.

ಗಂಡನನ್ನು ಅರ್ಥಮಾಡಿಕೊಳ್ಳಲಾಗದೆ, ಹೇಳಿಕೆಯ ಮಾತುಗಳಿಗೆ ಕಿವಿಯೊಡ್ಡಿ, ಸ್ನೇಹಿತೆಯ ಆಶ್ರಯವನ್ನು ಪಡೆದ ಅಮಾಯಕ ಜಯಂತಿಯ ಅತೃಪ್ತ ಜೀವನ ಹೀಗೊಂದು ರೀತಿಯ ಮನೋವಿಕಾರಕ್ಕೆ ಎಳೆಯಲ್ಪಟ್ಟದ್ದಕ್ಕೆ ವಿಧಿ ಎನ್ನೋಣವೇ, ದುರ್ಬಲ ವ್ಯಕ್ತಿತ್ವ ಎನ್ನೋಣವೇ ಅಥವಾ ಮುಚ್ಚಟೆಯಾಗಿ ಬೆಳೆಸಲ್ಪಟ್ಟ ಫಲ, ಎನ್ನೋಣವೇ ?

ಒಟ್ಟಿನಲ್ಲಿ ಹೇಳುವುದಾದರೆ ಇದೊಂದು ಮನೋವಿಜ್ಞಾನದ ದಿಶೆಯಲ್ಲಿ ಹೆಣೆಯಲ್ಪಟ್ಟ ಕಾದಂಬರಿ. ಆ ಕ್ಲಿಷ್ಟಕರ ಕಾರ್ಯವನ್ನು ಯಶಸ್ವಿಯಾಗಿ ಮೂಡಿಸಿರುವ ಲೇಖಕರಿಗೆ ಅಭಿನಂದನೆಗಳು. ಈಗಾಗಲೇ ಸಾಹಿತ್ಯಕ್ಷೇತ್ರದಲ್ಲಿ ಬಹಳಷ್ಟು ಕೃಷಿ ಮಾಡಿರುವ, ಮತ್ತು ಅದರ ನಾನಾಪ್ರಕಾರಗಳಲ್ಲಿ ಗಣ್ಯಸೇವೆಯನ್ನು ಸಲ್ಲಿಸಿರುವ ಮಾನ್ಯ ಎಸ್. ವಿ. ಶ್ರೀನಿವಾಸರಾವ್ ಅವರ ನುರಿತ ಲೇಖನಿಯಿಂದ ಇಂತಹುದೇ ಕೃತಿಗಳು ಇನ್ನಷ್ಟು ಬರಲಿ—ಕನ್ನಡಿಗರ ಮನಸ್ಸನ್ನು ಮತ್ತೂ ಅರಳಿಸಲಿ, ಎಂದು ಹಾರೈಸುವೆ-ಅವರ ಬಾಳಿನ ಈ ಒಂದು ಮುಖ್ಯ ಘಟ್ಟದಲ್ಲಿ.



# ಕಾದಂಬರಿಕಾರ : ಶ್ರೀ ಎಸ್.ವಿ.ಎಸ್.

—ಕೆ. ವಿ. ಚಂದ್ರಣ್ಣಗೌಡ

ಹಲವಾರು ಸಂಘ–ಸಂಸ್ಥೆಗಳೊಡನೆ ನಿಕಟ ಸಂಬಂಧ ಏರ್ಪಡಿಸಿಕೊಂಡು, ನಾಡು–ನುಡಿಯ ಬಗ್ಗೆ ಸದಾ ಚಿಂತಿಸುವವರ ಸಾಲಿಗೆ ಕಾದಂಬರಿಕಾರ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ಸೇರುತ್ತಾರೆ. ಭಾರತ ಸರ್ಕಾರದ ರಕ್ಷಣಾ ಇಲಾಖೆಯ ಕಂಟ್ರೋಲರೇಟ್ ಆಫ್ ಕ್ವಾಲಿಟಿ ಅಷ್ಯೋರೆನ್ಸ್ ಎಲೆಕ್ಟ್ರಾನಿಕ್ಸ್ ಸೈಂಟಿಫಿಕ್ ಆಫೀಸರ್‌ರಾಗಿ ಕರ್ತವ್ಯ ನಿರ್ವಹಿಸಿ ನಿವೃತ್ತಿ ಹೊಂದಿರುವ ಇವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇಯಾದ ಕೊಡುಗೆ ನೀಡಿದ್ದಾರೆ. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಹಲವಾರು ಮಂದಿ ಸದ್ದುಗದ್ದಲವಿಲ್ಲದೆ ತಮ್ಮದೇಯಾದ ಸೇವೆ ಸಲ್ಲಿಸಿದ್ದಾರೆ. ಅಂತಹವರಲ್ಲಿ ಶ್ರೀಯುತರು ಒಬ್ಬರು. ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕೋಶಾಧ್ಯಕ್ಷರಾಗಿ ಸೇವೆ ಸಲ್ಲಿಸಿರುವ ಇವರು ಸದಾ ಏನಾದರೊಂದು ಸಾಹಿತ್ಯ ಕಾರ್ಯಕ್ರಮದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುತ್ತಾರೆ.

ನಾಡಿನ ಹಲವಾರು ದಿನ ಪತ್ರಿಕೆ, ವಾರಪತ್ರಿಕೆ ಮತ್ತು ಮಾಸ ಪತ್ರಿಕೆಗಳಲ್ಲಿ ಶ್ರೀಯುತರ ಕಾದಂಬರಿಗಳು ಧಾರವಾಹಿಯಾಗಿ ಪ್ರಕಟಗೊಂಡು ಅನಂತರ ಪುಸ್ತಕ ರೂಪದಲ್ಲಿ ಹೊರ ಬಂದಿವೆ. ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ತಮ್ಮದೇಯಾದ ಹೆಜ್ಜೆ ಮೂಡಿಸಿರುವ ಎಸ್.ವಿ.ಎಸ್. ಅವರು ಓದುಗರ ಮನ-ಮನೆಯಲ್ಲಿ ಚಿರಾಯು ವಾಗಿದ್ದಾರೆ. ಸುಮಾರು ಹದಿನಾರರಿಂದ ಇಪ್ಪತ್ತು ಕಾದಂಬರಿಗಳನ್ನು ರಚಿಸಿರುವ ಶ್ರೀಯುತರಿಗೆ ನಾಡಿನ ಅನೇಕ ಸಂಘ-ಸಂಸ್ಥೆಗಳು ಗೌರವ ಸಲ್ಲಿಸಿ, ಪ್ರಶಸ್ತಿಗಳನ್ನು ನೀಡಿದೆ. ಕೆಲವು ಕಾದಂಬರಿಗಳು ಕಿರು ತೆರೆ ಹಾಗೂ ಬೆಳ್ಳಿ ತೆರೆಯ ಮೇಲೆ ಬರುವ ಭರದ ಸಿದ್ಧತೆಯಲ್ಲಿವೆ. ತಾವು ಕಂಡುಂಡ ಅನುಭವಗಳನ್ನು ಓದುಗರ ಮನ ಮುಟ್ಟುವಂತೆ ಚಿತ್ರಿಸುವುದರ ಮುಖಾಂತರ, ಓದುಗನಿಗೆ ಒಳ್ಳೆಯ ಅಭಿರುಚಿ ನೀಡುವ ಯಶಸ್ವೀ ಪ್ರಯತ್ನಗಳನ್ನು ನಡೆಸಿದ್ದಾರೆ.

ಸಾಂಕೇತಿಕ ಅರ್ಥವನ್ನೊಳಗೊಂಡ ಕೃತಿ 'ಪರಿಗೋಲು !' ಈ ಕಾದಂಬರಿ ಯಲ್ಲಿ ಒಂದು ಕುಟುಂಬಕ್ಕೆ ಸಂಬಂಧಿಸಿದ ಕಥೆ ಮೂಡಿ ಬಂದಿದೆ. ಸದರಿ ಕುಟುಂಬ ಆನಂದದಿಂದ ಕೂಡಿದ್ದು, ಪ್ರವಾಸಕ್ಕೆ ಹೊರಡುತ್ತದೆ, ದುರದೃಷ್ಟವಶಾತ್ ಈ ಕುಟುಂಬ ದುರಂತಕ್ಕೆ ಸಿಕ್ಕು ದಿಕ್ಕುಪಾಲಾಗುವ ಮನ ಮಿಡಿಯುವ ಚಿತ್ರಣ

ಕಾದಂಬರಿಯಲ್ಲಿದೆ. ಅತ್ಯಾಚಾರಕ್ಕೆ ಒಳಗಾದ ಹೆಣ್ಣು ತನ್ನ ಪತಿಗೆ ಮುಖ ತೋರಿಸಲಾಗದೆ ಆತ್ಮಹತ್ಯೆಗೆ ಮನಸ್ಸು ಮಾಡುವುದು ಸಹಜ. 'ಹರಿಗೋಲು'— ಕಾದಂಬರಿಯಲ್ಲಿ ಕೂಡ ಕಥಾನಾಯಕಿ ಸುಮನ್‌ಗೆ ಎರಡು ಮಕ್ಕಳು. ಈಕೆ ಅನಿರೀಕ್ಷಿತವಾಗಿ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಹಣ ಸಂಪಾದಿಸುವ ಯಂತ್ರ ದಂತಿದ್ದ ಕಥಾನಾಯಕ ಕಿಶನ್‌ಗೆ ಮದುವೆಯಾದ ಹನ್ನೆರಡು ವರ್ಷದ ನಂತರ 'ಮಧುಚಂದ್ರ'ಕ್ಕೆ ಹೋಗುವ ಬಯಕೆ ಉಂಟಾಗುತ್ತದೆ, ತಮ್ಮ ಅಪ್ಪ ಅಮ್ಮನಿಂದ ಒಪ್ಪಿಗೆ ಪಡೆಯುತ್ತಾನೆ. ಹನ್ನೊಂದು ವರ್ಷದ ಮಗಳು ಸಂಗೀತ ಮತ್ತು ಒಂಬತ್ತು ವರ್ಷದ ಮಗ ಯೋಗೀಶ್-ಇವರೊಡನೆ ಪ್ರವಾಸ ಹೊರಡುತ್ತಾರೆ.

"ಸಾಗರ ಮಥನ ಕಾಲದಲ್ಲಿ ಉದ್ಭವಿಸಿದ ಅಮೃತಕ್ಕಾಗಿ ದೇವ ದಾನವರ ಮಧ್ಯೆ ನಡೆದ ಕದನದಲ್ಲಿ ಅಮೃತದ ಹನಿಗಳು ಪ್ರಯಾಗ, ಹರಿದ್ವಾರ, ನಾಸಿಕ, ಉಜ್ಜಯನಿಯಲ್ಲಿ ಬಿದ್ದುವಂತೆ. ಗುರು ಸಿಂಹರಾಶಿಯಲ್ಲಿರುವಾಗ ಉಜ್ಜಯನಿ ಯಲ್ಲಿಯೂ, ಕುಂಭ ರಾಶಿಯಲ್ಲಿರುವಾಗ ಹರಿದ್ವಾರದಲ್ಲೂ 'ಕುಂಭಮೇಳ' ಹನ್ನೆರಡು ವರ್ಷಕ್ಕೊಮ್ಮೆ ನಡೆಯುತ್ತದೆ : ಎಂದಿರುವ ಕಾದಂಬರಿಕಾರರ ಮಾತಿನಂತೆ ನಾಯಕಿ–ನಾಯಕ ಈ ಕುಂಭಮೇಳ ನೋಡುವ ಬಯಕೆಯಿಂದ ಕೂಡಿರುತ್ತಾರೆ. ಈ ಬಯಕೆಗೆ ಮತ್ತಷ್ಟು ಒತ್ತು ಕೊಡುವಂತೆ ದಿಢೀರನೆ ಸಿಕ್ಕಿದ ಸುಮನ್, ಸೋದರತ್ತೆಯ ತಮ್ಮ ಕಿಶೋರನೊಡನೆ ಇವರು ರೈಲ್ವೆ ಸ್ಟೇಷನ್ನಿನಿಂದ ಕಾರಿನಲ್ಲಿ ಹೊರಡುತ್ತಾರೆ. ಜೊತೆಗೆ ಕಿಶೋರನ ಮನೆಯೂ ಕೂಡ ಅದೇ ಊರಿನಲ್ಲಿದ್ದುದರಿಂದ ಅವರ ಮನೆಗೆ ಹೋಗಿ ಕಿಶೋರನ ಸಂಸಾರ ನೋಡುವ ಬಯಕೆಯನ್ನು ಸುಮನ್ ತನ್ನ ಗಂಡನಲ್ಲಿ ವ್ಯಕ್ತಪಡಿಸುತ್ತಾಳೆ. ಕುಂಭಮೇಳದ ಮೆರವಣಿಗೆ ಮಾರ್ಗ ಮಧ್ಯದಲ್ಲಿ ಬಂದು; ಕಾರಿನಿಂದ ಇಳಿದು ಸುರಕ್ಷಿತ ಜಾಗಕ್ಕೆ ಸೇರುವ ಬಯಕೆಯಿಂದ ಇವರುಗಳು ಒಬ್ಬರ ಕೈಯನ್ನು ಒಬ್ಬರು ಹಿಡಿದು ಹೊರಡು ತ್ತಾರೆ. ಮೆರವಣಿಗೆಯ ಮಹಾಪೂರದಲ್ಲಿ ಕೊನೆಗೆ ಇವರುಗಳೆಲ್ಲಾ ಒಂದೊಂದು ಕಡೆ ಕೊಚ್ಚಿ ಹೋಗುತ್ತಾರೆ.

ಗಂಡ, ಹೆಂಡತಿ, ಮಕ್ಕಳುಗಳು ಬೇರೆ ಬೇರೆಯಾಗಿ ಕಾದಂಬರಿ ಹೊಸ ತಿರುವು ಪಡೆದುಕೊಂಡು ಅನಿರೀಕ್ಷಿತ ದುರಂತಕ್ಕೆ ದಿಢೀರನೇ ಎಳೆದೊಯ್ಯುತ್ತದೆ. ದಟ್ಟ ಜನಸಂದಣಿಯಲ್ಲಿ ಸಿಕ್ಕ ಸುಮನ್‌ಳನ್ನು ಯಾರೋ ಧಾಂಡಿಗರು ಎಲ್ಲರೆದುರಿಗೆ ಅನಾಮತ್ತು ಎತ್ತಿಕೊಂಡು ಹೋಗುವರು. ಸಜ್ಜಾದ ಮಲಗುವ ಕೋಣೆಯೊಳಗೆ ಕೆಲವು ಮಂದಿ ಧಡೂತಿ ಗಂಡಸರು ಇವಳ ಮೇಲೆ ಅಟ್ಟಹಾಸದಿಂದ ಒಬ್ಬರಾದ ಮೇಲೆ ಒಬ್ಬರಂತೆ ಮೇಲೆರಗಿ ಅತ್ಯಾಚಾರ ನಡೆಸುತ್ತಾರೆ. ಕೊನೆಗೆ ನದಿಯ ದಂಡೆ ಯೊಂದರ ಮೇಲೆ ಬಿಸಾಡುತ್ತಾರೆ. ಜೀವಂತ ಶವವಾದಿದ್ದ ಸುಮನ್‌ದೆ ಕೊನೆ

ಆಸೆಯೊಂದು ಚಿಗುರೊಡೆಯುತ್ತದೆ. ಅದೇನೆಂದರೆ ತನ್ನ ಮಕ್ಕಳನ್ನು ಹೇಗಾದರೂ ಹುಡುಕಿಸಿ ತನ್ನ ಯಜಮಾನರ ಬಳಿಗೆ ಸೇರಿಸುವುದೆಂದು. ಇದನ್ನು ಬೇಡಲೆಂದು ಪೊಲೀಸ್ ಠಾಣೆಗೆ ಹೋಗುತ್ತಾಳೆ. ಅಲ್ಲಿಯೂ ಕೂಡ ಸುಮನ್‌ಗೆ ಮತ್ತೊಂದು ದುರಂತ ಕಾದಿರುತ್ತದೆ. ಮೊದಲೇ ಅತ್ಯಾಚಾರಕ್ಕೆ ಒಳಗಾದ ಹೆಣ್ಣು ಮತ್ತೊಮ್ಮೆ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಪೊಲೀಸ್ ಠಾಣೆಯಲ್ಲಿ "ಬೇಲಿಯೇ ಎದ್ದು ಮೇದಂತೆ"—ಸುಮನ್ ಮೇಲೆ ಅತ್ಯಾಚಾರ ನಡೆಯುತ್ತದೆ. ಪೊಲೀಸ್ ಠಾಣೆಯಿಂದ ತಪ್ಪಿಸಿಕೊಂಡ ಸುಮನ್ ಡಿಎಸ್‌ಪಿಗೆ ತನ್ನ ದಾರುಣ ಘಟನೆಯನ್ನು ಪತ್ರದಲ್ಲಿ ಬರೆದು, ತನ್ನ ಮಕ್ಕಳನ್ನು ಹುಡುಕಿಸಿ ತನ್ನ ಗಂಡನಿಗೆ ಒಪ್ಪಿಸಲು ಕೇಳಿಕೊಂಡು ಕಾಣೆಯಾಗುತ್ತಾಳೆ.

ಸಿನಿಮಾದಲ್ಲಿ ನಡೆಯುವಂತೆ ಪೊಲೀಸಿನವರು ತಮ್ಮ ಮನಸ್ಸಿಗೆ ಬಂದಂತೆ ಹುಡುಕಾಟದಲ್ಲಿ ತೊಡಗುತ್ತಾರೆ. ಕಿಶನ್ ಕೂಡ ಆಸ್ಪತ್ರೆಯಲ್ಲಿ ಚೇತರಿಸಿಕೊಂಡು, ತನ್ನ ಹೆಂಡತಿ ಮಕ್ಕಳನ್ನು ಹುಡುಕಿಸಿ ಕೊಡಲು ಪೊಲೀಸಿನವರಿಗೆ ದೂರು ನೀಡಿರುತ್ತಾನೆ. ಒಟ್ಟಾರೆ ಕಾದಂಬರಿಯಲ್ಲಿ ಹೆಂಡತಿ ಮಕ್ಕಳ ಹುಡುಕಾಟ ; ಪೊಲೀಸಿನವರ ಸಾಂತ್ವನದ ಮಾತುಗಳಿಂದ ಕಿಶನ್ ಸಮಾಧಾನಪಡಿಸಿ ; ನಾಯಕನಿಗೆ ಕೆಲಸ ಕಡಿಮೆ ಮಾಡಿ, ಆತನ ಮಹತ್ವವನ್ನು ಮೊಟಕುಗೊಳಿಸಿರುವುದು ಕಂಡು ಬರುತ್ತದೆ. ಕುಂಭಮೇಳದಲ್ಲಿ ನಡೆಯುವ ಸಂಪ್ರದಾಯಬದ್ಧ ಆಚರಣೆಗಳನ್ನು ಕಾದಂಬರಿಕಾರರು ಮನ ಮುಟ್ಟುವಂತೆ ಚಿತ್ರಿಸಿರುವುದನ್ನು ನಾವು ಕಾಣಬಹುದು. ಮೆರವಣಿಗೆಯ ಸಂದರ್ಭದಲ್ಲಿ ತಪ್ಪಿಸಿಕೊಂಡ ಮಕ್ಕಳು ದಿಕ್ಕು ಕಾಣದೆ ಚೆಲ್ಲಾಪಿಲ್ಲಿಯಾಗಿ ಸಿಕ್ಕ ಸಿಕ್ಕವರ ಕಡೆಯಿಂದ ಚಿತ್ರಹಿಂಸೆಗೆ ಗುರಿಯಾಗುವುದು ಕಾದಂಬರಿಯ ಉದ್ದಕ್ಕೂ ನಡದೇ ಸಾಗುತ್ತದೆ. ಅನೇಕ ಕಷ್ಟ ಕೋಟಲೆಗಳಿಗೆ ಸಿಕ್ಕಿ ಕೊನೆಗೆ ಏನಾದರೂ ಮಾಡಿ ಬೆಂಗಳೂರಿಗೆ ಸೇರುವ ತವಕದಿಂದ ರೈಲಿನಲ್ಲಿ ಪ್ರಯಾಣ ಮಾಡುವಾಗ ಅಕ್ಕ ತಮ್ಮ ಬೇರೆ ಬೇರೆಯಾಗುತ್ತಾರೆ. ಇಲ್ಲಿ ಕಾದಂಬರಿ ಮತ್ತೊಂದು ಹೊಸ ತಿರುವು ಪಡೆಯುತ್ತದೆ. ಈ ವೇಳೆಗೆ ನಮ್ಮ ಕಾದಂಬರಿ ನಾಯಕಿ ಸುಮನ್ ಆತ್ಮಹತ್ಯೆಗೆ ಪ್ರಯತ್ನಿಸಿ, ಇದರ ಬಗ್ಗೆ ಬುದ್ಧಿ ಮಾತುಗಳಿಗೆ ಸಿಲುಕಿ ಕೊನೆಗೆ ಕರುಣೆಯುಳ್ಳವರ ಕಡೆಯಿಂದ ಒಂದು ಆಸ್ಪತ್ರೆಯಲ್ಲಿ ನರ್ಸ್ ಆಗಿ ಕೆಲಸಕ್ಕೆ ಸೇರಿರುತ್ತಾಳೆ.

ಸಂಗೀತ ಮೋನ್ ಎಂಬುವಳ ಕೈಗೆ ಸಿಲುಕಿ; ಅವಳು ಸಂಗೀತಳನ್ನು ಬೆಂಗಳೂರಿಗೆ ಕಳುಹಿಸುವ ಭರವಸೆ ಮಾತುಗಳಿಂದ ತೃಪ್ತಿ ಹೊಂದುತ್ತಾಳೆ. ಆದರೆ ಅನಿಶ್ಚಯತೆಯ ಕಂದಕದಲ್ಲಿ ಬಿದ್ದು ತೊಳಲಾಡಲಾರಂಭಿಸುತ್ತಾಳೆ. ಇತ್ತ ಕಡೆ ಯೋಗೀಶ್, ತನ್ನ ಅಕ್ಕನಿಂದ ಬೇರೆಯಾದ ನಂತರ ತಿಂಡಿ ಊಟಗಳಿಗೆ ಪಾಡು ಪಟ್ಟು ; ಭಾರಿ ಔತಣಕೂಟದಲ್ಲಿ ತಿಂಡಿ ಊಟ ಮಾಡಲೋಗಿ ಕಳ್ಳಸಾಗಣೆದಾರರ

ವಶವಾಗುತ್ತಾನೆ. ಈ ಕಳ್ಳಕಾಕರು ಯೋಗೀಶನಿಂದ ವಿಳಾಸ ಪಡೆದು ನಿಮ್ಮ ತಂದೆಯ ಕಡೆ ಮುಟ್ಟಿಸುತ್ತೇವೆಂದು ಅವನಿಂದ ತಮ್ಮದೇಯಾದ ಕೆಲಸ ಮಾಡಿಸಿ ಕೊಳ್ಳಲು ಪ್ರಯತ್ನಿಸುತ್ತಾರೆ. ಕೊನೆಗೆ ವಿಮಾನ ನಿಲ್ದಾಣದಲ್ಲಿ ಕಾರು ಅಪಘಾತಕ್ಕೆ ಗುರಿಯಾಗಿ ಸಾಯುತ್ತಾನೆ.

ಮೋಸಾಳ ಕಡೆಯ ಟೈಗರ್ ಭಾರ್ಗವ ಸಂಗೀತಳನ್ನು ಆಕೆಯ ತಂದೆ ಕಿಶನ್ ಲಾಲ್‌ಗೆ ಮುಟ್ಟಿಸುವ ಪ್ರಯತ್ನ ಮಾಡುತ್ತಾನೆ. ಅವರ ಮನೆಗೆ ಸುದ್ದಿ ತಂದು ; ಕಿಶನ್‌ಲಾಲ್ ಇಲ್ಲದಿರುವುದರಿಂದ ನಿರಾಶನಾಗುತ್ತಾನೆ. ಕೊನೆಗೆ ಆಕೆಯ ಅಜ್ಜ ನೊಂದಿಗೆ ವಿಷಯ ತಿಳಿಸಿ, ನೀವು ಹಣ ಕೊಡುವುದಾದರೆ ನಿಮ್ಮ ಮೊಮ್ಮಗಳನ್ನು ನಿಮ್ಮ ವಶಕ್ಕೆ ನೀಡುವೆ ಎಂದು ಯಶಪಾಲ್‌ಗೆ ತಿಳಿಸುತ್ತಾನೆ. ಸಂತೋಷದಿಂದ ಯಶಪಾಲ್ ಅದೆಷ್ಟೇ ಹಣವಾದರೂ ಪರವಾಯಿಲ್ಲ ಎಂದು ಭಾರ್ಗವನೊಡನೆ ಧಾವಿಸಿ ಬರುತ್ತಾನೆ. ಆದರೆ ಸಂಗೀತ ಅಲ್ಲಿಂದಲೂ ತಪ್ಪಿಸಿಕೊಳ್ಳಲು ಹೋಗಿ ರಸ್ತೆ ಅಪಘಾತಕ್ಕೆ ತುತ್ತಾಗಿರುತ್ತಾಳೆ. ಈ ವೇಳೆಗೆ ಸಂಗೀತಳನ್ನು ಸೇಂಟ್ ಜಾನ್ ಆಸ್ಪತ್ರೆಗೆ ಸೇರಿಸಿರುತ್ತಾರೆ ಸಂಗೀತಳ ಅಜ್ಜ ಯಶಪಾಲ್ ಮತ್ತು ಭಾರ್ಗವ ಆಸ್ಪತ್ರೆಗೆ ಧಾವಿಸುತ್ತಾರೆ. ಸಂಗೀತ ತಾತನನ್ನು ಗುರುತಿಸಿ ತಾತ ಎಂದು ಕೂಗು ತ್ತಾಳೆ. ಅಲ್ಲದೆ ತಮ್ಮ ಅಮ್ಮ ಇಲ್ಲಿಯೇ ನರ್ಸ್ ಆಗಿ ಕೆಲಸದಲ್ಲಿರುವುದನ್ನು ತಿಳಿಸುತ್ತಾಳೆ.

ತಾತ ತನ್ನ ಸೊಸೆಯ ಬಗ್ಗೆ ವಿಚಾರ ಮಾಡಿ, ಅವಳು ವಾಸ ಮಾಡುತ್ತಿದ್ದ ಕೊಠಡಿಗೂ ಹೋಗಿ ವಿಚಾರಿಸುತ್ತಾನೆ. ಆಕೆಯ ಜೊತೆಗಿದ್ದ ನರ್ಸ್ ಯಶಪಾಲ್‌ಗೆ ಸುಮನ್‌ಳ ದುರಂತ ಕಥೆಯನ್ನು ಹೇಳುತ್ತಾಳೆ. "ಪಾಪ ಮೊನ್ನೆ ತಾನೆ ಅವಳ ಗಂಡು ಮಗು ದೆಹಲಿಯಲ್ಲಿ ಆಕ್ಸಿಡೆಂಟಾಗಿ ಸತ್ತು ಹೋಯಿತಂತೆ"—ಎಂಬ ಘಟನೆಯಿಂದ ಈಗ ಅವಳು ಮತ್ತಷ್ಟು ತತ್ತರಿಸಿ ಹೋಗಿದ್ದಾಳೆ. ಅಲ್ಲದೆ ಈಗ ಆಸ್ಪತ್ರೇಲಿ ಆಕ್ಸಿಡೆಂಟಾಗಿರೋ ಹುಡ್ಗೀನೂ ಅವಳ ಮಗಳೇ ಅಂತೆ—ಎಂದು ಅವಳ ದಾರುಣ ಘಟನೆಯನ್ನು ತಾತನಿಗೆ ವಿವರಿಸುತ್ತಾಳೆ. ಏನಾದರೂ ಸುಮನ್ ಗುಟ್ಟಿನ ಹೆಂಗಸು; ಯಾರ ಬಳಿಯೂ ತನ್ನ ಗುಟ್ಟನ್ನು ಬಿಟ್ಟು ಕೊಡುವುದಿಲ್ಲ.

ಕಾದಂಬರಿಯ ಕೊನೆಯಲ್ಲಿ ಸುಮನ್ ತನ್ನ ಮಗಳೊಡನೆ ತುಂಬು ಸಂತೋಷ ದಿಂದ ಆಸ್ಪತ್ರೆಯಿಂದ ಹೊರ ಬರುತ್ತಾಳೆ. ಅಲ್ಲಿಯೇ ಕಾದು ನಿಂತಿದ್ದ ತನ್ನ ಮಾವನನ್ನು ಎದುರುಗೊಳ್ಳುತ್ತಾಳೆ. ತಾತನನ್ನು ಕಂಡು ಓಡಿ ಬಂದ ಸಂಗೀತ, ತನ್ನ ಅಮ್ಮನನ್ನು ಊರಿಗೆ ಕರೆದುಕೊಂಡು ಹೋಗಲು ತಾತನಿಗೆ ತಿಳಿಸುತ್ತಾಳೆ. ತಾತ ಒಪ್ಪಿ ಮೊಮ್ಮಗಳನ್ನು ಸಮಾಧಾನ ಪಡಿಸುತ್ತಾನೆ. ಸಮ್ಮತಿಸಿದ ತಾತ,

ಸೊಸೆಯನ್ನು ಕರೆದಾಗ 'ಸುಮನ್' ನಿರಾಕರಿಸಿ ದೂರದಲ್ಲಿ ಹೊರಡಲು ಸಿದ್ಧವಾಗಿ ನಿಂತಿದ್ದ ಆಸ್ಪತ್ರೆ ವ್ಯಾನಿನಲ್ಲಿ ಹೋಗಲು ಹೊರಡುತ್ತಾಳೆ. ಸಂಗೀತ ತನ್ನ ಅಮ್ಮ ನನ್ನು ಕರೆಯುತ್ತಾ ಓಡುತ್ತಾಳೆ. ಯಶಪಾಲ್ ಕೋಪಗೊಂಡು 'ಸುಮನ್, ಇದೇನು ನಿನ್ನ ಹುಚ್ಚಾಟ'–ಎಂದು ಕರೆಯುತ್ತಾನೆ, ಇದರ ಕಡೆ ಗಮನ ಕೊಡದ 'ಸುಮನ್' ವ್ಯಾನ್ ಬಳಿಗೆ ಧಾವಿಸುತ್ತಾಳೆ. ಸಂಗೀತ 'ಅಮ್ಮಾ'–ಎಂದು ಕಿರುಚಿ ಹಿಂಬಾಲಿಸುತ್ತಾಳೆ. ವ್ಯಾನ್ ಹೊರಡುತ್ತದೆ; ಸುಮನ್ ಕೊನೆಗೂ ಹೊರಟು ಹೋಗುತ್ತಾಳೆ. ಸುಮನ್‌ಳ ಕೊನೆಯ ಆಸೆಯಂತೆ 'ತನ್ನ ಮಕ್ಕಳನ್ನು ತನ್ನವರ ಬಳಿಗೆ ಸೇರಿಸಲು ಸಾಧ್ಯವಾಗದಿದ್ದರೂ, ತನ್ನ ಮಗಳನ್ನು. ತನ್ನ ಮಾವನ ಬಳಿಗೆ ಸೇರಿಸುತ್ತಾಳೆ. ತಾನು ಹಿಡಿದ ಗುರಿ ಸಾಧನೆಯೊಂದಿಗೆ ಕಾದಂಬರಿ ಕೊನೆಗೊಳ್ಳುತ್ತದೆ.

ಭಯಾನಕ ಅತ್ಯಾಚಾರ, ಚಿತ್ರಹಿಂಸೆಯ, ದಾರುಣ ಹಾಗೂ ಹೃದಯ ವಿದ್ರಾವಕ ಘಟನೆಗಳೊಂದಿಗೆ. ತುಂಬು ಆನಂದದಲ್ಲಿದ್ದ ಸಂಸಾರ ಯಾವ ರೀತಿಯಲ್ಲಿ ಅನಿರೀಕ್ಷಿತವಾಗಿ ದುರಂತಗಳ ಸರಮಾಲೆಯನ್ನು ತೊಟ್ಟುಕೊಳ್ಳುತ್ತದೆ ಎಂಬುದನ್ನು ಕಾದಂಬರಿ ಬಿತ್ತರಿಸುತ್ತದೆ. ಇಲ್ಲಿ ಯಾರಿಗೆ ಯಾರು 'ಹರಿಗೋಲು' ? ಎಂಬ ಪ್ರಶ್ನೆ ಕಾದಂಬರಿಯ ಕೊನೆಯಲ್ಲಿಯೂ ಯೋಚಿಸುವಂತೆ ಮಾಡುತ್ತದೆ.





# ಮೂರು ಜೀವನ ಚರಿತ್ರೆಗಳು

—ಪ್ರೊ. ಸಿ. ಹೆಚ್. ಮರಿದೇವರು ಎಂ.ಎ, ಎಂ.ಎಡ್.

"ಗ್ರೇಟ್ ಮೆನ್ ಆಫ್ ದಿ ವರ್ಲ್ಡ್ ವಿಲ್ ಲೀವ್ ದೇರ್ ಪೂಟ್ ಪ್ರಿಂಟ್ಸ್ ಆನ್ ದಿ ಸ್ಯಾಂಡ್ ಆಫ್ ಟೈಮ್ ಟು ಫಾಲೋ ಬೈದಿ ಕಮಿಂಗ್ ಜನರೇಷನ್" ಎಂಬ ಒಂದು ಆಯೋಕ್ತಿ ಇದೆ. ಜಗತ್ತಿನ ಶ್ರೇಷ್ಠ ವ್ಯಕ್ತಿಗಳು ಕಾಲವೆಂಬ ಮರಳಿನ ಮೇಲೆ ತಮ್ಮ ಹೆಜ್ಜೆ ಗುರುತುಗಳನ್ನು ಮುಂಬರುವ ಜನಾಂಗಕ್ಕಾಗಿ ಬಿಟ್ಟು ಹೋಗುತ್ತಾರೆ. ಅಂತಹ ವ್ಯಕ್ತಿಗಳ ವ್ಯಕ್ತಿತ್ವಬದುಕು ಮತ್ತು ಸಾಧನೆಗಳನ್ನು ಕುರಿತು ಬರೆಯುವುದೇ ಜೀವನ ಚರಿತ್ರೆಗಳೆಂಬ ಒಂದು ಸಾಹಿತ್ಯ ಪ್ರಕಾರ.

ಎಸ್. ವಿ. ಶ್ರೀನಿವಾಸರಾವ್ ಅವರು ಕಥೆ ಕಾದಂಬರಿ, ನಾಟಕ, ಕಿರುನಾಟಕ, ಮಕ್ಕಳ ಸಾಹಿತ್ಯ, ಜೀವನ ಚರಿತ್ರೆ ಹೀಗೆ ಸಾಹಿತ್ಯದ ನಾನಾ ಕ್ಷೇತ್ರಗಳಲ್ಲಿ ತಮ್ಮ ಅನುಭವಗಳನ್ನು ಸೆರೆ ಹಿಡಿದು ಕನ್ನಡ ಸಾಹಿತ್ಯ ಸಾಗರಕ್ಕೆ ತಮ್ಮ ಕಿರುಕಾಣಿಕೆಯನ್ನು ಸಲ್ಲಿಸಿದವರಾಗಿದ್ದಾರೆ. ಅಂಥಲ್ಲಿ ಅವರು ರಚಿಸಿದ ಮೂರು ಜೀವನ ಚರಿತ್ರೆಗಳನ್ನು ಕುರಿತು ಪ್ರಸ್ತಾಪಿಸುವುದು ಪ್ರಸ್ತುತಲೇಖನದ ವಿಷಯ.

1) ಸ್ಮರಣೀಯ ಹುತಾತ್ಮರು.

ಈ ಕಿರುಕೃತಿಯಲ್ಲಿ ಲೇಖಕರು ಗಾಂಧಿತ್ರಯರು ಹೇಗೆ ಬಾಳಿ ಬದುಕಿ ತಮ್ಮ ಜೀವನ ಸಾಧನಗಳನ್ನು ಸಾಧಿಸಿದರು ಎಂಬುದನ್ನು ಪ್ರಸ್ತಾಪಿಸಿದ್ದಾರೆ.

ಪೋರಬಂದರಿನಲ್ಲಿ ಮೋಹನದಾಸ್ ಕರಮಚಂದ್ ಗಾಂಧಿ ಅಕ್ಟೋಬರ್ 2, 1869ರಲ್ಲಿ ಕರಮಚಂದ ಗಾಂಧಿಯ ಕಿರಿಯ ಮಗನಾಗಿ ಜನಿಸಿದರು. ಸಾಮಾನ್ಯವಾಗಿ ಎಲ್ಲರೂ ಹುಟ್ಟಿದಂತೆ ಹುಟ್ಟಿದ ವ್ಯಕ್ತಿ ದೊಡ್ಡ ವ್ಯಕ್ತಿ ಆದದ್ದು ಹೇಗೆ, ಆ ರೀತಿ ಆಗಲು ಒದಗಿಬಂದ ಸನ್ನಿವೇಶಗಳು ಯಾವುವು ? ಜೀವನದಲ್ಲಿ ಮತ್ತೆಂದೂ ಎದುರಾಗುವ ಅಸಾಮಾನ್ಯ ಸನ್ನಿವೇಶಗಳಿಗೆ ಹಿಮ್ಮೆಟ್ಟಿ ಬೆನ್ನು ಮಾಡಿ ಓಡಿಹೋಗದೆ ಅವುಗಳನ್ನು ಅರ್ಥಪೂರ್ಣವಾಗಿ ಎದುರಿಸಿ ಗೆಲುವು ಸಾಧಿಸುವುದೇ ವ್ಯಕ್ತಿಯೊಬ್ಬನ ಅತ್ಯದ್ಭುತ ಸಾಧನೆ ಎನಿಸುತ್ತದೆ. ಮೋಹನದಾಸ ಕರಮಚಂದ ಗಾಂಧಿ ತನ್ನ ತಪ್ಪುಗಳನ್ನು ತಾನೇ ತಿದ್ದಿಕೊಳ್ಳುತ್ತ ಸತ್ಯದ ಹಾದಿಯಲ್ಲಿಯೇ ನಡೆದ ಒಂದು ಮಹಾನ್

ಚೇತನ. ಸತ್ಯದ ಹಾದಿ ಅದು ಹಾಲು ಬೆಳಕಿನ ಹಾದಿ. ದೇವತ್ವದೆಡೆಗೆ ಕೊಂಡೊಯ್ಯುವ ಹಾದಿ. ಮೋಹನ ದಾಸ ಕರಮ ಚಂದ ಗಾಂಧಿ ಜೀವನ ಸಾಗರ ದಲ್ಲಿದ್ದುಕೊಂಡೇ ಸತ್ಯಾನ್ವೇಷಣೆಯ ಅಸೀಮ ಸೌಂದರ್ಯವನ್ನು ಕಂಡುಕೊಂಡ ವ್ಯಕ್ತಿ. ಜನ ಸೇವೆಯೇ ಜನಾರ್ದನ ಸೇವೆ ಎಂದು ದುಡಿದ ಅದಮ್ಯ ಚೇತನ. ಸುಮಾರು 200 ವರ್ಷಗಳ ದಾಸ್ಯ ಶೃಂಖಲೆಯಲ್ಲಿದ್ದ ಭರತಖಂಡಕ್ಕೆ ಸ್ವಾತಂತ್ರ್ಯದ ನಂದಾ ಜ್ಯೋತಿಯನ್ನು ತನ್ನ "ಅಹಿಂಸೆಯೆಂಬ ಬ್ರಹ್ಮಾಸ್ತ್ರ ಪ್ರಯೋಗಿಸಿಯೇ ತಂದುಕೊಟ್ಟ ವ್ಯಕ್ತಿ. ಅಹಿಂಸಾ ವ್ರತವೆಂಬ ತಪಸ್ಸಿನಿಂದಲೇ ದಕ್ಷಿಣ ಆಫ್ರಿಕಾ ಖಂಡದಲ್ಲಿ ತಾಂಡವವಾಡುತ್ತಿದ್ದ ವರ್ಣವಿದ್ವೇಷದ ವಿರುದ್ಧ ಹೋರಾಟ ಪ್ರಾರಂಭಿಸಿದ್ದು, ಅದೇ ತಪಸ್ಸಿನಿಂದಲೇ ಬ್ರಿಟೀಷರೇ ಭಾರತ ಬಿಟ್ಟು ತೊಲಗಿ ಎಂದು ಸಾರಿ ಹೇಳಿದ್ದು. ಗಾಂಧಿ ತಮ್ಮ ಜೀವಿತದುದ್ದಕ್ಕೂ ತಮ್ಮನ್ನು ತಾವು ಅನೇಕಾನೇಕ ರಚನಾತ್ಮಕ ಕಾರ್ಯ ಗಳಲ್ಲಿ ತೊಡಗಿಸಿಕೊಂಡರು. ಸತ್ಯಸಂಬಂಧರಾಗಿ ಬಾಳಿಬದುಕಿದರು. ಸತ್ಯವೇ ದೇವರೆಂದು ಸಾರಿದರು. ಸತ್ಯಾನ್ವೇಷಣೆಯ ಬದುಕು ಸಾಗಿಸಿದ್ದರಿಂದಲೇ ಸಾಮಾನ್ಯವಾದ ಗಾಂಧಿ, ಮಹಾತ್ಮ ಗಾಂಧಿಯಾದದ್ದು. "ಮಹಾತ್ಮ" ಎನ್ನುವ ಶಬ್ದ ಆತ್ಮನನ್ನು ಪರಮಾತ್ಮನಾಗಿಸುವ ಅರ್ಹಂತ ಪದವಿಗೆ ಕೊಂಡೊಯ್ದಾಗ ಮಾತ್ರ ಲಭ್ಯವಾಗುವುದಿಲ್ಲ. ಯಾರು ಅಹೋರಾತ್ರಿ ಜನತಾ ಜನಾರ್ದನನ ಉದ್ಧಾರಕ್ಕಾಗಿ ಚಿಂತನೆಗಯ್ಯುತ್ತಾ ಸಾತ್ವಿಕ ಮಾರ್ಗದಲ್ಲಿ ಅಡಿ ಇಡುತ್ತಾರೊ ಅಂತಹ ಕೆಲವೇ ವ್ಯಕ್ತಿಗಳು ಮಾತ್ರ "ಮಹಾತ್ಮ" ಎನ್ನುವ ಶಬ್ದಾರ್ಥಕ್ಕೆ ಅರ್ಹರಾಗುತ್ತಾರೆ. ಮೋಹನದಾಸ ಕರಮಚಂದ ಗಾಂಧಿ ಎಂಬ ಸಾಮಾನ್ಯ ಮನುಷ್ಯ "ಮಹಾತ್ಮ"ನೆಂಬ ಅರ್ಹಂತ ಪದವಿಗೇರಿದ್ದು ತನ್ನ ಸಾಧನೆಯ ಸಿದ್ಧಿಯಿಂದ.

ಜಗತ್ತಿನ ಬಹುತೇಕ "ಮಹಾತ್ಮರುಗಳು" ಅಂದರೆ ಏಸು, ಬಸವ, ಗಾಂಧಿ ಇವರೆಲ್ಲರೂ ನಾನಾ ರೀತಿಯ ಹಿಂಸೆಗೊಳಗಾಗಿ ತಮ್ಮ ಅಸುನೀಗಿದರು. ಆ ರೀತಿ ಅಸು ನೀಗಿ ಮಹಾತ್ಮರಾದರು. ಜಗತ್ತಿನ ಜನಾಂಗಕ್ಕೆ ಪ್ರಾತಃಸ್ಮರಣೀಯರಾದರು. ಅವರು ಕಾಲವೆಂಬ ಮರಳಿನ ಮೇಲೆ ಬಿಟ್ಟು ಹೋದ ಹೆಜ್ಜೆ ಗುರುತುಗಳು ಜಗತ್ತಿನ ಜನಾಂಗಕ್ಕೆ ಮಾರ್ಗದರ್ಶನವನ್ನು ನೀಡುವ ದಿವ್ಯ ಜ್ಯೋತಿಗಳಾಗಿ ಉಳಿದಿವೆ. ಇದು "ಮಹಾತ್ಮ"ರಾದವರ ದಿವ್ಯ ಚರಿತೆ.

ಇನ್ನು ರಾಜಕೀಯವಾಗಿ ರಾಷ್ಟ್ರದ ಚುಕ್ಕಾಣಿ ಹಿಡಿದ ಈಶ್ವರ ವ್ಯಕ್ತಿತ್ವವನ್ನು ಕುರಿತು ಚರ್ಚಿಸಿದ್ದಾರೆ. ಇಂದಿರಾಗಾಂಧಿ ಹಾಗೂ ಅವರ ಮಗ ರಾಜೀವಗಾಂಧಿ. ಇವರಿಬ್ಬರೂ ಮಹಾತ್ಮರಾಗಲು ಸಾಧ್ಯವಾಗಲೇ ಇಲ್ಲ. ಏಕೆಂದರೆ ಅವರು ರಾಜಕೀಯ ಜಂಝಾಟದಲ್ಲಿ ಸಿಕ್ಕಿ, ರಾಜಕೀಯದಲ್ಲಿ ಕುರ್ಚಿಗಾಗಿ ನಡೆದ ಜಂಘೀ

ಕುಸ್ತಿಯ ತಿರುವು ಮುರುವುಗಳಲ್ಲಿ ಸಿಕ್ಕಿಕೊಂಡವರು. ಆದರೂ ಈ ತಾಯಿ–ಮಕ್ಕಳೀರ್ವರೂ ಭರತಖಂಡದ ರಾಜಕೀಯ ಧ್ರುವತಾರೆಗಳಾಗಿ ಆಚಂದ್ರಾರ್ಕವಾಗಿ ಅಲ್ಲದಿದ್ದರೂ ಭಾರತದ ಇತಿಹಾಸದ ಪುಟಗಳಲ್ಲಿ ಉಳಿದು ಹೋಗುವವರಿದ್ದಾರೆ. ರಾಷ್ಟ್ರಕ್ಕಾಗಿ ಅವರ ಅಳಿಲು ಸೇವೆಯನ್ನು ಸ್ಮರಿಸದಿರಲು ಸಾಧ್ಯವೇ ಇಲ್ಲ. ಪ್ರತಿಯೊಬ್ಬ ವ್ಯಕ್ತಿಗಳಲ್ಲೂ ಇರಬಹುದಾದ ಕೆಲವು ನ್ಯೂನತೆಗಳು ಇಂದಿರಾಗಾಂಧಿ, ರಾಜೀವಗಾಂಧಿ ಇವರಲ್ಲೂ ಇದ್ದುವು. ಅವುಗಳನ್ನು ಹೊರತುಪಡಿಸಿ ಅವರ ಕ್ಷಾತ್ರ ಗುಣಗಳನ್ನು ಲೆಕ್ಕಕ್ಕೆ ತೆಗೆದುಕೊಂಡು ಅವರು ರಾಷ್ಟ್ರಕ್ಕಾಗಿ ಮಾಡಿದ ಸೇವೆಯು ಅವಿಸ್ಮರಣೀಯವೆನ್ನಲೇಬೇಕು. ಅವರು ರಾಷ್ಟ್ರೋತ್ಥಾನಕ್ಕಾಗಿ ದುಡಿಯುತ್ತಲೇ ಹುತಾತ್ಮರಾದದ್ದು ಈ ದೇಶದ ಒಂದು ಧರ್ಮದುರಂತವೇ ಸರಿ.

2) ಭಾರತರತ್ನ ಗೋವಿಂದ ವಲ್ಲಭ ಪಂತ್ ಕುರಿತ ದೂರದರ್ಶನ ನಾಟಕ ಒಂದು ಉತ್ತಮವಾದ ಕಿರು ನಾಟಕ. ರಾಷ್ಟ್ರ ಜೀವನಕ್ಕಾಗಿ ತನ್ನನ್ನು ತಾನು ತೊಡಗಿಸಿಕೊಂಡು ದುಡಿದ ಮಹಾನ್ ಚೇತನ ಗೋವಿಂದ ವಲ್ಲಭ ಪಂತ್. ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಾತಃಸ್ಮರಣೀಯರಾದ ಕೆಲವೇ ಮಂದಿ ಹುತಾತ್ಮರಲ್ಲಿ ಗೋವಿಂದ ವಲ್ಲಭ ಪಂತ್ ಸಹ ಒಬ್ಬರು. ಸ್ವಾತಂತ್ರ ಸಂಗ್ರಾಮದಲ್ಲಿ ಟೊಂಕಕಟ್ಟಿ ನಿಂತು ವೀರಸೇನಾನಿಯಂತೆ ಹೋರಾಟ ನಡೆಸಿದ ವೀರಾಧಿವೀರರಲ್ಲಿ ಪಂತ್ ಸಹ ಒಬ್ಬರು. ಇವರದು ಧೀರೋದಾತ್ತ ಬದುಕು. ಗೋವಿಂದ ವಲ್ಲಭ ಪಂತ್‌ರವರು ಗಾಂಧೀಜಿಯವರ ಅಚ್ಚುಮೆಚ್ಚಿನ ಶಿಷ್ಯರಲ್ಲಿ ಒಬ್ಬರು. ಕೇಂದ್ರ ಗೃಹ ಮಂತ್ರಿಗಳಾಗಿ ರಾಷ್ಟ್ರಕ್ಕೆ ಅದ್ವಿತೀಯ ಸೇವೆ ಸಲ್ಲಿಸಿದರು. ಗೋವಿಂದ ವಲ್ಲಭ ಪಂತ್‌ರವರ (ಸೆಪ್ಟೆಂಬರ್ 10. 1887 ರಿಂದ 1961ರ ಮಾರ್ಚಿ 7ರ ವರೆಗೆ) ವಿದ್ಯಾಭ್ಯಾಸ, ವಿವಾಹ. ಕಾನೂನು ಪದವಿ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆ, ಮರು ವಿವಾಹ, ಸ್ವಾತಂತ್ರ ಚಳುವಳಿಯಲ್ಲಿ ಹೋರಾಟ,ಉತ್ತರ ಪ್ರದೇಶದ ಮುಖ್ಯಮಂತ್ರಿಯಾಗಿ, ಕೇಂದ್ರ ಸರ್ಕಾರದ ಗೃಹ ಮಂತ್ರಿಯಾಗಿ ಇತ್ಯಾದಿ ನಾನಾ ಹುದ್ದೆಗಳಲ್ಲಿ ತೊಡಗಿ ದಕ್ಷ ಆಡಳಿತಗಾರರೆನಿಸಿಕೊಂಡನಂತರದ ಜೀವನ ಚರಿತ್ರೆ ಮಕ್ಕಳಿಗೆ ದೊಡ್ಡ ವರದಿಯಾಗಿ ತಿಳಿಯುವಂತೆ ಈ ಕಿರು ನಾಟಕದಲ್ಲಿ ಮೂಡಿ ಬಂದಿದೆ. ಆಬಾಲ ವೃದ್ಧರಾದಿಯಾಗಿ ಎಲ್ಲರೂ ಮೆಚ್ಚಿಕೊಳ್ಳಬಲ್ಲ ರಾಷ್ಟ್ರ ಭಕ್ತರೊಬ್ಬರ ಆತ್ಮಕಥನ.

3) ರಾಷ್ಟ್ರ ಭಕ್ತ ಮೌಲಾನಾ ಅಬುಲ್ ಕಲಾಂ ಆಜಾದ್

ಭಾರತ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಮುಸ್ಲಿಂ ಬಾಂಧವರನೇಕರು ಹೋರಾಟದ ಮುಂಚೂಣಿಯಲ್ಲಿದ್ದರು. ಅಂಥವರಲ್ಲಿ ಮೌಲಾನಾ ಅಬುಲ್ ಕಲಾಂ ಆಜಾದ್‌ರವರ ಹೆಸರು ಸುಪ್ರಸಿದ್ಧವಾದುದು. 1888 ನವೆಂಬರ್ 11 ರಂದು ಜನಿಸಿದ ಆಜಾದ್ 1958 ಫೆಬ್ರುವರಿ 22 ರಂದು ದೈವಾಧೀನರಾಗಿದ್ದಾರೆ.

ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ತುರಂಗ ವಾಸ ಅನುಭವಿಸಿದ್ದಾರೆ. ಅವಿಚ್ಛಿನ್ನ ರಾಷ್ಟ್ರಭಕ್ತರಾಗಿ, ಅದ್ವಿತೀಯ ವಿದ್ವಾಂಸರಾಗಿ ದೇಶಸೇವೆಯೇ ಈಶ ಸೇವೆ ಎಂದು ಭಾವಿಸಿದವರಾಗಿ, ಸಮಾಜಸೇವಾ ಧುರೀಣರಾಗಿ ಧರ್ಮ ಭೀರುವಾಗಿ, ಹಿಂದೂ ಮುಸಲ್ಮಾನರೆಲ್ಲರೂ ಭಾರತಾಂಬೆಯ ಸುಪುತ್ರರೆಂದು ಪರಿಭಾವಿಸಿದವರಾಗಿ ಕೇಂದ್ರ ಸರ್ಕಾರದ ಶಿಕ್ಷಣ ಮಂತ್ರಿಗಳಾಗಿ ಅನೇಕ ಶಿಕ್ಷಣ ಸಂಸ್ಥೆಗಳ ಸಂಸ್ಥಾಪಕರಾಗಿ ದುಡಿದು ತನ್ನ ಹೆಜ್ಜೆ ಗುರುತುಗಳನ್ನು ಕಾಲವೆಂಬ ಮರಳಿನ ಮೇಲೆ ಮುಂಬರುವ ಜನಾಂಗಕ್ಕಾಗಿ ಬಿಟ್ಟು ಹೋಗಿರುತ್ತಾರೆ. ಅಂತಹ ಧೀಮಂತ ವ್ಯಕ್ತಿತ್ವದ ಕಿರು ಪರಿಚಯವನ್ನು ಶ್ರೀನಿವಾಸರಾಯರು ಒಂದು ಕಿರು ನಾಟಕದಲ್ಲಿ ತರಲು ಪ್ರಯತ್ನಿಸಿದ್ದಾರೆ.

ಹೀಗೆ ಶ್ರೀನಿವಾಸರಾಯರು ಅವರ ಈ ಮೂರು ಕೃತಿಗಳಲ್ಲಿ ಮೂವರು ಗಾಂಧೀತ್ರಯರು ಮತ್ತು ಇನ್ನೀರ್ವರು ರಾಷ್ಟ್ರಭಕ್ತರ ಚರಿತ್ರೆಯನ್ನು ಚಿಕ್ಕ ಮಕ್ಕಳಿಗೆ ಪ್ರಿಯವಾಗುವ ರೀತಿಯಲ್ಲಿ ರಚಿಸಿದ್ದಾರೆ. ಕನ್ನಡ ಸಾರಸ್ವತ ಲೋಕದ ಅಜರಾಮರ ಕೃತಿಗಳಾಗದಿದ್ದರೂ ಜಿನುಗು ಸೋನೆಯ ಸೊಬಗು ಮೂಡಿಸಿ ಚಿಣ್ಣರ ಸಾಹಿತ್ಯ ಮನಸ್ಸುಗಳನ್ನು ತೋಯಿಸಿದ್ದಾರೆ. ಚಿಣ್ಣರಿಗೆ ಸಾಹಿತ್ಯ ಚುರುಮುರಿಯ ರುಚಿತೋರಿ ಕೃತಕೃತ್ಯರಾಗಿದ್ದಾರೆ.



# ಇಬ್ಬನಿ-ಒಂದು ಅನಿಸಿಕೆ

—ಶೈಲಾನಾಗರಾಜ್

ಇಂದಿನ ಜನಪ್ರಿಯ ಕಾದಂಬರಿಗಳ ದಾಳಿಯಲ್ಲಿ, ವಾಸ್ತವತೆಯ ಹಿನ್ನೆಲೆಯಲ್ಲಿ ಬದುಕಿನ ಸೂಕ್ಷ್ಮಗಳನ್ನು ವಿಮರ್ಶಾತ್ಮಕವಾಗಿ ಮನಮುಟ್ಟುವಂತೆ ರಚಿಸುವ ಜನಪ್ರಿಯ ಲೇಖಕರು ವಿರಳ. ಇಂತಹ ವಿರಳ ಲೇಖಕರಲ್ಲಿ ಎಸ್. ವಿ. ಶ್ರೀನಿವಾಸ ರಾವ್‌ರವರು ಪ್ರಮುಖರು. ಬದುಕಿನ ಮಾನಸಿಕ ತುಮುಲ, ಸೂಕ್ಷ್ಮ ಸಂವೇದನೆ ಗಳನ್ನು ಪ್ರಬುದ್ಧವಾಗಿ ಹಾಗೂ ಸರಳ ಭಾಷೆಯ ಹಿಡಿತದಲ್ಲಿ ಜನಸಾಮಾನ್ಯರಿಗೂ ಹತ್ತಿರವಾಗಿ, ಸ್ವಾರಸ್ಯವಾಗಿ ನಿರೂಪಿಸುವ ಕಲೆ ಎಸ್. ವಿ. ಎಸ್. ರವರಿಗೆ ಸಿದ್ಧಿಸಿದ್ದು.

ಇವರ ಹದಿನೈದಕ್ಕೂ ಹೆಚ್ಚು ಕಾದಂಬರಿಗಳು ಹೆಸರಾಂತ ಪತ್ರಿಕೆಗಳಲ್ಲಿ ಪ್ರಕಟ ವಾಗಿ ಅಪಾರ ಜನಮನ್ನಣೆ ಗಳಿಸಿವೆ. ಪ್ರಸ್ತುತ ಆರಿಸಿಕೊಂಡಿರುವ "ಇಬ್ಬನಿ" ಕಾದಂಬರಿಯೂ "ಸುಧಾ"ದಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ ಜನಪ್ರಿಯ ವಾದದ್ದು !

ಸಾಮಾಜಿಕ ಬದುಕಿನ ಒಳಾಂತರಂಗಗಳನ್ನು, ಏರುಪೇರುಗಳನ್ನು ಕಾದಂಬರಿ ಗಳಲ್ಲಿ ಚರ್ಚಿಸುವಂತೆ, ಗಂಡು ಹೆಣ್ಣಿನ ಪ್ರೇಮಾಂತರಂಗಗಳನ್ನು, ನಲುಮೆ, ಗೆಲುಮೆ ಗಳನ್ನು ಅತ್ಯಂತ ರೋಚಕವಾಗಿ ಹೃದ್ಯವಾಗಿ ನಿರೂಪಿಸಿರುವುದು ಎಸ್. ವಿ. ಎಸ್. ರವರ ವೈಶಿಷ್ಟ್ಯತೆ. ಅಂತೆಯೇ "ಇಬ್ಬನಿ" ಕಾದಂಬರಿ, ಹೊಸದಾಗಿ ಮದುವೆಯಾಗಿ, ಮಧುಚಂದ್ರದ ಸವಿಗಾಗಿ ಸಿಮ್ಲಾಕ್ಕೆ ಬಂದ ಪರಿಮಳ ಮುರುಳಿ ದಂಪತಿಗಳ ಸುತ್ತ ಹೆಣೆದದ್ದು ! ದಂಪತಿಗಳ ಪ್ರೇಮ ಲಹರಿಗಳು, ನಂಬಿಸುವ ಹಿನ್ನೆಲೆಯಲ್ಲಿ ದಂಪತಿ ಗಳನ್ನು ಆತ್ಮೀಯವಾಗಿ, ನಯವಾಗಿ ವಂಚಿಸುವ ಸಹ ಮಧುಚಂದ್ರಿಗರು ? ವೇದನೆಗಳ ಹಿನ್ನೆಲೆಗೆ ಪೂರಕವಾಗುವ ವಾತಾವರಣ, ಲೇಖಕರಿಂದ ಸ್ವಾರಸ್ಯಕರವಾಗಿ ಮೂಡಿಬಂದಿದೆ. ಸ್ವತಃ ಲೇಖಕರೇ ಪ್ರವಾಸಗೈದು ಆಹ್ಲಾದಿಸಿರುವ ಸೀಮ್ಲಾದ ಸೌಂದರ್ಯ, ಕಣ್ಣಿಗೆ ಕಟ್ಟುವಂತೆ ವರ್ಣಿತವಾಗಿದೆ. ಅಲ್ಲಿನ ಪ್ರಾಕೃತಿಕ ಸೌಂದರ್ಯ, ಬೆಟ್ಟಗುಡ್ಡ, ರಘುರಿ, ಕಾಡುಗಳ ಬಿಹರಿ ಲಿಫ್ಟ್‌ಗಳು, ಎತ್ತರದ ಮನೆಗಳು ತಗ್ಗಿ ರಸ್ತೆಗಳು ಹಾಯ್ ಎನಿಸುವ ವೈಭವದ ಪ್ರವಾಸಿ ಮನೆಗಳು, ಓದುಗರನ್ನು ಸಿಮ್ಲಾಕ್ಕೇ ಮುಟ್ಟಿಸಿಬಿಡುತ್ತವೆ.

ಮುಗ್ಧ ದಂಪತಿಗಳ ಪ್ರಣಯಚಂದ್ರಕ್ಕೆ ಗೋಮುಖ ವ್ಯಾಘ್ರಗಳಾಗಿ ಬರುವ ಸುಖದೇವ್, ರಶ್ಮಿ, ಶ್ರೀಲತಾ ಇವರುಗಳ ಅಸ್ವೈತಿಕತೆಗಳಿಗೆ ಭಯದಿಂದ ಶಾಮೀಲಾಗುವ ಭೀಮ್‌ಸಿಂಗ್ ಕುಟುಂಬ, ಎರಡನೇ ಹೆಂಡತಿಯ ವರ್ತನೆಗಳಿಗೆ, ತನ್ನ ಚಪಲಗಳಿಗೆ, ಅಸಹಾಯಕನಾಗಿ ಬಲಿಯಾಗುವ ಬಾಬು, ನೈಜವಾಗಿ ಮೂಡಿ ಬಂದಿದ್ದಾರೆ. ಹಂತ ಹಂತವಾಗಿ ದೌರ್ಜನ್ಯಕ್ಕೆ ಒಳಗಾಗುವ ಮುರುಳಿ, ಪರಿಮಳ ಅವರ ಸುತ್ತ ಸುತ್ತುವ ಪೋಲೀಸರು ದಿನದಿಂದ ದಿನಕ್ಕೆ, ಘಟನೆಗಳಿಂದ ಘಟನೆಗೆ ಜರ್ಜಿತವಾಗುವ ಅವರ ಅನಾಥ ಮನಸ್ಥಿತಿ, ತೊಳಲಾಟಗಳು ಮನೋಜ್ಞವಾಗಿ ಮೂಡಿಬಂದಿವೆ. ಕಾದಂಬರಿಯ ಕೊನೆಯವರೆಗೂ, ಅಪರಾಧಿಗಳಾರೆಂದು ಊಹೆಗೂ ನಿಲುಕಿಸದೆ, ಬಿಗಿರಚನೆಯಲ್ಲಿ ಓದುಗರನ್ನು ಕುತೂಹಲಿಗಳಾಗಿ ಹಿಡಿದಿಡುವ ಕೌಶಲ್ಯ ಕಾದಂಬರಿ ಉದ್ದಕ್ಕೂ ಮೆರೆದಿದೆ. ಪ್ರತಿಯೊಬ್ಬರ ಸಂಭಾಷಣೆಗಳೂ ಲೇಖಕರ ಚಾತುರ್ಯಕ್ಕೆ ಕನ್ನಡಿ ಹಿಡಿದಿವೆ.

"ಊರೂರು ಸುತ್ತಿದ ಮೇಲೂ ನಮ್ಮೂರೇ ನಮಗೆ ಮೇಲು" ಎಂಬ ತಾತ್ವಿಕ ನಿಟ್ಟುಸಿರಿಗೆ ಪೂರಕವಾಗುವ ಈ ಕಾದಂಬರಿ ಲೇಖಕರ ಪ್ರತಿಭಾ ಜನಪ್ರಿಯತೆಗೆ ಸಾಕ್ಷಿಯಾಗಿದೆ.



# ಸ್ವರಮೇಳ ಹಾಗೂ ಮಂಥನ

—ಸೋ. ಮು. ಭಾಸ್ಕರಾಚಾರ್

ಪ್ರಸ್ತುತ ಸಾಹಿತ್ಯ ಕ್ಷೇತ್ರದಲ್ಲಿ ಕಾದಂಬರಿ ಪ್ರಕಾರ ವಟವೃಕ್ಷದಂತೆ ವಿಸ್ತಾರಗೊಳ್ಳುತ್ತಿದೆ. ಓದುಗರನ್ನು ಆಕರ್ಷಿಸಿ ಬರಹಗಾರರನ್ನು ಬೆಳೆಸಿದೆ. ವಿಪುಲ ಸಾಹಿತ್ಯ ರಚಿಸಿರುವ ಮಾನ್ಯ ಶ್ರೀ ಎಸ್. ವಿ. ಶ್ರೀನಿವಾಸರಾವ್‌ರವರು ಇಂಥ ಕಾದಂಬರಿ ಕ್ಷೇತ್ರದಲ್ಲೂ ಕೈಯಾಡಿಸಿ ತನ್ನದೇ ಆದ ಓದುಗರನ್ನು ಪಡೆದಿದ್ದಾರೆ. ಹೀಗೆ ಓದುಗರ ಗಮನ ಸೆಳೆದ ಇವರ ಕೃತಿಗಳಲ್ಲಿ "ಸ್ವರಮೇಳ" ಹಾಗೂ "ಮಂಥನ" ಮುಖ್ಯವಾದ ಸಾಮಾಜಿಕ ಕಾದಂಬರಿಗಳು.

ಶ್ರೀಯುತರು ರಕ್ಷಣಾ ಇಲಾಖೆಯಲ್ಲಿ ಸೈಂಟಿಫಿಕ್ ಆಫೀಸರ್ ಆಗಿದ್ದುಕೊಂಡೂ, ಸಾಹಿತ್ಯದ ಗೀಳಿಗೆ ಅಂಟಿಕೊಂಡಿದ್ದಾರೆ. ಇವರ ಬಹುಪಾಲು ಕೃತಿಗಳು ರಾಜ್ಯದ ಪ್ರಸಿದ್ಧ ನಿಯತಕಾಲಿಕಗಳಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿವೆ. ಅಂಥ ಕೃತಿಗಳಲ್ಲಿ ಈ ಕಾದಂಬರಿಗಳೂ ಕೂಡ ಸೇರಿವೆ.

1976 ಕ್ಕೂ ಮುಂಚೆ 'ಸುಧಾ' ಪತ್ರಿಕೆಯಲ್ಲಿ ಓದುಗರಿಗೆ ತಲುಪಿ, ನಂತರ ಪುಸ್ತಕರೂಪದಲ್ಲಿ ಹೊರ ಬಂದದ್ದು 'ಸ್ವರಮೇಳ'. ಇದೊಂದು ಪೂರ್ಣ ಪತ್ತೇದಾರಿಯೂ ಆಗದೆ, ಸಾಮಾನ್ಯ ಕಾದಂಬರಿಯೂ ಆಗದೆ ಆಧುನಿಕ ಸಿನಿಮಾ ಮಾದರಿಯ ಕಥಾವಸ್ತು ಉಳ್ಳದ್ದು.

ಸಂಪ್ರದಾಯ ಕುಟುಂಬದ ಆಗರ್ಭ ಶ್ರೀಮಂತ ಆನಂದರಾಯ ಹಾಗೂ ಈತನ ಗೆಳೆಯ ಮಾಜಿ ಪಾರ್ಲಿಮೆಂಟ್ ಸದಸ್ಯ, ಜನಪ್ರಿಯ ಹಾಗೂ ಶ್ರೀಮಂತನಾದ ಗಂಗಾಧರಶಾಸ್ತ್ರಿಗಳ ಕುಟುಂಬದ ಸುತ್ತಲೂ ಈ ಕಾದಂಬರಿ ಹೆಣೆದುಕೊಂಡಿದೆ. ಹಣ ಹಾಗೂ ಪ್ರತಿಷ್ಠೆಯಿಂದ ಈ ಕುಟುಂಬಗಳು ಪಾಶ್ಚಾತ್ಯ ಸಂಸ್ಕೃತಿಯನ್ನು ಆಶ್ರಯಿಸಿ ಸಂಪತ್ತೇ ಬದುಕಿನ ಸರ್ವಸ್ವವೆಂದು ಭ್ರಮೆಗೊಳಗಾಗಿ ಬಾಳನ್ನು ಹಾಳು ಮಾಡಿಕೊಂಡು, ಕೊನೆಯಲ್ಲಿ ಪಶ್ಚಾತ್ತಾಪ ಪಡುವುದರೊಂದಿಗೆ ಕಾದಂಬರಿ ಮುಕ್ತಾಯ ಕಾಣುತ್ತದೆ.

ನಾಲ್ಕಾರು ಫ್ಯಾಕ್ಟರಿಗಳ ಒಡೆತನ, ಲಕ್ಷ್ಮೀ ಬ್ಯಾಂಕಿನ ಡೈರೆಕ್ಟರ್ ಹುದ್ದೆ, ಪೆಟ್ರೋಲ್ ಸೀಮೆಎಣ್ಣೆಯ ಎರಡು ಜಿಲ್ಲೆಗಳ ಹೋಲ್‌ಸೇಲ್ ಏಜನ್ಸಿ, ಸಿಮೆಂಟ್

ಸಕ್ಕರೆಯ ಸಗಟು ವ್ಯಾಪಾರದೊಂದಿಗೆ ಸ್ಕೂಲ್, ಅನಾಥಾಶ್ರಮ, ಆಸ್ಪತ್ರೆಗಳ ವಹಿವಾಟು ನಡೆಸುವ ಸ್ತ್ರೀವ್ಯಾಮೋಹಿ ವಿದುರ ಆನಂದರಾಯನಿಗೆ ಇಬ್ಬರು ಮಕ್ಕಳು. ಒಬ್ಬ ಮಗ ಹಾಗೂ ಮಗಳು—ಮುಕುಂದ ಹಾಗೂ ಸರಸ್ವತಿ.

ತಾಯಿ ಇಲ್ಲದ ಮಗ ಮುಕುಂದ ತನ್ನ ಮನೆ ಹಾಗೂ ತಂದೆಯ ವ್ಯವಹಾರಗಳಿಂದ ದೂರ ಇದ್ದು, ವಿದ್ಯಾರ್ಥಿ ನಿಲಯದಲ್ಲಿ ಕಣ್ಣು ಕಟ್ಟಿದ ಕುದುರೆಯಂತೆ ಬೆಳೆದು, ಉನ್ನತ ವ್ಯಾಸಂಗ ಮುಗಿಸಿ ಮನೆಗೆ ಬರುತ್ತಾನೆ. ಈತ ತನ್ನ ತಂದೆಯ ವ್ಯಕ್ತಿತ್ವ ಹಾಗೂ ವ್ಯವಹಾರಕ್ಕೆ ಎಷ್ಟೊಂದು ಅಪರಿಚಿತನೆಂದರೆ ತನ್ನ ಸ್ವಂತ ಮನೆಯಲ್ಲಿ ಓಡಾಡಲು ಎಲ್ಲೆಲ್ಲಿ ಬಾಗಿಲುಗಳಿವೆ ಎಂಬ ಸ್ಪಷ್ಟ ತಿಳುವಳಿಕೆಯೂ ಇಲ್ಲದಂತೆ ಬೆಳೆದಿರುತ್ತಾನೆ. ಇಂಥ ಮಗನಿಗೆ ತನ್ನ ವಂಚನೆಯ ವ್ಯವಹಾರ ತಿಳಿಯದಂತೆ ಕೆಲವು ಫ್ಯಾಕ್ಟರಿಗಳ ವ್ಯವಹಾರ ನೋಡಿಕೊಳ್ಳಲು ಹೊಣೆ ನೀಡುತ್ತಾನೆ. ಹರೆಯಕ್ಕೆ ಬಂದ ಮಗಳಿಗೆ ಸದಾ ಟ್ರಿಮ್ ಆಗಿ ಡ್ರೆಸ್ ಮಾಡಿಸಿಕೊಂಡು 'ಶೋಪೀಸ್' ಅಂತೆ, ಕಂಡ ಕಂಡ ಪಾರ್ಟಿಗಳಿಗೆಲ್ಲ ಕರೆದೊಯ್ಯುತ್ತ ತನ್ನ ಮನೋಧರ್ಮಕ್ಕೆ ತಕ್ಕಂತೆ ಮಾರ್ಪಡಿಸಲು ಯತ್ನಿಸಿ ಸೋಲುತ್ತಾನೆ. ಈಕೆ ತನ್ನ ತಂದೆಯನ್ನು ಸೂತ್ರದ ಗೊಂಬೆ ಮಾಡಿಕೊಂಡಿರುವ ಗಂಗಾಧರಶಾಸ್ತ್ರಿಯ ಮಗ ನಾಗರಾಜನನ್ನು ಮೆಚ್ಚಿಕೊಳ್ಳದೆ, ತಾನು ಮೆಚ್ಚಿದ್ದ ಮಂಜುನಾಥನಿಗೆ ಪತ್ನಿಯಾಗಲು ಸಾಧ್ಯವಾಗದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ತಂದೆಯ ಹಾಗೂ ಆತನ ಗೆಳೆಯರ ಸಮಾಜ ಘಾತುಕತನವನ್ನು ಹಂತ ಹಂತವಾಗಿ ಅರ್ಥ ಮಾಡಿಕೊಂಡು ಈ ವಿಷ ವರ್ತುಲದಿಂದ ತಪ್ಪಿಸಿಕೊಂಡು ದೂರದ ಮುಂಬೈ ನಗರದಲ್ಲಿ ಉದ್ಯೋಗ ಹುಡುಕಿ ಹೊರಡುತ್ತಾನೆ ಮುಕುಂದ. ಅಲ್ಲಿಗೂ ಈ ದುಷ್ಟಕೂಟದ ವಕ್ರದೃಷ್ಟಿಗೆ ಸಿಕ್ಕಿ ದಕ್ಕಿದ್ದ ಉದ್ಯೋಗವನ್ನು ಕಳೆದುಕೊಳ್ಳುತ್ತಾನೆ. ಆದರೆ ಹಟದ ಭಾವನೆಯ ಈತ, ತಂದೆಯಿಂದ ದೂರ ಉಳಿಯುತ್ತಾನೆ.

ಮಗಳನ್ನು ಕಳೆದುಕೊಂಡು, ಸಂಪನ್ನ ಮಗನಿಂದ ದೂರವಾದ ಆನಂದರಾಯನಿಗೂ ಹಾಗೂ ಗಂಗಾಧರ ಶಾಸ್ತ್ರಿಗಳಿಗೂ ಕ್ರಮೇಣ ಪಶ್ಚಾತ್ತಾಪ ಬೆಳೆದು, ತಮ್ಮ ವಿರೋಧಿಗಳನ್ನು ನಾಶಪಡಿಸಲು ಬಳಸುತ್ತಿದ್ದ [illegible] ಗಂಗಾಧರ ಶಾಸ್ತ್ರಿ ಹಾಗೂ ಮುರಳೀಧರನೆಂಬುವನನ್ನು ಮುಗಿಸಿ ; ಬದುಕಿನ ಮೌಲ್ಯಗಳಿಗಾಗಿ, ಆದರ್ಶ ತತ್ವಗಳಿಗಾಗಿ, ಪವಿತ್ರ ಪ್ರೀತಿಗಾಗಿ ಶ್ರೀಮಂತಿಕೆಯನ್ನು ತೃಣವೆಂದು ಭಾವಿಸಿ ನಾನಾ ಕಷ್ಟಕೋಟಲೆಗಳನ್ನು ಅನುಭವಿಸಿ ಮಾನವೀಯತೆಯನ್ನು ಮೈಗೂಡಿಸಿಕೊಂಡಿದ್ದ ಮಗನಿಗೆ ತನ್ನೆಲ್ಲ ಸಂಗತಿ ತಿಳಿಸಿ ; ಒಪ್ಪಿದ್ದ ಹೆಣ್ಣನ್ನು ಕೈಹಿಡಿಯಲು ಅನುಮತಿ ನೀಡಿ, ತಾನು ಮಾಡಿದ ತಪ್ಪಿಗೆ ಶಿಕ್ಷೆ ಅನುಭವಿಸಲು

ಪೋಲೀಸರ ಬಂಧಿಯಾಗುವುದರೊಂದಿಗೆ ಈ ಕಾದಂಬರಿ ಮುಗಿಯುತ್ತದೆ. ಅಂದರೆ ಕೊನೆಗಾದರೂ ದುಷ್ಟಕೂಟಕ್ಕೆ ಸೋಲುಂಟಾಗಿ ಶ್ರೇಷ್ಠತೆಗೆ ಜಯ ಲಭಿಸುತ್ತದೆ.

"ಸ್ವರ ಮೇಳ" ಪ್ರಕಟವಾದ ನಾಲ್ಕು ವರ್ಷದ ತರುವಾಯ ಅಂದರೆ 1980 ರಲ್ಲಿ, ಪುಸ್ತಕ ರೂಪದಲ್ಲಿ ಹೊರ ಬಂದ ಕಾದಂಬರಿ "ಮಂಥನ". ಇದೂ ಕೂಡ ಪ್ರಕಟಣೆಗೆ ಪೂರ್ವ "ಪ್ರಜಾಮತ"ದಲ್ಲಿ ಓದುಗರಿಗೆ ಪರಿಚಯವಾಗಿತ್ತು. ಈ ಕಾದಂಬರಿ 'ಸ್ವರಮೇಳ'ಕ್ಕಿಂತ ಗಾತ್ರದಲ್ಲಿ ಚಿಕ್ಕದು, ವಸ್ತುವಿನ ಹಿನ್ನೆಲೆಯಲ್ಲಿ ಸಾಮಾನ್ಯವಾದದ್ದು. ಸರಸ ಹಾಗೂ ಸಂತೃಪ್ತವಾದ ಕೌಟುಂಬಿಕ ಚಿತ್ರಣ ಉಳ್ಳದ್ದು. ಗಂಡು-ಹೆಣ್ಣಿನ ಮಾನಸಿಕ ಘರ್ಷಣೆಗೆ ಸೀಮಿತವಾಗಿರುವಂತಹದು.

ಉದ್ಯೋಗಸ್ಥ ಸುಬ್ರಹ್ಮಣ್ಯ ಅಯ್ಯರ್ ಅವರಿಗೆ ಒಪ್ಪುವಂಥ ಧರ್ಮಪತ್ನಿ ಅಲಮೇಲಮ್ಮ. ಮದುವೆಗೆ ಬಂದು ನಿಂತಿರುವ ಉದ್ಯೋಗಸ್ಥ ಮಗನಿದ್ದರೂ ಈ ದಂಪತಿಗಳ ಸರಸ ದಾಂಪತ್ಯಕ್ಕೆ ಎಣೆಯೇ ಇಲ್ಲ. ಇವರ ಪುತ್ರನೇ ನಾಗರಾಜ. ಸುಂದರ, ಎಂ.ಕಾಂ.ನಲ್ಲಿ ಫಸ್ಟ್ ರ್‍ಯಾಂಕ್ ಗಳಿಸಿರುವ ವಿದ್ಯಾವಂತ. ಬ್ಯಾಂಕ್ ಒಂದರ ಮ್ಯಾನೇಜರ್. ಜೊತೆಗೆ ತನ್ನ ಸಂಸ್ಥೆಯ ಅಪೇಕ್ಷೆ ಮೇರೆಗೆ ತನಗೆ ಪ್ರಿಯವೂ ಎನಿಸಿರುವ "ಬ್ಯಾಂಕ್ ವ್ಯವಹಾರ ಮತ್ತು ಸಾರ್ವಜನಿಕ ಸಂಬಂಧ" ಎಂಬ ಒಂದು ಸಂಶೋಧನಾತ್ಮಕ ಗ್ರಂಥ ರಚಿಸಲು ಕೈಹಾಕಿದ ಸಾಹಸಿ. ಇಂಥ ಸ್ಥಿತಿಯಲ್ಲಿ ತಾನೊಂದು ಕಡೆ, ತಂದೆತಾಯಿಗಳು ಒಂದು ಕಡೆ ನಿಲ್ಲಬೇಕಾಗುತ್ತದೆ. ತನ್ನ ಕಾರ್ಯದಲ್ಲಿ ಯಶಸ್ವಿಯಾಗಲು ಜನಸಂಪರ್ಕವಿಟ್ಟುಕೊಂಡು, ನಿರಂತರ ಅಧ್ಯಯನ ಹಾಗೂ ಓಡಾಟದಲ್ಲಿ ತೊಡಗಿ ಊಟ ತಿಂಡಿ ನಿದ್ರೆಗಳಿಗೆ ನಿರ್ಲಕ್ಷ್ಯ ತಾಳುತ್ತಾನೆ. ಮಗ ಕೃಶನಾಗಿ ಸೊರಗುತ್ತಿರುವುದನ್ನು ಕಂಡು ಚಿಂತೆಗೀಡಾದ ತಂದೆ ತಾಯಿಗಳು ಮದುವೆ ಮಾಡುವುದರಿಂದ ಈ ಸಮಸ್ಯೆ ದೂರವಾದೀತೆಂದು ನಿರ್ಧರಿಸು ತ್ತಾರೆ. ತಮ್ಮ ಮನೆತನ, ಪ್ರತಿಷ್ಠೆ ಹಾಗೂ ಅಂತಸ್ತುಗಳಿಗೆ ತಕ್ಕಂತೆ ವಧುವಿಗಾಗಿ ಹುಡುಕಾಟ ನಡೆಸುತ್ತಾರೆ. ಅನಿರೀಕ್ಷಿತವಾಗಿ ರೈಲಿನಲ್ಲಿ ಪರಿಚಯವಾದ ಮದ್ರಾಸ್‌ನ ಮುರುಗನ್‌ನ ಮಗಳು ಜಯಂತಿಯನ್ನು ಸೊಸೆಯನ್ನಾಗಿ ಮಾಡಿಕೊಳ್ಳುತ್ತಾರೆ.

ಜಯಂತಿ ಸುಂದರಿ. ಕಲಿತವಳು, ಮದ್ರಾಸಿನಲ್ಲಿ ಬೆಳೆದವಳು. ಪ್ರೇಮ ಕಾಮದ ಕ್ರೇಜಿಗೊಳಗಾದವಳು. ಗಂಡನೊಂದಿಗೆ ಸ್ವಚ್ಛಂದ ಸುಖ ಸವಿಯಬೇಕೆಂಬ ಕನಸು ಕಟ್ಟಿದವಳು. ಸದಾ ತುಟಿಗೆ ರಂಗು, ಮುಖಕ್ಕೆ ಸ್ನೋ ಪೌಡರ್, ಆಕರ್ಷಣೀಯ ಪಾರದರ್ಶಕ ಉಡುಗೆ ತೊಡುಗೆ, ಒಮ್ಮೊಮ್ಮೆ ರಾತ್ರಿ ವೇಳೆಯಲ್ಲಿ ನಗ್ನರೂಪಗಳಿಂದ ಗಂಡನ ಮೇಲೆ ಬಿದ್ದು ತನ್ನ ಪ್ರೇಮ ಅನ್ನುವುದಕ್ಕಿಂತ ಕಾಮದಾಹ ನೀಗಿಸಿಕೊಳ್ಳಲು ತಹತಹಿಸುವ ಉನ್ಮಾದದವಳು. ಆದರೆ ಈಕೆಯ

ಗಂಡನಾದ ನಾಗರಾಜ ಹರೆಯುದವನಾದರೂ ಹೆಂಡತಿಯಷ್ಟು ಪ್ರೀತಿ ಪ್ರಣಯಗಳಿಗೆ ಪ್ರಾಮುಖ್ಯತೆ ನೀಡಿದವನಲ್ಲ. ಹಾಗಂತ ಈತನೇನೂ ವಿರಕ್ತನಲ್ಲ. ಆದರೆ ಇದಕ್ಕಿಂತ ಮಿಗಿಲಾದದ್ದು ತನ್ನ ಸಂಶೋಧನಾ ಕಾರ್ಯ ಎಂದು ಭಾವಿಸಿದ್ದ. ಹೀಗಿದ್ದರೂ ತನ್ನನ್ನು ನಂಬಿ ಕೈಹಿಡಿದಿರುವ ತನ್ನ ಹೆಂಡತಿಗ ನಿರಾಸೆಯಾಗಬಾರದೆಂದು ತನ್ನ ಅಧ್ಯಯನದ ಮನಸ್ಥಿತಿಯಲ್ಲೂ ಅವಳನ್ನು ರಮಿಸುತ್ತಿದ್ದ. ಆದರೆ ಆಕೆಯ ನಿರೀಕ್ಷೆಯ ಎತ್ತರಕ್ಕೆ ಮುಟ್ಟುವಲ್ಲಿ ವಿಫಲನಾಗುತ್ತಾನೆ. ಆಗ ದಂಪತಿಗಳ ಮನಸ್ಸು ಒಡೆದು ಸಂಸಾರದಲ್ಲಿ ಅತೃಪ್ತಿ, ಅಸಹನೆ ಹಾಗೂ ಅಶಾಂತಿ ಎಲ್ಲೆ ಮೀರುತ್ತದೆ.

ಹರೆಯದ ಉತ್ತುಂಗದಲ್ಲಿದ್ದು, ಮಾನಸಿಕವಾಗಿ ಪ್ರಬುದ್ಧಳಲ್ಲದ ಜಯಂತಿಗೆ ಹಣ, ಆಸ್ತಿಗೆ ಕೊರತೆ ಇರಲಿಲ್ಲ. ಯೌವ್ವನದ ಹುಚ್ಚುಹೊಳೆಯಲ್ಲಿ ಸಿಕ್ಕಿರುವ ಇವಳ ಪರಿಸ್ಥಿತಿಯನ್ನು ಊಹಿಸಿದ ಇವಳ ಹಳೇ ಗೆಳತಿ ಜಾಸ್ಮಿನ್ ಹಾಗೂ ಜಾಸ್ಮಿನ್‌ಳ ಅಣ್ಣ ಡೇವಿಡ್ ವಂಚಿಸಲು ಮುಂದಾಗುತ್ತಾರೆ.

ಜಾಸ್ಮಿನ್ ಆದರೂ ಪ್ರೇಮದ ಜಂಜಾಟಕ್ಕೆ ಸಿಕ್ಕಿ ಈಗಾಗಲೇ ಪೆಟ್ಟು ತಿಂದು ಮೈಚಳಿ ಬಿಟ್ಟು ಸ್ವಚ್ಛಂದ ಬದುಕಿಗೆ ಧುಮುಕಿರುವವಳು. ಸೋದರ ಮದುವೆಯಾಗಿಲ್ಲದ ಸುಂದರ. ಇವರನ್ನು ನಂಬಿದಷ್ಟು ತನ್ನ ಗಂಡನನ್ನು ನಂಬದ ಜಯಂತಿ ಹಟ ಹಾಗೂ ಸ್ವಾಭಿಮಾನದಿಂದ ಗಂಡನನ್ನು ಗೆಲ್ಲಬೇಕೆಂಬ ನಿಲುವಿನಲ್ಲಿ ಸಿಲುಕುತ್ತಾಳೆ.

ನಾಗರಾಜ ಇದಾವುದಕ್ಕೂ ಮಹತ್ವ ನೀಡದೆ ತನ್ನ ಸಂಶೋಧನ ಗ್ರಂಥ ಪೂರ್ಣಗೊಳಿಸುತ್ತಾನೆ. ಇದನ್ನು ಪರಾಮರ್ಶಿಸಿದ ಗೆಳೆಯರು, ಹಿರಿಯ ಅಧಿಕಾರಿಗಳು ಪ್ರಶಂಸಿಸಿದ್ದರು. ರಿಜರ್ವ್ ಬ್ಯಾಂಕಿನ ಗೌರ್ನರ್ ಇದಕ್ಕೆ ಮುನ್ನುಡಿ ಬರೆದು ಕೊಡಲು ಒಪ್ಪಿರುತ್ತಾರೆ. ಇಂಥ ಪರಿಸ್ಥಿತಿಯಲ್ಲೂ ಜಯಂತಿಯ ನಡುವಳಿಕೆ ಬದಲಾಗಲಿಲ್ಲ. ಗಂಡನ ಯಶಸ್ಸಿನ ಲಾಭ ಗಣಿಸಲಿಲ್ಲ. ಏಕೆಂದರೆ ಇವಳ ಆಲೋಚನೆ, ಆನಂದವೇ ಬೇರೆ. ಇದಕ್ಕೆ ಸ್ಪಂದಿಸದೆ, ತನ್ನ ಸಂಶೋಧನಾ ಕಾರ್ಯಕ್ಕೆ ಟೈಪಿಂಗ್ ಕಲಿಯುವುದರ ಮೂಲಕ ನೆರವಾಗಬೇಕೆಂದು ಹೇಳಿದಾಗ ತಾನು ತೌರುಮನೆಗೆ ನಡೆಯುತ್ತಾಳೆ. ಅಲ್ಲಿ ತನ್ನ ಗಂಡನ ಮೇಲೆ ತಂದೆತಾಯಿಗಳ ಬಳಿ ದೂರು ಹೇಳುತ್ತಾಳೆ. ಅದನ್ನು ಅವರು ನಂಬುತ್ತಾರೆ, ಅಷ್ಟೇ ಅಲ್ಲ ನಾಗರಾಜನ ತಂದೆತಾಯಿಗಳಿಗೂ ತಲುಪಿ ಅವರು ನಾಗರಾಜನ ವಿರುದ್ಧ ನಿಲ್ಲುತ್ತಾರೆ.

ಇತ್ತ ಕಡೆ ನಾಗರಾಜ ತನ್ನ ಕೃತಿಯನ್ನು ಮುದ್ರಣಕ್ಕೆ ಸಿದ್ಧಗೊಳಿಸುವಲ್ಲಿ ಓರ್ವ ಸುಂದರಿಯನ್ನು ಟೈಪ್ ಮಾಡಲು ನೇಮಿಸಿಕೊಳ್ಳುತ್ತಾನೆ. ಇದೇ ವೇಳೆಗೆ ಇವನ ಬ್ಯಾಂಕಿನಲ್ಲಿ ಪ್ರೊಬೇಷನರ್ ಆಫೀಸರ್ ರೇಖಾ ಮಾನವೀಯತೆಯಿಂದ

ಅನುಕಂಪಗೊಂಡು ನೀಡಿದ ಸಹಕಾರವನ್ನು ಸಂಕೋಚದಿಂದ ಸ್ವೀಕರಿಸುತ್ತಾನೆ. ಈ ವೇಳೆಯಲ್ಲಿ ಜಾಸ್ಮಿನ್ ಮತ್ತು ಡೇವಿಡ್ ಇಬ್ಬರೂ ನಾಗರಾಜ ಬೇರೆ ಹೆಣ್ಣುಗಳೊಂದಿಗೆ ಚಕ್ಕಂದವಾಡುತ್ತ ನಿನ್ನನ್ನು ಮರೆಯುತ್ತಾನೆಂದು ಕಥೆ ಕಟ್ಟಿ ಫೋಟೊಗಳನ್ನು ತೆಗೆದು ತೋರಿಸಿ ಜಯಂತಿಯ ಮನಸ್ಸು ಕೆಡಿಸುತ್ತಾರೆ.

ಇಂಥ ಗಂಡನೊಂದಿಗೆ ಸಂಸಾರ ಸಾಧ್ಯವಿಲ್ಲವೆಂದು ಮಾನನಷ್ಟ ಮೊಕದ್ದಮೆ ಹೂಡಿ ಹಣ ಪಡೆಯಲು ಚಲುವರಾಜ ಎಂಬ ಲಫಂಗ ಲಾಯರ್ ಮುಖಾಂತರ ಪರಿಹಾರಧನಕ್ಕೆ ಜಯಂತಿ ಮತ್ತು ಈಕೆಯ ಸುತ್ತಲಿನ ವ್ಯಕ್ತಿಗಳು ಪ್ರಯತ್ನಿಸಿ ಸೋಲುತ್ತಾರೆ. ಕೊನೆಗೆ ವಿವಾಹ ವಿಚ್ಛೇದನಕ್ಕೂ ಹುರಿದುಂಬಿಸುತ್ತಾರೆ.

ಏನಾದರೂ ಮಾಡಿ ಜಯಂತಿಯ ಸಂಪತ್ತನ್ನು ದೋಚಬೇಕೆಂಬ ಹುನ್ನಾರದಿಂದ ಜಾಸ್ಮಿನ್ ತನ್ನ ಸೋದರ ಡೇವಿಡ್‌ಗೆ ಜಯಂತಿಯನ್ನು ಮದುವೆ ಮಾಡಿಸಬೇಕೆಂಬ ಕುಟಿಲೋಪಾಯದಿಂದ ಈ ಎಲ್ಲ ಕಸರತ್ತುಗಳನ್ನು ಮಾಡಿಸುತ್ತಾಳೆ.

ಕೋರ್ಟಿನಲ್ಲಿ ನಾಗರಾಜನ ಯುವ ವಕೀಲ ಡಿಕ್ರೂಸ್‌ನಿಂದಾಗಿ ಜಾಸ್ಮಿನ್‌ಳ ತಂತ್ರ ಫಲಿಸಲಿಲ್ಲ. ಆಗ ಜಯಂತಿ ಅಪಮಾನಿತಳಾಗಿ ಎಲ್ಲರಿಂದ ತಪ್ಪಿಸಿಕೊಂಡು ಮದ್ರಾಸ್‌ಗೆ ಟ್ಯಾಕ್ಸಿಯಲ್ಲಿ ಹೊರಡುತ್ತಾಳೆ. ಕತ್ತಲಾಗುತ್ತದೆ. ಮಾರ್ಗ ಮಧ್ಯದಲ್ಲಿ ಕಾರು ಕೆಡುತ್ತದೆ. ಆಗ ಅನಿರೀಕ್ಷಿತವಾಗಿ ಜಯಂತಿಯ ಅದೃಷ್ಟವೇನೋ ಎಂಬಂತೆ ಮದ್ರಾಸ್ ಕಡೆ ಹೋಗುವ ಕಾರೊಂದು ದೊರಕುತ್ತದೆ. ಅದರಲ್ಲಿದ್ದವಳೆ ನಾಗರಾಜನ ಸಂಶೋಧನಾ ಕಾರ್ಯದಲ್ಲಿ ನೆರವಾಗಿದ್ದ ಪ್ರೊಬೇಷನರಿ ಅಧಿಕಾರಿ ರೇಖಾ. ಈ ರೇಖಾಳಿಂದ ನಾಗರಾಜನ ಗುಣ ಸ್ವಭಾವದ ಸತ್ಯ ಸಂಗತಿ ತಿಳಿಯುತ್ತದೆ. ಆದರೆ ಇದನ್ನು ಒಪ್ಪಿಕೊಳ್ಳಲು ಜಯಂತಿಗೆ ಇನ್ನೂ ಮನಸ್ಸು ಹದವಾಗಿರಲಿಲ್ಲ.

ತನ್ನ ತಂದೆ ಕೊಡಿಸಿದ್ದ ಬಂಗಲೆಯಲ್ಲಿ ಜಯಂತಿ ಉಳಿದಿದ್ದು, ಆ ಆ ಬಂಗಲೆಯ ಔಟ್‌ಹೌಸಿನಲ್ಲೆ ಜಾಸ್ಮಿನ್ ಮತ್ತು ಡೇವಿಡ್ ಮಿತ್ರರು ಇದ್ದದ್ದು. ಈ ಮನೆವಿಳಾಸಕ್ಕೆ ತನ್ನ ಗಂಡ ಮೂರು ತಿಂಗಳ ಹಿಂದೆ ಬರೆದಿದ್ದ ಕಾಗದ ಜಾಸ್ಮಿನ್ ಕೈಗೆ ಸಿಕ್ಕಿ ಸಚಿತ್ರ ಬೈಬಲ್‌ನಲ್ಲಿದ್ದದ್ದು ಪತ್ತೆಯಾಗುತ್ತದೆ. ಆದರಲ್ಲಿ ತನ್ನ ಗಂಡ ತನ್ನ ಬಗ್ಗೆ ಇಟ್ಟುಕೊಂಡಿದ್ದ ಅಪಾರ ಪ್ರೀತಿ ಹಾಗೂ ಕಲ್ಪನೆಗಳ ಸಂಗತಿ ತಿಳಿಯುತ್ತಾಳೆ. ಜೊತೆಗೆ ರೇಖಾಳ ಮಾತುಗಳು ನೆರವಾಗಿ ಗಂಡನ ಬಗ್ಗೆ ನಂಬಿಕೆ ತಾಳುವಂತಾಗುತ್ತದೆ.

ಅಷ್ಟರಲ್ಲಿ ಜಾಸ್ಮಿನ್ ತನ್ನ ಸೋದರ ಡೇವಿಡ್‌ನನ್ನು ಮದುವೆಯಾಗಲು ಒಪ್ಪದ ಜಯಂತಿಗೆ ಸಜಾತಿ ಗಂಡು ರಾಮದಾಸನೆಂಬುವನನ್ನು ಹುಡುಕಿ ತಂದು 'ಡೈವರ್ಸ್ ಸಿಕ್ಕಿದ ತಕ್ಷಣ ಮದುವೆಯಾಗು' ಎಂದು ಒಪ್ಪಿಸಲು ಯತ್ನಿಸುತ್ತಾಳೆ.

ಈಗ ಗೆಳತಿಯ ಕುಟಿಲೋಪಾಯ ಸಂಪೂರ್ಣವಾಗಿ ಅರಿತುಕೊಂಡು ತನ್ನ ತಂದೆಯಿಂದ ಬಂದ ಪತ್ರವೊಂದನ್ನು ಜಾಸ್ಮಿನ್‌ಗೆ ಜಯಂತಿ ತೋರಿಸಿ, "ನನ್ನ ತಂದೆ ಬೊಂಬಾಯಿಯಲ್ಲಿ ನನಗೊಂದು ಕೆಲಸ ಹೊಂಚಿದ್ದಾರಂತೆ. ಇಲ್ಲೆ ಯಾವ್ದಾದರೂ ಗಂಡೂ ಸಿಗುತ್ತೆ ಬಂದ್ಬಿಡು ಅಂತ ಬರ್ದಿದ್ದಾರೆ" ಎಂದು ತಿಳಿಸಿ, ಜಾಸ್ಮಿನ್, ಡೇವಿಡ್ ವಾಸವಿದ್ದ ತನ್ನ ಔಟ್‌ಹೌಸಿಗೆ ಬೇರೆ ಗೇಟು ಇಡಿಸುವ ಮುಖೇನ ಈವರೆವಿಗೂ ತನ್ನ ಬಾಳಿನಲ್ಲಿ ಧೂಮಕೇತುವಿನಂತಿದ್ದ ದುಷ್ಟರಿಂದ ಸಂಪೂರ್ಣ ಕಳಚಿಕೊಂಡು ಬೆಂಗಳೂರಿಗೆ ಬೃಂದಾವನ ಎಕ್ಸ್‌ಪ್ರೆಸ್ ಟ್ರೈನು ಹತ್ತುತ್ತಾಳೆ. ಟ್ರೈನಿನ ಓಟದೊಂದಿಗೆ ಗಂಡನ ಪತ್ರ ಓದುತ್ತ ಉಕ್ಕಿ ಬಂದ ಕಣ್ಣೀರನ್ನು ಒರೆಸಿಕೊಂಡು ತನ್ನ ಗಂಡನ ಹೆಸರಿಗೆ ತುಟಿ ಒತ್ತುತ್ತಾಳೆ. ಇಲ್ಲಿಗೆ ಈ ಕಾದಂಬರಿ ಮುಗಿಯುತ್ತದೆ.

ಈ ಎರಡೂ ಕಾದಂಬರಿಗಳಲ್ಲಿ ಘಟನೆಗಳು ಒಂದಾದ ಮೇಲೊಂದರಂತೆ ಸಿನಿಮಾ ದೃಶ್ಯಗಳು ತೇಲಿ ಹೋಗುವಂತೆ ಜರುಗುತ್ತವೆ. ಇಲ್ಲಿನ ಕುಟುಂಬದವರೆಲ್ಲ ಬರೀ ಕಾರು, ರೈಲು ವಿಮಾನಗಳಲ್ಲೇ ಓಡಾಡುವ ; ಪಾರ್ಟಿ ಪೇಯಗಳಲ್ಲೇ ಮುಳುಗೇಳುವ, ಹೆಣ್ಣು ಹಣಗಳಿಗಾಗಿಯೇ ಬಾಯ್ಬಿಟ್ಟಿರುವ, ವಾಸ್ತವಿಕ ಬದುಕನ್ನೇ ಮರೆತು ಅವಾಸ್ತವಿಕ ಬದುಕಿನ ಅಮಲಿನಲ್ಲೇ ತೇಲಾಡುವ ಲಕ್ಷಾಧಿಪತಿಗಳ ನಗರ ಜೀವನದ ಒಂದು ಮುಖವನ್ನು ನೇರವಾಗಿ ದರ್ಶನ ಮಾಡಿಕೊಡುತ್ತವೆ,

ಸಮಕಾಲೀನ ಸಿನಿಮಾರಂಗವನ್ನೇ ದೃಷ್ಟಿಯಲ್ಲಿರಿಸಿಕೊಂಡು ಬರೆದಂತಿರುವ ಈ ಕಾದಂಬರಿಗಳು ಕೆಲವು ಕಡೆ ಬೆರಗುಗೊಳಿಸುತ್ತವೆ.

ಯಾಂತ್ರಿಕ ಬದುಕಿನಿಂದ ನರಳಿ, ನಲುಗುತ್ತಿರುವ ಶ್ರೀಸಾಮಾನ್ಯನಿಗೆ ಸ್ವಲ್ಪ ಮಟ್ಟಿಗಾದರೂ ಬದುಕಿನ ಬಗ್ಗೆ ಭರವಸೆ ಮೂಡಿಸಿ, ಮನರಂಜನೆಯೊಂದಿಗೆ ಮನಸ್ಸಿಗೂ ಮಿದುಳಿಗೂ ಮುದ ನೀಡಬೇಕಾಗಿದ್ದ ಸಿನಿಮಾ ಮಾಧ್ಯಮ ಇತ್ತೀಚೆಗೆ ಹಣದ ಮೇಲೆ ಕಣ್ಣಿಟ್ಟು ದಿಢೀರ್ ಶ್ರೀಮಂತರಾಗುವವರ ಉದ್ಯಮವಾಗಿದೆ. ಕಲ್ಪನೆಗೆ ಎಟುಕದ, ಬದುಕಿನಲ್ಲಿ ದಕ್ಕದ, ಭ್ರಮೆಯಲ್ಲಿ ತೇಲಿಸುವ ಪಾಶ್ಚಾತ್ಯ ಸಂಸ್ಕೃತಿಯನ್ನು ಓಲೈಸಿ ಸ್ವಚ್ಛಂದತೆಯನ್ನು ಬಾಚಿ ತಬ್ಬಿಕೊಂಡಿರುವ ಹೃದಯಹೀನ ಶ್ರೀಮಂತ ಜನರ ಬದುಕೇ ಇಂದು ನಮ್ಮ ಚಲನಚಿತ್ರಗಳ ಕಥಾವಸ್ತುವಾಗಿದೆ. ಇಂಥಾ ಬದುಕನ್ನು ತಮ್ಮ ಬದುಕಿನಲ್ಲಿ ಕಾಣಲು ಸಾಧ್ಯವಿಲ್ಲದ ಮಧ್ಯಮ ವರ್ಗ ಹಾಗೂ ಮೂರನೇ ವರ್ಗದ ಜನರು ಕನಸಿನಂತೆ ಕಣ್ಮುಂದೆ ಜಾರಿ ಹೋಗುವ ಕಮರ್ಷಿಯಲ್ ಮೂವಿಗಳಿಗೆ ಮುತ್ತುತ್ತಾರೆ. ಅಂಥ ಜನಗಳಿಗಾಗಿಯೇ ರಚಿಸಿದಂತಿದೆ 'ಸ್ವರ ಮೇಳ' ಮತ್ತು 'ಮಂಥನ' ಕಾದಂಬರಿಗಳು.

ಬಟ್ವಾರೆ ಈ ಎರಡೂ ಕಾದಂಬರಿಗಳಲ್ಲಿ ಸಭ್ಯತೆಯ ಸೋಗಿನಲ್ಲಿ ಸಮಾಜವನ್ನು ವಂಚಿಸುವ ಜನರ ಬದುಕನ್ನು ಬೆತ್ತಲೆಗೊಳಿಸಿದ್ದಾರೆ. ಶ್ರೇಷ್ಠತೆಯ ಮಾನವತ್ವಕ್ಕೆ ಬೆಲೆ ನೀಡಿ ನಮ್ಮ ಪರಿಸರ ಹಾಗೂ ಸಂಸ್ಕೃತಿಯ ನೆಲೆಗಟ್ಟಿನಲ್ಲೇ ಅರಳಿ ನಿಂತ ಕಮಲಗಳಿಗೆ ನೆಲೆ ಒದಗಿಸಿದ್ದಾರೆ. ಕಥೆ ಗಂಭೀರವಾಗಿ, ಪ್ರೌಢವಾಗಿಲ್ಲದಿದ್ದರೂ ಗಾಳಿಗೆ ತೂರಿ ಬಿಡುವ ಟೊಳ್ಳಾಗದೆ ಆಸಕ್ತರ ಗಮನ ಸೆಳೆಯುತ್ತವೆ. ಸನ್ನಿವೇಶಗಳ ನಿರೂಪಣೆ, ಪಾತ್ರಗಳ ಸೃಷ್ಟಿ, ಸರಳ ಶೈಲಿ ಹಾಗೂ ಹದವರಿತ ಭಾಷೆಯಿಂದ ಲೇಖಕರು ಓದುಗರನ್ನು ಸೆರೆಹಿಡಿಯುತ್ತಾರೆ.



# ಎರಡು ಕಥಾ ಸಂಕಲನಗಳು

—ಬಾಬು ಕೃಷ್ಣಮೂರ್ತಿ

ಶ್ರೀ ಎಸ್. ವಿ. ಶ್ರೀನಿವಾಸರಾಯರು ಸುಮಾರು ನಾಲ್ಕು ದಶಕಗಳಿಂದ ಬರೆಯುತ್ತಿರುವ ಲೇಖಕರು. ಸಾಮಾಜಿಕ ಕಾದಂಬರಿಗಳು, ಕ್ರೈಂ ಕಾದಂಬರಿ, ಐತಿಹಾಸಿಕ ಕಾದಂಬರಿ, ಸಣ್ಣ ಕಥೆಗಳು, ಮಕ್ಕಳ ಸಾಹಿತ್ಯ ಹೀಗೆ ತಮಗೆ ಹಿತವೆನಿಸುವ ಪ್ರಕಾರಗಳನ್ನು ಆಯ್ದುಕೊಂಡು ಬರೆಯುತ್ತಲೇ ಬಂದಿದ್ದಾರೆ.

ಅವರ ಆರಂಭದ ದಿನಗಳ ಸಾಹಿತ್ಯ ಕೃಷಿಯನ್ನು ಗುರುತಿಸಲು ಸಹಾಯಕ ವಾಗುವ ಎರಡು ಕೃತಿಗಳು "ಗಾಳಿ ಮೋಡದ ಗೆಳತಿ" ಮತ್ತು "ಕಾಗೆಯ ಗೂಡಿನಲ್ಲಿ ಕೋಗಿಲೆ ಹಾಡಿತು" ಎಂಬ ಎರಡು ಕಥಾ ಸಂಕಲನಗಳು "ಗಾಳಿ ಮೋಡದ ಗೆಳತಿ" ರಾಯರ ಮೊದಲ ಪ್ರಕಟಿತ ಕಥಾ ಸಂಕಲನ. ಅದು ಬೆಳಕು ಕಂಡದ್ದು ೧೯೬೨ರ ಆಗಸ್ಟ್ ತಿಂಗಳಿನಲ್ಲಿ. ಸುಮಾರು ಹತ್ತು ವರ್ಷಗಳ ನಂತರ ೧೯೭೩ರ ಜನವರಿಯಲ್ಲಿ ಎರಡನೆಯ ಕಥಾ ಸಂಕಲನ "ಕಾಗೆಯ ಗೂಡಿನಲ್ಲಿ ...." ಪ್ರಕಟವಾಯಿತು. ಈ ಕಥೆಗಳು ಮೊದಲೇ ಕನ್ನಡದ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದಂತಹವು. ಮೊದಲ ಕಥಾ ಸಂಕಲನದ ಕಥೆಗಳು ೧೯೬೨ಕ್ಕೆ ಮೊದಲು ಆಗಾಗ ಪ್ರಕಟವಾಗಿರು ವುದಾದರೆ ಎರಡನೆಯ ಕಥಾಸಂಕಲನದ ಕಥೆಗಳು ೧೯೬೨ ರಿಂದ ೧೯೭೩ರ ದಶಕದಲ್ಲಿ ಪ್ರಕಟವಾಗಿರುವುವು.

"ಗಾಳಿ ಮೋಡದ ಗೆಳತಿ"ಯಲ್ಲಿ ೮ ಕಥೆಗಳಿವೆ (ನನಗೆ ಕೊಟ್ಟಿರುವ ಪ್ರತಿಯಲ್ಲಿ) "ಕಾಗೆಯ ಗೂಡಿನಲ್ಲಿ........" ಸಂಕಲನದಲ್ಲಿ ೧೧ ಕಥೆಗಳು. ಒಟ್ಟು ೧೮. ಇವುಗಳಲ್ಲಿ ಒಂದು "ವೈಜ್ಞಾನಿಕ ಪತ್ತೇದಾರಿ" ಗುಂಪಿಗೆ ಸೇರುವುದು. ಇನ್ನೊಂದು ಐತಿಹಾಸಿಕ ವಸ್ತುವುಳ್ಳದ್ದು. ಮಿಕ್ಕ ಕಥೆಗಳು ಸಾಮಾಜಿಕ ಅಥವಾ ಕೌಟುಂಬಿಕ ಕಥೆಗಳ ಗುಂಪಿಗೆ ಸೇರುವಂತಹವು.

"ಗಾಳಿ ಮೋಡದ ಗೆಳತಿ" ಕಥಾ ಸಂಕಲನದ ಮೊದಲನೆ ಕಥೆ ಅದೇ ಹೆಸರಿನದು. ಒಬ್ಬ ಫ್ಯಾನ್ಸಿ ವಸ್ತುಗಳನ್ನು ಮಾರಾಟ ಮಾಡುವ ಸಣ್ಣ ವ್ಯಾಪಾರಿಯ

ಮನೋ ವ್ಯಾಪಾರವನ್ನು ದಾಖಲಿಸುತ್ತಾ ಹೋಗುವ ಈ ಕಥೆ ಅವನ ಗತ ಜೀವನದ ಕೆಲವು ಘಟನೆಗಳನ್ನು ಹೇಳುತ್ತದೆ. ಅವನ ಅಂಗಡಿಗೆ ಬರುವವರು ತರಹವಾರಿಯ ಜನ. ಅರಳು ಹುರಿದಂತೆ ಮಾತನಾಡುತ್ತಾ ವ್ಯಾಪಾರ ನಡೆಸುವ ಇವನು ತೀರಾ ಭಾವ ಜೀವಿ. ಆಗಾಗ ಭಾವ... ಪ್ರಪಂಚದಲ್ಲಿ ಲೀನವಾಗಿಬಿಡುತ್ತಾನೆ. ಒಂದೊಂದು ವಸ್ತು, ಒಂದೊಂದು ವ್ಯಕ್ತಿ ಅವನಿಗೆ ಒಂದೊಂದು ನೆನಪಿಗೆ ಇಂಬು ನೀಡುತ್ತದೆ. ಅವನ ಗಲ್ಲಾ ಪೆಟ್ಟಿಗೆಯಲ್ಲಿರುವ "ಮೆಣಸು ಬಳೆ" ಮತ್ತು ಕಾರಿನಲ್ಲಿ ಬರುವ ಹೆಂಗಸು, ತನ್ನ ತೀರಿಹೋದ ಹೆಂಡತಿ ಶಾಂತಳನ್ನು ನೆನಪಿಸಿಕೊಳ್ಳಲು ಕಾರಣವಾಗುತ್ತದೆ. ಕಾರಿನಲ್ಲಿ ತನ್ನ ಶಾಂತಳೇ ಬಂದಿದ್ದಾಳೆಂಬ ಭ್ರಮೆಗೂ ಒಳಗಾಗುತ್ತಾನೆ. ಅವಳು ತನ್ನ ಅಂಗಡಿಗೇ ಬರುತ್ತಾಳೆಂಬ ಅವನ ತೀವ್ರ ಆಶಯ ಅವಳು ಪಕ್ಕದ ಅಂಗಡಿಗೆ ಹೋದಾಗ ಛಿದ್ರವಾಗುತ್ತದೆ. ಅವಳು ಕಾರು ಹತ್ತಿ ಹೊರಟಾಗ ಅವನ ಗಮನ ಅವಳ ಕೈಗಳ ಕಡೆಗೆ ಹೊರಳಿದಾಗ ಅಲ್ಲೂ "ಮೆಣಸು ಬಳೆ"ಗಳೇ ಕಾಣಬೇಕೆ !

ಈ ಸಂಕಲನದ ಎರಡನೆಯ ಕಥೆ, ಮದುವೆ ವಯಸ್ಸಿನ ಯುವಕನೊಬ್ಬ ತನ್ನ ಬಾಳ ಸಂಗಾತಿಯನ್ನು ಆಯ್ದುಕೊಂಡ ಕಥೆ. ಅನಸೂಯ ಎಂಬ ಹೆಣ್ಣನ್ನು ನೋಡ ಹೋದಾಗ ಅವನ ಮನಸ್ಸು ಈ ಹಿಂದೆ ಅಣ್ಣನೊಂದಿಗೆ ಶ್ರೀಮಂತರ ಮಗಳು ರಮಾಳನ್ನು ನೋಡಹೋದದ್ದು, ತಾಯೊಂದಿಗೆ ಹಳ್ಳಿಯ ಚೆಲುವೆ ಗೌರಿಯನ್ನು ನೋಡಹೋದದ್ದು ಅವನ ಮನಃ ಪಟಲದಮೇಲೆ ಹಾದು ಹೋಗುತ್ತದೆ.ಯಾರನ್ನು ಆಯ್ದುಕೊಳ್ಳುವುದು ಎಂಬ ಪ್ರಶ್ನೆ ಎದುರಾಗುತ್ತದೆ. ಕೊನೆಗೆ ಅವನ ಮನಸ್ಸು ರಮಾ ಅಥವಾ ಗೌರಿಯರಲ್ಲಿದ್ದ ಯಾವ ವಿಶೇಷತೆಗಳೂ ಇಲ್ಲದಿದ್ದ ಅನಸೂಯಳಿಗೇ ಮಾರುಹೋದಾಗ ತಾನು ಯಾವ ಮಂತ್ರಶ್ರೀಗೆ ಒಳಗಾಗಿ ಈ ಆಯ್ಕೆ ಮಾಡಿದೆ ಎಂದು ಅಚ್ಚರಿಗೊಂಡಾಗ "ಅವಳ ನಗುವ ನಯನ" ಅವನ ಕಣ್ಣ ಮುಂದೆ ಹೊಳೆಯುತ್ತದೆ.

ಯುಗಾದಿ ಹಬ್ಬವನ್ನು ಆಚರಿಸಬೇಕು. ಇದು ಬಡ ರೈತ ಕರಿಯನ ಕುಟುಂಬದವರೆಲ್ಲರ ಆಸೆ. ಆದರೆ ಗುಡಿಸಿಲಿನಲ್ಲಿ ಬಡತನದ ತಾಂಡವ, ಹೊಸ ಬಟ್ಟೆ, ಒಬ್ಬಟ್ಟು ಹೇಗೆ ಬರಬೇಕು ? ಅದಕ್ಕೆ ಕರಿಯ ಕಂಡುಕೊಳ್ಳುವ ಪರಿಹಾರ ತನ್ನ ಬಳಿಯಿದ್ದ ಎರಡು ಎತ್ತುಗಳಲ್ಲಿ ಒಂದನ್ನು ಮಾರುವುದು. ಕರಿಯನಿಗೂ ಆ ಮೂಗೆತ್ತುಗಳಿಗೂ ಇರುವ ಭಾವಬಂಧನವನ್ನು ಓದುಗರ ಮನಸ್ಸುಗಳನ್ನು ತಟ್ಟುವಂತೆ ಚಿತ್ರಿಸುವ ಪ್ರಯತ್ನ ಮಾಡಲಾಗಿದೆ "ಯುಗಾದಿ" ಕಥೆಯಲ್ಲಿ.

ಕಥೆಗಾರನು ರಸ್ತೆಯಲ್ಲಿ ಚಿತ್ರ ಬರೆಯುತ್ತಿದ್ದ ಒಬ್ಬ ವ್ಯಕ್ತಿಯನ್ನು ನೋಡು

ತ್ತಾನೆ. ವಿಚಿತ್ರ ನಡವಳಿಕೆಯುವನು. ಹಿಂದೆ ಅದೇ ವ್ಯಕ್ತಿಯನ್ನು ನೋಡಿದ ನೆನಪಾಗುತ್ತದೆ, ಹುಚ್ಚಾಸ್ಪತ್ರೆಯಲ್ಲಿ. ಅವನು ವೈದಿಕರಾದ ಸುಬ್ಬಾ ಜೋಯಿಸರ ಮಗ ರಾಜಣ್ಣ. ಅವನಿಗೆ ಮೊದಲಿನಿಂದಲೂ ಕಲೆಯಲ್ಲಿ ಆಸಕ್ತಿ. ಅಕ್ಕಸಾಲಿಗ ಪೊನ್ನಂಜಾಚಾರಿಯ ಬಳಿ ಶಿಲ್ಪ, ಚಿತ್ರಕಲೆ ಅಭ್ಯಸಿಸುತ್ತಾನೆ. ಜೊತೆಯಲ್ಲಿ ಪೊನ್ನಂಜಾಚಾರಿಯ ತಂಗಿಯ ಮಗಳು ಶಾರದೆಯಲ್ಲಿ ಅನುರಕ್ತನಾಗುತ್ತಾನೆ. ತಂದೆ ಸುಬ್ಬಾ ಜೋಯಿಸರು ಇದನ್ನು ವಿರೋಧಿಸುತ್ತಾರೆ. ಇನ್ನೊಂದು ಹುಡುಗಿಯೊಂದಿಗೆ ಅವನ ವಿವಾಹ ನಿಶ್ಚಯವಾಗುತ್ತದೆ. ತನ್ನನ್ನು ತಿರಸ್ಕರಿಸಿದ ರಾಜಣ್ಣನ ಮೇಲೆ ಕುಪಿತಳಾದ ಶಾರದೆ "ತಾನು ಅವನ ವಿದ್ಯೆಗೆ ಗುರುವೆಂದು ತನಗೆ ಗುರುದಕ್ಷಿಣೆಯಾಗಿ ಅವನು ಕಲೆಯನ್ನು ತ್ಯಜಿಸ"ಬೇಕೆಂದು ಹೇಳಿ ರಾಜಣ್ಣನ ಮತಿಭ್ರಾಂತಕ್ಕೆ ಕಾರಣ ಳಾಗುತ್ತಾಳೆ. ಇದು "ಹುಚ್ಚು ಹೊಳೆ"ಯ ಕಥೆ. "ಬದುಕು ಬೇಕಿತ್ತು"ವಿನ ರಾಮು ಹೆಳವ. ಅವನಿಗೆ ಅಣ್ಣನ ಅಸಡ್ಡೆ, ಚಿಕ್ಕಪ್ಪನ ಅಸಹನೆ, ಭಾವನ ಬೇಸರಿಕೆ, ಸುನಂದಳ ತಿರಸ್ಕಾರ ಮುಂತಾದವೇ ಜೀವನದಲ್ಲಿ ಸಿಗುವುದು. ಕೀಳರಿಮೆ, ಸೋಲುಗಳ ಪರಿಣಾಮ ಕುಡಿತಕ್ಕೆ ಮೊರೆ. ಸಾವಿನೊಂದಿಗೆ ಸರಸಮಾಡುವ ಮನಸ್ಸು. ಸಾವೇ ಹೆಚ್ಚು ಅಪ್ಯಾಯಮಾನ ಎನ್ನುವ ನಿರಾಶವಾದಿಯ ಕಥೆ ಇದು.

"ನನ್ನ ಮೊದಲ ಪತ್ರ" ಮತ್ತು "ನಾನು ಬರೆದ ಕಥೆ" ಇವುಗಳಲ್ಲಿ ಕಥೆಗಾರ ತಾನೊಂದು ಕೆಲಸವನ್ನು ಮಾಡಬಯಸಿದರೂ ಆಲೋಚನಾ ತರಂಗಗಳು ಅವನನ್ನು ಎಲ್ಲೆಲ್ಲೋ ಕರೆದೊಯ್ಯುವುದನ್ನು ಚಿತ್ರಿಸಿದ್ದಾರೆ. "ಮೊದಲ ಪತ್ರದಲ್ಲಿ" ಗಂಡನಿಗೆ ಹೆಂಡತಿಯ ಪತ್ರ ಬರುತ್ತದೆ. ಪತ್ರ ಬರೆಯಲು ಹೇಗೆ ಆರಂಭಿಸಬೇಕೆಂದು ಚಿಂತಿಸುತ್ತಾ, ಬೇರೆ ಬೇರೆ ಪರಿಚಿತರ ಬಗ್ಗೆ ಅನುಭವಿಸಿದ ಘಟನೆಗಳ ಬಗ್ಗೆ ಯೋಚಿಸುತ್ತಾ, ಬಳಿಯಲ್ಲಿದ್ದ ಎಂಟಾಣೆಯಲ್ಲಿ ಪೋಸ್ಟಲ್ ಕವರ್ ತರಬೇಕೆಂದು ಕೊಳ್ಳುತ್ತಿರುವಾಗಲೇ ಸ್ನೇಹಿತನೊಬ್ಬನಿಗೆ ಆ ಎಂಟಾಣೆಯನ್ನು ಕೊಟ್ಟುಬಿಡಬೇಕಾದ ಸಂದರ್ಭ ಸೃಷ್ಟಿಯಾಗುತ್ತದೆ. ಪತ್ರ ಬರೆದು ಹಾಕುವ ಕೆಲಸ ಮುಂದೂಡ ಬೇಕಾಗುತ್ತದೆ. "ನಾನು ಬರೆದ ಕಥೆ"ಯೂ ಅಷ್ಟೆ. ಬಾನುಲಿಯಲ್ಲಿ ಪ್ರಸಾರ ವಾಗುವಂತಹ ಕಥೆ ಬರೆಯುವ ಆಸೆ ಹೊತ್ತ ಕಥೆಗಾರನ ಮನಸ್ಸು ಎಲ್ಲೆಲ್ಲೋ ಓಡುತ್ತದೆ. ಏನೇನನ್ನೋ ನೆನಪಿಸಿಕೊಳ್ಳುತ್ತದೆ. ಕೊನೆಗೆ ಬಾನುಲಿಯಲ್ಲಿ ಬರೆಯಬೇಕೆಂದುಕೊಳ್ಳುವ ಕಥೆಯ ಬರವಣಿಗೆ ಮಾತ್ರ ಹಾಗೆಯೇ ಉಳಿದುಕೊಳ್ಳುತ್ತದೆ.

"ಮಳಲ ಬುತ್ತಿ"ಯ ಸೀತಮ್ಮ ತರುಣ ಗುರುವಿಗೆ ಚಿರಪರಿಚಿತ ಹೆಂಗಸು. ಅವಳನ್ನು ಅವನು ದಿನಂಪ್ರತಿ ಮಾತನಾಡಿಸುತ್ತಿರುತ್ತಾನೆ. ಅವಳು ಸುಖಿಯಾಗಿರು

ತ್ತಾಳೆ ಎಂದು ಅಂದುಕೊಳ್ಳುತ್ತಿರುತ್ತಾನೆ. ಆದರೆ ಒಂದು ದಿನ ಅವಳು ಆತ್ಮಹತ್ಯೆ ಮಾಡಿಕೊಂಡಿರುವುದು ತಿಳಿದು ದಂಗಾಗುತ್ತಾನೆ. ಅವಳ ಆತ್ಮಹತ್ಯೆಯ ಸುತ್ತ ಹೆಣೆದ ಕಥೆ ಇದು. ಬಾಹ್ಯ ಆನಂದ ಆನಂದವಲ್ಲ. ಅಂತರ್ಯದಲ್ಲಿ ಏನಿರುತ್ತದೋ ಬಲ್ಲವರು ಯಾರು ಎಂಬ ತೀರ್ಮಾನಕ್ಕೆ ಒಂದು ಮುಟ್ಟುತ್ತಾನೆ.

ನವ ವಿವಾಹಿತರ ಜೋಡಿಯೊಂದು ಹನಿಮೂನ್‌ಗಾಗಿ ಸಮುದ್ರದಂಚಿನ ಒಂದು ಹೋಟೆಲಿನಲ್ಲಿ ತಂಗಿದಾಗ ಒಂದು ಹಸಿರು ಸೀರೆ ಗಂಡನ ಮನಸ್ಸಿನಲ್ಲಿ ಒಂದರ ಹಿಂದೊಂದರಂತೆ ಅನುಮಾನದ ಅಲೆಗಳನ್ನೆಬ್ಬಿಸುತ್ತಾ ಹೋಗುವುದೇ "ಕಾಗೆಯ ಗೂಡಿನಲ್ಲಿ ಕೋಗಿಲೆ ಹಾಡಿತು" ಕಥಾವಸ್ತು. ಪಾಪ, ನಿರಪರಾಧಿಯಾದ ಹೆಂಡತಿಯ ಬಗ್ಗೆ ಗಂಡು ಸ್ವಕಪೋಲ ಕಲ್ಪಿತ ಸಂದೇಹಗಳನ್ನು ನೇಯುತ್ತಾ ಕೊನೆಗೆ ತನ್ನ ಮೂರ್ಖತನದ ಸ್ವಯಂದರ್ಶನದಿಂದ ಮನಸ್ಸು ತಿಳಿಮಾಡಿಕೊಂಡು ಮಧುಚಂದ್ರ ತನ್ನ ನಿಜ ಅರ್ಥವನ್ನು ಪಡೆದುಕೊಳ್ಳುತ್ತದೆ.

ನಳಿನಿ–ಮುಕುಂದ ಮತ್ತೊಂದು ನವವಿವಾಹಿತ ಜೋಡಿ. ನಳಿನಿಯ ಸಹವಾಸ ದಲ್ಲಿದ್ದಾಗ ಮುಕುಂದನಿಗೆ ತನ್ನ ಹಿಂದಿನ ಗೆಳತಿಯರ ನೆನಪುಗಳು ಒಂದೊಂದಾಗಿ ಬಂದು ಹೋಗುತ್ತವೆ.ತನ್ನ ಟೈಪಿಸ್ಟ್ ಪುಷ್ಪಥಾಮಸ್‌ಳೊಂದಿಗೆ ಮಾಡಿದ ಚೆಲ್ಲಾಟದ ಯತ್ನ, ತಾನು ಪೇಯಿಂಗ್ ಗೆಸ್ಟ್ ಆಗಿದ್ದ ಮನೆಯ ಒಡತಿ ವಸುಂಧರಳ ಜೊತೆ ಯಲ್ಲಿ ಪಡೆದ ಪಲ್ಲಂಗದ ಅನುಭವ ನೆನಪಾಗುತ್ತದೆ. ಮುಕುಂದನಿಗೆ ಮುಗ್ಧೆ ನಳಿನಿಯಲ್ಲಿ ಅಷ್ಟಕಷ್ಟೆ ಆಸಕ್ತಿ. ಅವಳು ಸಾಯುತ್ತಾಳೆ. ಅದು ಆತ್ಮಹತ್ಯೆಯಲ್ಲ ಕೊಲೆ ಎಂಬ ಸೂಚನೆ ನೀಡುವ ಕಥೆಗಾರರು, ಮುಂದೆ ಮುಕುಂದ ಸ್ವಚ್ಛಂದ ಜೀವನ ವನ್ನು ಅಪ್ಪಿಕೊಳ್ಳುವುದನ್ನು ಚಿತ್ರಿಸಿದ್ದಾರೆ.

ಗಂಡ ಹೆಂಡತಿಯ ಸಸು ಮುನಿಸುಗಳು ಪ್ರತಿಷ್ಠೆಯ ವಿಷಯಗಳಾಗಿ ಬೆಳೆದು, ಮಗುವಿನ ಮಧ್ಯಸ್ತಿಕೆಯಲ್ಲಿ ಮಾತನಾಡುತ್ತಾ ಕೊನೆಗೆ ಪರಸ್ಪರ ಸಮೀಪವಾಗುವ ವಸ್ತು "ಮೈ ಮುಟ್ಟಿದರೆ ನನ್ನಾಣೆ"ಯಿದು.

"ವೈಲಿಗೆ"ಯ ಶಾಮಾಚಾರ್ಯರು ವಿಧುರರು. ಆದರೆ ಹೆಂಡತಿಯ ತಿಥಿಯ ದಿನದಿಂದ ಆರಂಭಿಸಿ ಅವರ ಬಯಕೆಗಳನ್ನು ಬಡಿದೆಬ್ಬಿಸುವ ವಿವಿಧ ರೂಪ, ಗಾತ್ರಗಳ ಪ್ರೌಢ ಮಹಿಳೆಯರ ಮಹಾ ಮೆರವಣಿಗೆಯನ್ನು ಈ ಕಥೆಯಲ್ಲಿ ನೋಡುತ್ತೇವೆ.

ಪ್ರತಿಯೊಂದು ಸನ್ನಿವೇಶದಲ್ಲೂ ಆಚಾರ್ಯರು ಕಾಮವಾಸನೆಯೊಡನೆ ಸೆಣಸಾಡುವ ಪರಿಯನ್ನು ಚಿತ್ರಿಸುತ್ತಾ ಹೋಗಿ ಕೊನೆಗೆ ಇದರಿಂದ ತಪ್ಪಿಸಿಕೊಳ್ಳಲು ತಿರುಪತಿಗೆ ಹೋದಾಗ ಅಲ್ಲೂ 'ಹೆಣ್ಣಾಗಿ ಕಾಡುತ್ತೆ ಮಾಯೆ' ಎಂದು ತೋರಿಸುತ್ತಾರೆ ಕಥೆಗಾರರು.

ಕೆಲಸದ ಇಂಟರ್‌ವ್ಯೂಗಾಗಿ ದೆಹಲಿಗೆ ಹೋದ ಇಬ್ಬರು ಗೆಳೆಯರು ಇಬ್ಬರು ವಿದೇಶಿ ಹೆಣ್ಣುಗಳೊಂದಿಗೆ ಸರಸವಾಡಿ ಖುಷಿಗೊಳ್ಳುತ್ತಾ ಜೇಬು ಖಾಲಿ ಮಾಡಿಕೊಂಡು ಪೇಚಾಡುವ ಕಥೆ 'ಕಿಸ್ಮ್'.

'ಗಾಳಿಪಟ' ಹೆಣ್ಣುಗಳ ಜಾಲದಲ್ಲಿ ಸಿಲುಕಿ ಬಿದ್ದು, ಒಬ್ಬೊಬ್ಬರಲ್ಲೂ ಬಯಕೆಗಳು ಹುಟ್ಟಲು ಆಸ್ಪದ ನೀಡಿ, ಕೊನೆಗೆ ತಾಯಿಯ ಆಸೆಯಂತೆ ಸೋದರ ಮಾವನ ಮಗಳನ್ನೇ ಮದುವೆಯಾದ ಆನಂದನ ಕಥೆ.

ಮುಂದಿನ 'ನಿರೀಕ್ಷಣೆ'ಯ ನಾಯಕನ ಹೆಸರೂ ಆನಂದನೇ. ಆದರೆ ಅವನು ಚಿಕ್ಕ ಹುಡುಗ. ಅವನ ಪುಟ್ಟ ಗೆಳತಿ ಕಾತ್ಯಾಯಿನಿ. ಅವರಿಬ್ಬರ ನಡುವಿನ ಹುಡುಗಾಟ, ಅಸೂಯೆ, ಕೋಪಗಳ ಚಿತ್ರಣ ಈ ಕಥಾವಸ್ತು. ಕೊನೆಗೆ ತಾನೇ ನೀರು ಕುಡಿಸಿದ ಬಾಟಲಿನಲ್ಲಿ ವಿಷವಿತ್ತೆಂದೂ, ಅದಕ್ಕಾಗಿ ಅವಳನ್ನು ಆಸ್ಪತ್ರೆಗೆ ಸೇರಿಸಿದರೆಂದು ತಿಳಿದರೂ ಅರ್ಥ ಮಾಡಿಕೊಳ್ಳಲಾರದಾದ ಆನಂದನ ಮುಗ್ಧ ಮನಸ್ಸಿನ ಪರಿಚಯ ಈ ಕಥೆಯಲ್ಲಿ ಕಾಣುತ್ತೇವೆ.

ಗಂಡ ಹೆಂಡತಿಯರ ಮುನಿಸು. ಹೆಂಡತಿ ತವರು ಮನೆಗೆ ಹೋಗುತ್ತಾಳೆ. ಅವಳ ಧಾರ್ಷ್ಟ್ಯದ ಬಗ್ಗೆ ಗಂಡ ಮುಕುಂದ ಸಿಡಿಮಿಡಿಗೊಳ್ಳುತ್ತಾನೆ. ನಾದಿನಿ ತಮ್ಮ ಮನೆಗೆ ಬಂದದ್ದು ಅವರಿಬ್ಬರ ಏಕಾಂತ ಜೀವನಕ್ಕೆ ಭಂಗ ಎಂದು ಮೈ ಪರಚಿಕೊಳ್ಳುತ್ತಾನೆ, ಇನ್ನೆರಡು ವರ್ಷ ಮಕ್ಕಳು ಬೇಡ ಅನ್ನುತ್ತಾನೆ. ಹೆಂಡತಿಗೆ ಮುಕುಂದನ ಈ ರೀತಿ ನೀತಿಗಳೇ ಹಿಡಿಸುವುದಿಲ್ಲ. ತವರು ಮನೆಯಲ್ಲಿ ಕುಳಿತು ತನ್ನ ಗಂಡನ ನಡವಳಿಕೆಯ ಕೊಂಕುಗಳನ್ನೇ ಚಿಂತಿಸುತ್ತಾಳೆ. ಕೊನೆಗೆ ಅವಳು ಗರ್ಭಿಣಿ ಎಂಬ ಸುದ್ದಿ ಬರುತ್ತದೆ ಮುಕುಂದನಿಗೆ. ಇದು 'ಯಾರು ಸೋತವರು' ಕಥಾವಸ್ತು.

'ಥರ್ಮೋಗ್ರಾಫ್' ಶ್ರೀನಿವಾಸರಾಯರ ಎರಡು ಸಂಕಲನಗಳ ಕಥೆಗಳಲ್ಲಿ ವಿಭಿನ್ನ

ವಾದ ಕಥೆ. ಇಲ್ಲಿ ಇವರು ವೈಜ್ಞಾನಿಕ ವಸ್ತುವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಪತ್ತೇದಾರಿ ಧಾಟಿಯಲ್ಲಿ ಸಾಗುವ ಈ ಕಥೆ ಕುತೂಹಲಕಾರಿಯಾಗಿ ಸಾಗುತ್ತದೆ. ಭಯಂಕರ ವಿನಾಶಕಾರಿ ರೋಗಾಣುಗಳನ್ನು ಭಾರತದ ಪ್ರಯೋಗಾಲಯದಿಂದ ಅಪಹರಿಸಿಕೊಂಡು ಹೋಗುವ ವಿದೇಶಿಯರನ್ನು ಪತ್ತೆ ಹಚ್ಚುವ ಕೆಲಸ ಇದರಲ್ಲಿದೆ. ಇದು ಕಥೆಗಾರರಿಗಿರುವ ವೈಜ್ಞಾನಿಕ ವಿಷಯಗಳ ತಿಳುವಳಿಕೆ ಪ್ರತಿಬಿಂಬಿಸುತ್ತದೆ.

'ಗಾಳಿಪಟ'ದ ಧಾಟಿಯಲ್ಲೇ ಸಾಗುವ ಕಥೆ 'ಮನಕೆ ಜಯವಿಲ್ಲ'. ಇಲ್ಲಿ ಜಾಸ್ಮಿನ್ ಎಂಬ ಹುಡುಗಿ ಮೋಹನ ರಾಜನ ಬೆನ್ನ ಹಿಂದೆ ಬೀಳುತ್ತಾಳೆ. ಅವಳದು ಒಲಿಸಿಕೊಂಡು ವರಿಸಿಕೊಳ್ಳುವ ಪ್ರಯತ್ನ. ಕೊನೆಯುವರೆಗೂ 'ಮನಸ್ಸಿನಲ್ಲೇ ಮಂಡಿಗೆ ತಿನ್ನುತ್ತಾ' ಇರುವ ಜಾಸ್ಮಿನ್‌ಳಿಗೆ ಅವನು ವಿವಾಹಿತ ಎಂದು ತಿಳಿದು ಬಂದಾಗ ನಾಗಿಣಿಯಂತೆ ಬುಸುಗುಡುವುದು ಬಿಟ್ಟು ಬೇರೇನೂ ಸಾಧ್ಯವಾಗದು. ಇದು 'ಗಾಳಿಪಟ'ದಂತೆಯೇ ಸಾಗಿ ಹೋಗುವ ಕಥೆ.

'ದುರಭಿಮಾನ' ಐತಿಹಾಸಿಕ ವಸ್ತು ಉಳ್ಳ ಕಥೆ. ಒಂದು ಹೆಣ್ಣಿನ–ರಾಣಿಯ–ಒಡವೆಯ ಮೇಲಿನ ಆಸೆಯ ಕಾರಣ ಒಂದು ರಾಜಮನೆತನ ಪತನವಾಗುವುದನ್ನು ಇಲ್ಲಿ ಚಿತ್ರಿಸಲಾಗಿದೆ.

ಒಂದು ರೈಲು ದುರಂತದಲ್ಲಿ ತನಗೆ ತಿಳಿದವರು ಸಾವಿಗೀಡಾದಾಗ ಕಥೆಗಾರನ ಮನಸ್ಸು ತುಮುಲಕ್ಕೊಳಗಾಗುವುದನ್ನು ಬಿಡಿಸುತ್ತಾ ಹೋಗುವುದೇ 'ರಕ್ತ ಕಾರಂಜಿ'.

ಈ ಕಥೆಗಳೆಲ್ಲವನ್ನು ಶ್ರೀನಿವಾಸರಾಯರ ಆರಂಭದ ದಿನಗಳ ಬರಹಗಳೆಂದೇ ಪರಿಗಣಿಸಬೇಕು. ಆ ದಿನಗಳಲ್ಲಿ ಎಲ್ಲ ಉದಯೋನ್ಮುಖ ಕಥೆಗಾರರ ಮೇಲೂ ಹೆಚ್ಚಿನ ಪ್ರಭಾವ ಬೀರಿದವರು ಮಾಸ್ತಿಯವರು. ಶ್ರೀನಿವಾಸರಾಯರೂ ಅವರಿಂದ ಬಹಳ ಪ್ರಭಾವಿತರಾಗಿದ್ದಾರೆ. ಅಂತೆಯೇ ಆನಂದ, ಅ.ನ.ಕೃ, ನಿರಂಜನ ಇವರ ಪ್ರಭಾವವೂ ಇಲ್ಲಿ ಕಂಡು ಬರುತ್ತದೆ. ವಸ್ತುವಿನ ಆಯ್ಕೆ, ಹೇಳುವ ಶೈಲಿ, ಪಾತ್ರಗಳ ಸೃಷ್ಟಿ ಇವುಗಳಲ್ಲಿ ಇದು ಪ್ರತಿಬಿಂಬಿತವಾಗುತ್ತದೆ.

ಆರಂಭದ ಕಥೆಗಳಾದ್ದರಿಂದ ಶಬ್ದಾಡಂಬರ, ಅತಿ ಭಾವುಕತೆ, ತೀವ್ರ ಭಾವಾವೇಶ ಮುಂತಾದವುಗಳಿಂದ ಈ ಕಥೆಗಳು ಹೊರತಾಗಿಲ್ಲ. ಗಂಡು-ಹೆಣ್ಣಿನ, ಪತಿ-ಪತ್ನಿಯರ ಸಂಬಂಧಗಳು ಇವರನ್ನು ಬಹಳಷ್ಟು ಆಕರ್ಷಿಸಿರುವ ವಸ್ತು. ಕಥೆಗಾರರ ವಯೋಧರ್ಮಕ್ಕನುಸಾರ ಹೆಚ್ಚಿನ ಕಥೆಗಳಲ್ಲಿ ರಸಿಕತೆ, ಸೌಂದರ್ಯಾರಾಧನೆ ಮುಖ್ಯವಾಗಿ ಎದ್ದು ಕಾಣುತ್ತದೆ. ಇತಿಹಾಸದಲ್ಲಿ ಆಸಕ್ತಿ, ವಿಜ್ಞಾನದ ಪರಿಚಯದ ಪರಿಣಾಮವಾಗಿ ಅವನ್ನೂ ಕಥಾವಸ್ತುಗಳನ್ನಾಗಿ ಇವರು ಆರಿಸಿಕೊಳ್ಳುತ್ತಾರೆ.

ಶ್ರೀನಿವಾಸರಾಯರ ಈ ಎರಡು ಕಥಾಸಂಕಲನಗಳೂ ಅವರು ಬೆಳೆದು ಬಂದ ಹಾದಿಯನ್ನು ಗುರುತಿಸಲು ಸಹಾಯಕವಾಗುತ್ತವೆ.





# ರಂಗಸ್ಥಳ

—ಬಾ. ಹ. ರಮಾಕುಮಾರಿ

ಶ್ರೀ ಎಸ್. ವಿ. ಶ್ರೀನಿವಾಸರಾವ್‌ರವರ 'ರಂಗಸ್ಥಳ' ಕಾದಂಬರಿ 1984ರಲ್ಲಿ ಪ್ರಕಟಗೊಂಡಿದೆ. ಐ.ಬಿ.ಹೆಚ್. ಪ್ರಕಾಶನದಿಂದ ಪ್ರಕಟಿಸಲ್ಪಟ್ಟಿದೆ.

ಇಲ್ಲಿನ ಕಥಾವಸ್ತು ಏಕತಾನತೆಯಿಂದ ಕೂಡಿದ್ದರೂ ಪಾತ್ರಗಳು ತುಂಬ ಸಂಕೀರ್ಣತೆಯಿಂದ ಕೂಡಿದ್ದು ವಿಚಿತ್ರ ಸನ್ನಿವೇಶಗಳನ್ನು ತುಂಬಿಕೊಂಡಿದೆ.

ಅಪ್ಪೂಸ್ವಾಮಿ ಮೊದಲಿಯಾರ್ ಕಾದಂಬರಿಯ ಕೇಂದ್ರ ಬಿಂದು. ಅವನೊಂದಿಗೆ ಕಥಾ ಹಂದರ ಬಿಚ್ಚಿಕೊಳ್ಳುತ್ತಾ ಹೋಗಿ ಅವನ ಸುತ್ತಲಿನ ಜನ, ಅವನ ಸಂಸಾರದ ಸದಸ್ಯರೊಂದಿಗೆ ಹೆಣೆದುಕೊಳ್ಳತೊಡಗುತ್ತದೆ. ಕೆಲವೊಮ್ಮೆ ಪಾತ್ರಗಳ ಗತಿ ಎಲ್ಲಿಗೋ ಹೋಗಿ ಮತ್ತೆಲ್ಲಿಯೋ ನಿಂತು ಬಿಡುತ್ತವೆ. ಅವುಗಳಿಗೊಂದು ಗೊತ್ತು ಗುರಿ ಒದಗಿಸುವುದು ಮತ್ತೆ ಅಪ್ಪೂಸ್ವಾಮಿಯೇ.

ಅಪ್ಪೂಸ್ವಾಮಿ ಮೊದಲಿಯಾರ್ ಒಬ್ಬ ಆಗರ್ಭ ಶ್ರೀಮಂತ. ಸಂಕೀರ್ಣ ವ್ಯಕ್ತಿತ್ವದ ಈತನಿಗೆ ತಾನು ಬಯಸಿದಂತೇ ನಡೆಯಬೇಕು. ಅದಕ್ಕೆ ಬರುವ ಯಾವುದು ಅಡ್ಡಿ ಆತಂಕಗಳನ್ನು ಹೇಗಾದರೂ ಸರಿ, ನಿವಾರಿಸಲೇ ಬೇಕೆಂಬ ಹಠವಾದಿ ಕ್ರೂರಿ. ಅಹಮಿಕೆಯೇ ಮೈವೆತ್ತವನು. ಇವನಿಗೆ ಸಾಧ್ವಿ ಹೆಂಡತಿ ಮೀರಾ. ಈಕೆ ದೈವಭಕ್ತೆ, ಅನುಕಂಪವುಳ್ಳವಳು. ಬಡವರ ಕಷ್ಟಕ್ಕೆ ಮರುಗುವವಳು. ಇವರಿಗೆ ಎರಡು ಗಂಡು, ಒಂದು ಹೆಣ್ಣು—ಹೀಗೆ ಮೂರು ಜನ ಮಕ್ಕಳು. ಮೊದಲನೆಯವ ರಂಗಸ್ವಾಮಿ ಡಾಕ್ಟರು. ಎರಡನೆಯವ, ವೆಂಕಟಸ್ವಾಮಿ ಮಿಲಿಟರಿಯಲ್ಲಿದ್ದವನು. ಮೂರನೆಯವಳು ಮಗಳು ರತಿ. ರಂಗಸ್ವಾಮಿ ತನ್ನ ಡಿಸ್ಪೆನ್ಸರಿಯ ನರ್ಸ್ ಮಂಜುಳಳ ಪ್ರೇಮದಲ್ಲಿ ಬಿದ್ದಿದ್ದಾನೆ, ಅವಳನ್ನು ಮದುವೆಯಾಗುವ ಹಂತಕ್ಕೆಹೋಗಿದ್ದಾನೆ ಎಂದು ತಿಳಿದದ್ದೇ ತಕ್ಷಣ ಅವನನ್ನು ಉನ್ನತ ವಿದ್ಯಾಭ್ಯಾಸದ ನೆಪದಲ್ಲಿ ಅಮೇರಿಕಾಕ್ಕೆ ಕಳುಹಿಸಿ ಬಿಡುತ್ತಾನೆ. ಅಲ್ಲಿ ಹೋದ ರಂಗಸ್ವಾಮಿ ಹೆಣ್ಣುಗಳ ಬಂಧನದಲ್ಲಿ ಸಿಲುಕಿ ಕೊನೆಗೆ ಮಲ್ಲಿಗೆ ಎಂಬುವವಳನ್ನು ಮದುವೆಯಾಗಬೇಕಾದಿ

ಬರುತ್ತೆ. ಅಲ್ಲಿ ಕೂಡ ಅಪ್ಪೂಸ್ವಾಮಿಯ ಸ್ನೇಹಿತರು ಇವನಿಗೆಲ್ಲ ಸಹಾಯ ಸಹಕಾರ ನೀಡುತ್ತ ಬರುತ್ತಾರೆ. ಇವೆಲ್ಲಾ ಅಪ್ಪೂಸ್ವಾಮಿಯ ಪೂರ್ವಯೋಜಿತ ಕಾರ್ಯಗಳೇ ಆಗಿರುತ್ತವೆ. ಅತ್ತ ವೆಂಕಟಸ್ವಾಮಿಯೂ ಕೂಡ ತನ್ನ ಮೇಲಧಿಕಾರಿಯ ಮಗಳನ್ನು ಪ್ರೀತಿಸಿ ಮದುವೆಯಾಗುವ ಹಂತಕ್ಕೆ ಬಂದಿರುತ್ತಾನೆ. ಕೂಡಲೇ ಮಗನನ್ನು ಮಿಲಿಟರಿಯಿಂದ ಕರೆಸಿಕೊಂಡು ತನ್ನ ವ್ಯವಹಾರ, ಉದ್ದಿಮೆಗಳನ್ನು ನೋಡಿಕೊಳ್ಳುವಂತೆ ಮಾಡುತ್ತಾನೆ. ದೆಹಲಿಯ ಶ್ರೀಮಂತ ವ್ಯಕ್ತಿಯೊಬ್ಬನ ಮಗಳನ್ನು ತನ್ನ ವ್ಯವಹಾರ ಕುದುರುವ ಸಲುವಾಗಿ ವೆಂಕಟಸ್ವಾಮಿಗೆ ಮದುವೆ ಮಾಡಿಕೊಳ್ಳುತ್ತಾನೆ. ಇನ್ನು ರತಿ ಪತಂಗದ ಹಾಗೆ ಹಾರಾಡುತ್ತ, ತನ್ನ ತಂದೆಯ ಶ್ರೀಮಂತಿಕೆಯನ್ನು ಮೆರೆಯುತ್ತಾ, ಸ್ವಚ್ಛಂದವಾಗಿ ತೇಲುತ್ತಿರುವ ಇವಳಿಗೆ ಬದುಕಿನ ಯಾವುದೇ ಕಟ್ಟುಪಾಡುಗಳಿಲ್ಲ. ಇಂತಹವಳಿಗೆ ಮದುವೆ ಮಾಡುವ ಯತ್ನದಲ್ಲಿ ಒಂದೆರಡು ಬಾರಿ ಸೋಲುತ್ತಾರೆ. ಇವಳನ್ನು ವಿದ್ಯಾಭ್ಯಾಸದ ನೆಪದಲ್ಲಿ ಫ್ರಾನ್ಸಿಗೆ ಕಳಿಸುತ್ತಾರೆ. "ಅಲ್ಲಿಂದ ಬಂದ ನಂತರ ಯಾವುದಾದರೂ ಬಕರಾನನ್ನು ಕಟ್ಟುವುದು" ಹೀಗೆಂದು ಅವಳಪ್ಪನೇ ಹೇಳಿಕೊಳ್ಳುತ್ತಾನೆ.

ಈ ನಡುವೆ ಅನ್ಯಾಯಕ್ಕೊಳಗಾದ ಮಂಜುಳಾಳ ಅಪ್ಪ ಈಶ್ವರಯ್ಯ, ಅಪ್ಪೂಸ್ವಾಮಿಯನ್ನು ಕಂಡು ತನ್ನ ಮಗಳ ಪರಿಸ್ಥಿತಿ ಹಾಗೂ ಅವರ ಪ್ರೇಮವನ್ನು ನಿವೇದಿಸುತ್ತಾನೆ. ಏನೂ ನಡೆಯುವುದಿಲ್ಲ. ತನ್ನ ಮಗನ ವಿಳಾಸ ಕೂಡ ಸಿಗದ ಹಾಗೆ ಜಾಗ್ರತೆ ವಹಿಸುತ್ತಾನೆ. ಅಪ್ಪೂಸ್ವಾಮಿಯ ಮನೆಯಲ್ಲಿ ಕೆಲಸಕ್ಕಿದ್ದ ಅಶ್ವತ್ಥಯ್ಯನ ಸಹಾಯದಿಂದ ಮಂಜುಳಾ ಒಂದು ಪತ್ರವನ್ನು ರಂಗಸ್ವಾಮಿಗೆ ತಲುಪಿಸುವಲ್ಲಿ ಯಶಸ್ವಿಯಾಗುತ್ತಾಳೆ. ಇದು ಗೊತ್ತಾಗಿ ಅವನನ್ನು ಕೆಲಸದಿಂದ ತೆಗೆದು ಹಾಕುತ್ತಾನೆ. ಅಶ್ವತ್ಥಯ್ಯನ ಮಗಳೂ ಕೂಡ ಅರವಿಂದ ಎಂಬುವವನನ್ನು ಪ್ರೀತಿಸಿ ಮೋಸ ಹೋಗುತ್ತಾಳೆ. ಟಿಪ್ಪೂ ಡ್ರಾಪ್‌ನಿಂದ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಮಂಜುಳಳ ಪತ್ರ ರಂಗಸ್ವಾಮಿಯ ಮೇಲೆ ಏನೂ ಪರಿಣಾಮ ಬೀರುವುದಿಲ್ಲ.

ಈ ಮಧ್ಯೆ, ಅಪ್ಪೂಸ್ವಾಮಿಗೆ ಅನಧಿಕೃತ ಕುಟುಂಬವೊಂದಿದ್ದು ಅವರಿಗೆ ಇಬ್ಬರು ಹೆಣ್ಣು ಮಕ್ಕಳಿರುತ್ತಾರೆ. ಒಬ್ಬಳು ಪರಿಮಳಾ, ನೃತ್ಯಪಟು. ಕಲಾವಿದೆಯಾಗಿ ಹೆಸರು ಮಾಡಿದ್ದಾಳೆ. ಇನ್ನೊಬ್ಬಳು ರಮ್ಯ, ಅಂಗವಿಕಲೆ. ಅಪ್ಪೂಸ್ವಾಮಿಯ ಸ್ನೇಹಿತ ಗೌಡ ರಾಜಕೀಯ ವ್ಯಕ್ತಿ. ಈತನಿಂದಾಗಿ ಹಲವಾರು ಬಾರಿ ಈ [illegible] ವಿದೇಶ ಪ್ರವಾಸ ಮಾಡುವ, ಕಲೆಯನ್ನು ಪ್ರದರ್ಶಿಸಿ ಪ್ರಸಿದ್ಧಿ ಪಡೆವ ಅವಕಾಶ

ದೊರೆತಿತ್ತು. ಪರಿಮಳಾ ಡಾ॥ ಬಾಲಚಂದರ್‌ನನ್ನು ಸರಳವಾಗಿ ಮದುವೆಯಾಗಿದ್ದಳು. ಇದರಿಂದಾಗಿ ನೃತ್ಯ ಕಾರ್ಯಕ್ರಮವನ್ನು ರದ್ದುಗೊಳಿಸಿದ್ದಳು. ಗೌಡರ ಅಹಮಿಕೆಗೆ ಸಿಡಿಲು ಬಡಿದಂತಾಯ್ತು. ಸಿಟ್ಟು ನೆತ್ತಿಗೇರಿ ಅವಳ ಮೇಲೆ ಹಾರಾಡಿ ಕಡೆಗೆ ಅವಳ ಮೇಲೆ ಅತ್ಯಾಚಾರವೆಸಗಲು ಮುಂದಾಗುತ್ತಾನೆ. ಅವಳು ತಪ್ಪಿಸಿಕೊಳ್ಳುತ್ತಾಳೆ. ಅಲ್ಲೇ ಇದ್ದ ಅಂಗವಿಕಲ ಹುಡುಗಿ ರಮ್ಯಳ ಮೇಲೆಯೇ ಅತ್ಯಾಚಾರ ಮಾಡುತ್ತಾನೆ. ಅಷ್ಟರಲ್ಲಿ ಅವಳ ತಾಯಿ ಬರುತ್ತಾಳೆ. ರಮ್ಯಾಳಿಗೆ ಪಾಠ ಹೇಳುತ್ತಿದ್ದ ನಾಣಿ ಬರುತ್ತಾನೆ. ವಿಷಯವೆಲ್ಲ ತಿಳಿಯುತ್ತದೆ. ಪೋಲೀಸಿಗೆ ದೂರವಾಣಿ ಮೂಲಕ ದೂರು ನೀಡುತ್ತಾಳೆ ಪರಿಮಳಾ. ಬರದು ಕಳಿಸಿ ಎಂದಾಗ ಬರೆದು ನಾಣಿಯ ಜತೆಯಲ್ಲೇ ಕೊಟ್ಟು ಕಳುಹಿಸುತ್ತಾಳೆ. ಅವನು ಹೊರಡಬೇಕೆನ್ನುವಷ್ಟರಲ್ಲೇ ಪೋಲೀಸರೇ ಬಂದು ನಾಣಿಯನ್ನೇ ಬಂಧಿಸಿ ಕರೆದೊಯ್ಯುತ್ತಾರೆ.

ವೆಂಕಟಸ್ವಾಮಿ ತನ್ನ ಹೆಂಡತಿಗೆ ಮದುವೆಯಾದ ಒಂದೇ ವರ್ಷದಲ್ಲಿ ಡೈವರ್ಸ್ ಕೊಡುತ್ತಾನೆ. ಕಾರಣ ಅವಳು ತನ್ನ ವರಾಜ ಪ್ರೇಮಿಯ ಪ್ರೇಮಬಂಧನಕ್ಕೆ ಮತ್ತೆ ಒಳಗಾಗಿದ್ದು, ಸ್ವಚ್ಛಂದ ಲೈಂಗಿಕತೆಗೆ ಮಾರು ಹೋದದ್ದು. ಇವೆಲ್ಲದರ ನಡುವೆ ಅಪ್ಪೂಸ್ವಾಮಿಯ ಫ್ಯಾಕ್ಟರಿಯಲ್ಲಿ ಯೂನಿಯನ್ ಗಲಾಟೆ, ಇತ್ಯಾದಿ ನಡೆಯುತ್ತವೆ. ಫ್ಯಾಕ್ಟರಿ ಮುಚ್ಚಿ ಬಿಡುತ್ತಾರೆ. ರಂಗಸ್ವಾಮಿ ಆಶ್ರಮ ಸೇರಿದ್ದಾನೆಂಬ ಸುದ್ದಿ ಬರುತ್ತದೆ. ಅವನಿಗೊಂದು ಗಂಡು ಮಗು ಸಹಾ ಇರುತ್ತದೆ. ರತಿ ಬಗ್ಗೆ ಅನೇಕ ಊಹಾಪೋಹ ಎದ್ದು ಸರಿಯಾದ ಸಂಗತಿ ತಿಳಿಯದಿದ್ದರಿಂದ ಅಪ್ಪೂಸ್ವಾಮಿಯೇ ಮಗಳನ್ನು ಕರೆ ತರಲು ಫ್ರಾನ್ಸಿಗೆ ಹೋಗುತ್ತಾನೆ. ಅವನ ಹೆಂಡತಿ ಮೀರಾ ಅನಾರೋಗ್ಯದಿಂದ ನರ್ಸಿಂಗ್ ಹೋಂ ಸೇರಿದ್ದಾಳೆ. ಇದು ಮಾನಸಿಕ ಕಾಯಿಲೆಯೇ ಇರಬಹುದು. ಕೊನೆ ಕ್ಷಣಗಳೇನೋ ಎನ್ನುವಂತೆ ಮಕ್ಕಳನ್ನು,ಗಂಡನನ್ನು ನಿರೀಕ್ಷಿಸುತ್ತಾಳೆ. "ನಾನು ಅವರ ತೊಡೆ ಮೇಲೆ ತಲೆ ಇಟ್ಟು ಸಾಯಬೇಕು. ಮುತ್ತೈದೆ ಸಾವು ಪುಣ್ಯ ಮಗು" ಎಂದೆನ್ನುತ್ತಾಳೆ. ಅಪ್ಪೂಸ್ವಾಮಿ ಬಂದೊಡನೆ ಅವನ ಕೈಯಲ್ಲಿ ಪ್ರಾಣ ಬಿಡುತ್ತಾಳೆ. ಹೀಗೆ ಕಥಾ ಹಂದರ ಹರಡಿಕೊಳ್ಳುತ್ತದೆ. ಇನ್ನೂ ಹಲವಾರು ಘಟನೆಗಳು, ಪಾತ್ರಗಳು ಇದರೊಳಗೆ ಸೇರಿಕೊಂಡಿವೆ.

ಈ ಎಲ್ಲವುಗಳಲ್ಲಿ ಕಂಡು ಬರುವ ಮುಖ್ಯವಾದ ದಾರುಣತೆ ಎಂದರೆ ಬಡ ವರ್ಗದ ಅಸಹಾಯಕ ಮಂದಿಗೇ ಎಲ್ಲ ಸಂಕಷ್ಟಗಳು ಉಂಟಾಗುತ್ತವೆ. ಶ್ರೀಮಂತರು ತಮ್ಮ ಹಿತಕ್ಕಾಗಿ ಅವರನ್ನು ಬಲಿಪಶುವಾಗಿಸುವುದು ಕಂಡು ಬರುತ್ತದೆ. ತಮ್ಮ ಮೈ ಕಾಯಿಸಿಕೊಳ್ಳಲು ಇಂತಹವರ ಒಡಲಿಗೆ ಬೆಂಕಿ ಇಡುವ ಶ್ರೀಮಂತರ ಸಂಸ್ಕೃತಿಯನ್ನು ದಟ್ಟವಾಗಿ ಚಿತ್ರಿಸಲಾಗಿದೆ.

ಅಪ್ಪೂಸ್ವಾಮಿಯಲ್ಲಿ ದಾರ್ಷ್ಟ್ಯತೆಯು ಪರಾಕಾಷ್ಠೆ ಇದೆ. ತನ್ನ ವೈಭವ, ತನ್ನ ಕುಟುಂಬ, ತನ್ನವರ ಮುಂದೆ ಬೇರೆಲ್ಲಾ ಗೌಣ ಎಂದು ಭಾವಿಸಿರುವುದು ಅದಕ್ಕಾಗಿ ಎಲ್ಲ ಹುನ್ನಾರಗಳನ್ನು ರಚಿಸುವನು. ಆದರೆ ಇಂತಹುದರ ಪರಿಣಾಮವನ್ನು ಅವನು ತನ್ನ ಹೆಂಡತಿಯ ಸಾವಿನಲ್ಲಿ ಕಾಣಬೇಕಾಗುತ್ತದೆ. ಸರಿಸುಮಾರು ಎಲ್ಲ ಪಾತ್ರಗಳಲ್ಲೂ ಲೈಂಗಿಕತೆ, ಸ್ವಲ್ಪ ಮಟ್ಟಿಗೆ ವಿಕೃತ ಕಾಮ ಎಂಬಂತೆ ಚಿತ್ರಿಸಿರುವುದು ಕಂಡು ಬರುತ್ತೆ. ಬಹುಶಃ ಶ್ರೀಮಂತಿಕೆಯ ಅಹಂ, ವಿದೇಶಗಳ ಕಲ್ಪನೆಗಳು ಲೈಂಗಿಕತೆಯಲ್ಲಿಯೇ ಜೀವನ ತಳ್ಳುವ ಮಾರ್ಗಗಳನ್ನು ಕಲ್ಪಿಸಿರಬಹುದೇನೋ. ಅಪ್ಪೂಸ್ವಾಮಿಯ ಕುಟುಂಬದಲ್ಲಿ ಅವನ ಹೆಂಡತಿ ಮೀರಾ ಹಳೆಯ ಮೌಲ್ಯಗಳನ್ನು ಪ್ರತಿಬಿಂಬಿಸುವ ಸಾಧ್ವಿಮಣಿಯಾಗಿದ್ದು ಎಲ್ಲ ವ್ಯವಹಾರಗಳಿಗೆ ಮೂಕ ಪ್ರೇಕ್ಷಕಿಯಾಗುತ್ತಾಳೆ. ಅವಳಲ್ಲಿ ಯಾವ ಸಂಘರ್ಷವೂ ಉಂಟಾಗುವುದಿಲ್ಲ. ಭಾರತೀಯ ಸ್ತ್ರೀಯರ ಪ್ರತಿನಿಧಿಯಾಗಿ ಅಲ್ಲಿ ಕಂಡು ಬರುತ್ತಾಳೆ. ವೆಂಕಟಸ್ವಾಮಿಯ ಪಾತ್ರ ಸ್ವಲ್ಪ ಮಟ್ಟಿಗೆ ನ್ಯಾಯ ದೊರಕಿಸಿಕೊಟ್ಟಂತೆ ಕಾಣುತ್ತದೆ.

ಲೇಖಕರು ಇಲ್ಲಿ ಒಬ್ಬ ವ್ಯಕ್ತಿಯ, ಒಂದು ವರ್ಗದ, ಶ್ರೀಮಂತಿಕೆಯ, ಶ್ರೀಮಂತರ ವಿದೇಶೀ ವ್ಯಾಮೋಹದ ಒಳಮುಖಗಳನ್ನು, ಸಂಕೀರ್ಣ ಸ್ವಭಾವಗಳನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಅಪ್ರತ್ಯಕ್ಷವಾಗಿ ಲೈಂಗಿಕ ವಿಕಾರಗಳಿಗೆ ಮನ ಸೋಲುವ ವರ್ಗವನ್ನು ಮಾರ್ಮಿಕವಾಗಿ ತಿಳಿಸಿದ್ದಾರೆ. ಜೀವನ ಹೋರಾಟದಲ್ಲಿ ಮಾನವೀಯತೆಗೆ ಸ್ಪಂದಿಸುವ, ತನ್ನಂತಹವರ ಕಷ್ಟಕ್ಕೆ ಮರುಗುವ, ಕೆಳ ಮಧ್ಯಮ ವರ್ಗ, ನೀತಿ ಕಟ್ಟುಪಾಡುಗಳ ಒಳಗೇ ಬದುಕಿಗಾಗಿ ಹೋರಾಡುವುದು. ಇವಾವ ಸಂಘರ್ಷಗಳೂ ಇಲ್ಲದೇ ಕಟ್ಟು ಹರಿದು ಸ್ವಚ್ಛಂದಗೊಂಡ ಶ್ರೀಮಂತ ವರ್ಗಕ್ಕೆ ಕೇವಲ ಲೈಂಗಿಕ ಚಟುವಟಿಕೆಗಳು ಅವರ ಅವಿಭಾಜ್ಯ ಅಂಗವೆನಿಸಿವೆ. ಇವೆಲ್ಲದರ ನಡುವೆ ಕನಿಷ್ಠ ಬದುಕಿಗೆ ಅಂಟಿಕೊಂಡು, ಯಾವ ಮಿತಿಗೂ ಒಳಪಡದೇ, ಬದುಕು ಹೇಗೆ ಬರುತ್ತದೋ ಹಾಗೆ ತಮ್ಮದೇ ರಾಜ್ಯದಲ್ಲಿ, ತಮ್ಮದೇ ಅನಿಸಿಕೆಗಳೊಂದಿಗೆ ರಾಜಿ ಮಾಡಿಕೊಂಡು ಬದುಕುವ ಕೆಳ ವರ್ಗವಿದೆ. ಈ ಮೂರು ಜಗತ್ತುಗಳ ಸ್ವರೂಪ ದರ್ಶನ ಇಲ್ಲಿ ಕಂಡು ಬರುತ್ತದೆ. ಇಲ್ಲಿ ಬರುವ ಕೆಂಚು ಲಕ್ಷ್ಮಿ, ಚೆನ್ನಿ, ಅವರ ಬದುಕು, ರಾಣಿ, ಅವರ ಬದುಕುಗಳು, ಅವರು ಆಯ್ದುಕೊಳ್ಳುವ ಜೀವನ, ಸಾಮಾಜಿಕ ಚಿಂತನೆಗೆ ಮುನ್ನೋಟ ನೀಡುವಂತಹವುಗಳು. ವಾಸ್ತವತೆಗೆ ಹಿಡಿದ ಕನ್ನಡಿಯಾಗಿ ಕಾಣುತ್ತವೆ.

ಹಲವಾರು ಸಾಮಾಜಿಕ ಸಂಕೀರ್ಣ ಸಮಸ್ಯೆಗಳನ್ನು ಕಾದಂಬರಿ ಮೂಲಕ

ರೋಚಕವಾಗಿ 'ರಂಗಸ್ಥಳ' ಕಾದಂಬರಿಯಲ್ಲಿ ಮೂಡಿಸಿದ್ದಾರೆ. ಎಲ್ಲೋ ಒಂದು ಕಡೆ ಲೈಂಗಿಕ ಸ್ವಚ್ಛಂದದ ಕಡೆ ಹೆಚ್ಚು ಒತ್ತು ಸಿಕ್ಕಿದಂತೆ ಕಂಡು ಬರುತ್ತೆ. ಕಡೆಯಲ್ಲಿ ಕೆಲವೊಂದು ಪಾತ್ರಗಳಿಗೆ ನ್ಯಾಯ ಒದಗಿಸಿ ಕೊಡಲು ಲೇಖಕರು ಪ್ರಯತ್ನಿಸಿದ್ದರೂ ಕೂಡ ಅವರಿಂದಾಗಿ ಅನೇಕ ಜೀವಿಗಳಿಗೆ, ಅವರ ಬದುಕಿಗೆ, ಆಗಿದ್ದ ಅನ್ಯಾಯ ಶೋಷಣೆಗೆ ನ್ಯಾಯ ದೊರತಿಲ್ಲ. ಪಶ್ಚಾತ್ತಾಪವಾದ್ರೂ, ಪ್ರಾಯಶ್ಚಿತ್ತವಾದರೂ ಆಗಿದ್ದಿದ್ದರೆ, ನೊಂದ ವರ್ಗದ ಅನೇಕ ಪಾತ್ರಗಳಿಗೆ ನ್ಯಾಯ ದೊರಕದಿದ್ದರೂ ಸಮಾಧಾನವಾದರೂ ಸಿಗುತ್ತಿತ್ತು.



# ಗೆಜ್ಜೆ ಕಟ್ಟಿದ ಹೆಜ್ಜೆ

## ವೈಜ್ಞಾನಿಕ ನೆಲೆಗಟ್ಟಿನ 'ಕ್ಲಾಸಿಕ್ ಡಿಟೆಕ್ಟಿವ್'

—ಗಂಡಸಿ ವಿಶ್ವೇಶ್ವರ

ಪತ್ತೇದಾರಿಕೆ–ಚಾತುರ್ಯದ ನೆಲೆಗಟ್ಟಿನ ಮೇಲೆ ಮಲೆತು ನಿಂತ ಬುದ್ಧಿ ಕ್ರಿಯೆ. ವಿಚಾರಶಕ್ತಿ ಹಾಗೂ ಕಲ್ಪನಾಶಕ್ತಿಯ ಸಮ್ಮಿಳನ. ಪತ್ತೇದಾರ ಚಾಣಾಕ್ಷ್ಯತನದಿಂದ ಮಾಹಿತಿ ಸಂಗ್ರಹಿಸಿದರಷ್ಟೇ ಸಾಲದು. 'ಆಹ್' ಎನಿಸುವಂಥ. ನಿಬ್ಬೆರಗಾಗಿಸುವ ಕಲ್ಪನೆ ಹಾಸು ಹೊಕ್ಕಾಗಿದ್ದರೇನೇ. ಪತ್ತೇದಾರಿಕೆ ಸಾರ್ಥಕ.

ಪತ್ತೇದಾರಿ ಅಪರಾಧ ಕಥೆಗೆ ಸೇರಿದೆ. ಆದರೆ ಇಲ್ಲಿ ಅದ್ಭುತ ರಮ್ಯಕಥೆಗೆ ಅಗ್ರ ತಾಂಬೂಲವಿದ್ದರೂ ಅದು ನೈಜತೆಯ ಭ್ರಮೆಯನ್ನು ಹುಟ್ಟಿಸಿ—'ಓಹ್ !' ಎನಿಸುತ್ತದೆ. ಈ ಓಹ್ ಅಥವಾ ಮೈಜುಮ್ಮೆನಿಸುವಿಕೆ ಶಾಶ್ವತವಾಗಿ ಮಿದುಳಿನಾಳದಲ್ಲಿ ನಿಲ್ಲುವಂಥ ಕ್ರಿಯೆಯಲ್ಲ. ಹೀಗಾಗಿ ಸೀಮಿತ ಪರಿಧಿಯಲ್ಲಿ ಮಾತ್ರ ಗಿರಕಿ ಹೊಡೆದು ನಿರ್ದಿಷ್ಟ ಸಾಹಿತ್ಯಕ ಉದ್ದೇಶಗಳನ್ನು ಸಾಧಿಸುವುದಿಲ್ಲ.

ಆದರೆ ಓದುಗರ ಸಂಖ್ಯೆ ಗಮನಾರ್ಹವಾಗಿ (ಇತರ ಪ್ರಭೇದಗಳಾದ ಸಾಮಾಜಿಕ ಕಥೆ. ಕಾದಂಬರಿ. ನಾಟಕ ಇತ್ಯಾದಿಗಳಿಗೆ) ಇರದಿದ್ದರೂ ಇದರ ವರ್ಗೀಕರಣವೂ ಸಾಹಿತ್ಯ ವೃಕ್ಷದ ಮಗದೊಂದು ಕೊಂಬೆಯಾಗಿದೆ ಎನ್ನಲು ಅಡ್ಡಿ ಇಲ್ಲ.

ಇದಕ್ಕೆ ಇನ್ನೊಂದು ಕಾರಣ. ಇಂದು ದಿಢೀರನೆ–ಅರ್ಧ ಸಾಮಾಜಿಕ. ಅರ್ಧ ಪತ್ತೇದಾರಿ ವಸ್ತುವನ್ನು ಹದವಾಗಿ ಮಿಶ್ರಣ ಮಾಡಿ ರೂಪುಗೊಂಡು–ಓದುಗರನ್ನು ಆಕರ್ಷಿಸುತ್ತಾ ಇರುವ 'ಸಾಮಾಜಿಕ ಥ್ರಿಲ್ಲರ್'ಗಳ ಜೊತೆಗೆ. ಇಂದಿನ ಬಹುತೇಕ ಕಾದಂಬರಿಗಳಲ್ಲಿನ ಈ ಥ್ರಿಲ್. ಹಿಂದಿನ ಪತ್ತೇದಾರಿಕೆಗೇ ಮೀಸಲಿದ್ದ ಕಾದಂಬರಿಗಳಲ್ಲಿ ಇತ್ತು. ಆದರೆ ಅಲ್ಲಿದ್ದ ಸಂಚು ಮಾಡುವ ಥ್ರಿಲ್ ಇಡೀ ಪುಸ್ತಕದುದ್ದಕ್ಕೂ ವಿಸ್ತರಿಸುತ್ತಿದ್ದ ಕಾರಣ. ಒಮ್ಮೊಮ್ಮೆ ಪೇಲವವಾಗಿ ಮಗದೊಮ್ಮೆ ಜಾಳಾಗಿ ಕಾವು ಕಳೆದುಕೊಂಡು ಬಿಡುತ್ತಿತ್ತು.

ಆಧುನಿಕ ಸಂಕೀರ್ಣ ಬದುಕಿನಲ್ಲಿ. ಅನಿಶ್ಚಿತ ಪರಿವೇಶದಲ್ಲಿ ಈ ಸಾಮಾಜಿಕ ದ್ರೋಹಗಳು ಸಾಕಷ್ಟು ಪಿಡುಗುಗಳನ್ನು ಹುಟ್ಟುಹಾಕಿಕೊಂಡಿವೆ ಎನ್ನುವುದರಲ್ಲಿ ಎರಡು ಮಾತಿಲ್ಲ.

ಹೀಗೆ **1841**ರಲ್ಲಿ ಸ್ವತಂತ್ರ, ಪ್ರಭೇದವಾಗಿ ಸ್ಪಷ್ಟ ರೂಪು ಗಳಿಸಿದ ಈ ಪತ್ತೇದಾರಿ ಕಾದಂಬರಿ. ಸರ್ ಆರ್ಥರ್ ಕಾನನ್ ಡಾಯರ್‌ನಿಂದಾಗಿ ಸುವರ್ಣಯುಗ ಕಂಡಿತು. ಜಾಕ್ ಫುಟ್ರೇಲ್, ಚಸ್ಟರ್‌ಟನ್. ಬೆಂಟ್ಲೀ. ಮೇಸನ್. ವಾನ್‌ಡೈನ್. ಬರ್ಕ್‌ಲೀ. ಅಗಥಾ ಕ್ರಿಸ್ಟೀ. ಸೀಮನ್ಸ್ ಇತ್ಯಾದಿ ಸಾಹಿತಿಗಳಿಂದಾಗಿ ಕ್ರೈಂ ನಾವೆಲ್ ಜನಪ್ರಿಯತೆಯ ಸಿಂಹಾಸನ ಏರಿತು.

ಅಮೆರಿಕೆಯ ಡ್ಯಾಶಿಯಲ್ ಹ್ಯಾಮೆಟ್ ಪ್ರೋ ಈ ಪ್ರಕಾರಕ್ಕೆ ಹೊಸ ಆಯಾಮ ನೀಡಿದ. ಹೊಸ ತಿರುವು. ಹೊಸ ಹುಟ್ಟುಗಳಿಂದ—'ಅಪರಾಧ ಏಕೆ ನಡೆಯಿತು' ಎಂಬ ವೈಚಾರಿಕತೆ. ಮಥನ. ಪ್ರತ್ಯಾರ್ಥಕಗಳ ಮಹಾಪೂರ ಸಾಗಿ 'ಅಪರಾಧ ಕಾದಂಬರಿ' ತಲೆಯೆತ್ತಿತು. ಅಪರಾಧ ಹೇಗೆ ನಡೆಯಿತು. ಏಕೆ ನಡೆಯಿತು ಎಂಬವು,ಕುತೂಹಲ. ಮನರಂಜನೆ ಪ್ಲಸ್ ಗಂಭೀರ ಸಾಹಿತ್ಯಕ ಉದ್ದೇಶ ವನ್ನು ಘನೀಭೂತವನ್ನಾಗಿಸಿತು.

ಒಂದು ಸುಂದರ ಸಂಸಾರ. ಗಂಡ. ಹೆಂಡತಿ ಒಬ್ಬ ಮಗ ಅಥವಾ ಮಗಳು. ಸಾಕಷ್ಟು ಸಿರಿವಂತರು. ಗಂಡನಿಗೆ ಉನ್ನತ ಹುದ್ದೆ. ಇವರ ಆಸ್ತಿ ಮೇಲೆ ಖಳನಿಗೆ ಕಣ್ಣು. ಇರುವ ಏಕೈಕ ಮಗನನ್ನು ಅಪಹರಿಸಿದರೆ—ಸಾಕಷ್ಟು ಗಿಟ್ಟಿಸಬಹುದು ಎಂಬ ಯೋಜನೆ ರೂಪಿಸುತ್ತಾನೆ. ಸರಿ ಅಪಹರಣ. ನಂತರ ಫೋನ್ ಕರೆ. ಇಂಥ ಕಡೆಗೆ ಇಂತಿಷ್ಟು ಹಣದೊಂದಿಗೆ ಬರಬೇಕೆಂಬ ನಿರ್ದೇಶನ. ಪೋಲಿಸರಿಗೆ ತಿಳಿಸಿದರೆ ಒಂದು ಆಪತ್ತು. ಸರಿ ಖಾಸಗಿ ಪತ್ತೇದಾರನಿಗೆ ಶರಣು. ನಂತರ ಶೋಧ. ಗೋಜಲಿನ, ಆತಂಕದ ಕ್ಷಣಗಳು. ಬುದ್ಧಿ, ಚಾತುರ್ಯ. ತರ್ಕಗಳ ವಿಜೃಂಭಣೆ. ಖೂಳನಿಗೆ ಬೇಡಿ. ಸುಖಾಂತ್ಯ.

ಇದೊಂದು ಬಗೆಯ ಪತ್ತೇದಾರಿ ಆದರೆ ಇನ್ನೊಂದು ಮಾದರಿ ಇದೆ. ಇದು ಪತ್ತೇದಾರಿ ಕಂ ಸಾಂಸಾರಿಕ. ದೇಶದ್ರೋಹದಲ್ಲಿ ತೊಡಗಿದ ತಂಡ. ಸ್ಮಗ್ಲಿಂಗ್ ನಿರತ ಭಂಡರು. ಬ್ಲಾಕ್ ಮೇಲ್ ನಿಪುಣರು. ಪತ್ತೆ ಹಚ್ಚಲು ಬರುವ ಅಧಿಕಾರಿಗೆ ಬಂತು ವಿಪತ್ತು. ಅಧಿಕಾರಿ ಹೆಂಡತಿ ಮಕ್ಕಳಿಗೆ--ಕಿರಿಕಾಟ. ಸಂಸಾರದಲ್ಲಿ ಏರುಪೇರು. ಅಧಿಕಾರಿ ಛಲ ಬಿಡದ ತ್ರಿವಿಕ್ರಮ. ಆಧುನಿಕ ತಂತ್ರಜ್ಞಾನದಲ್ಲಿ ನಿಷ್ಣಾತ. ಯಂತ್ರ ವಿಜ್ಞಾನದಲ್ಲಿ ಪಕ್ವ ಪರಿಣತ. ಅತ್ಯಂತ ಸೂಕ್ಷ್ಮ ಸಂಯಂತ್ರಗಳ ಬಳಕೆಯಲ್ಲಿ

ಅಗ್ರಗಣ್ಯ. ಛಂಡರ ತಂತ್ರಕ್ಕೆ ಪ್ರತಿತಂತ್ರ. ಅವರ ಚಕ್ರವ್ಯೂಹ ಇದರಿಂದಾಗಿ ಚಿಂದಿ-ಚಿಂದಿ.

ಸಾಂಸಾರಿಕ ಹಿನ್ನಲೆಯಲ್ಲೇ ಸಾಗುವ ಇಂಥ ಪತ್ತೇದಾರಿ ಕಾದಂಬರಿಗಳಲ್ಲಿ ಪರಿಸ್ಥಿತಿಯ ಅಧ್ಯಯನ. ಬುದ್ಧಿ ಚಾತುರ್ಯ. ತರ್ಕಜ್ಞಾನ. ಚಾಣಾಕ್ಷ್ಯತನಗಳಿಂದ ವಿಜೃಂಭಿಸುವ ನಾಯಕ, ಓದುಗರಿಗೆ ಸದಾ ಥ್ರಿಲ್ ಕೊಡುತ್ತಾನೆ. ಹೆಜ್ಜೆ-ಹೆಜ್ಜೆಗೂ ಕುತೂಹಲ ಹುಟ್ಟಿಸುತ್ತಾನೆ. ಅಧ್ಯಾಯಗಳು ಅನಿರೀಕ್ಷಿತವಾಗಿ ಮುಗಿದು, ಚಡಪಡಿಸುವ ಸ್ಥಿತಿ ತಂತಾನೆ ಸೃಷ್ಟಿಯಾಗುತ್ತದೆ. ಉಸಿರು ಕಟ್ಟಿಸುವ ಘಳಿಗೆಗಳು, ಪ್ರತಿ ತಂತ್ರ, ವ್ಯೂಹಗಳು. ಜತೆಗೆ ಸಾಹಿತ್ಯಕ ಅಂಶಗಳಿಗೂ ಠಾವು ಸಿಕ್ಕುತ್ತದೆ.

—ಎಸ್. ವಿ. ಶ್ರೀನಿವಾಸರಾವ್ ಈ ಎರಡನೇ ಬಗೆಯ ಪತ್ತೇದಾರಿ ಕೃತಿಗಳನ್ನು ನೇಯುವುದರಲ್ಲಿ ಬುದ್ಧಿವಂತರು. ಅವರ 'ಗೆಜ್ಜೆ ಕಟ್ಟಿದ ಹೆಜ್ಜೆ' ಆಧುನಿಕ ತಂತ್ರಜ್ಞಾನ, ವಿಜ್ಞಾನವನ್ನು ಸಕತ್ತಾಗಿ ಮುಡಿಸಿಕೊಂಡಿರುವ, ಮುದ ಕೊಡುವ, ಥ್ರಿಲ್ ನೀಡುವ ಶುದ್ಧ ಪತ್ತೇದಾರಿ ಕೃತಿ ಅರ್ಥಾತ್ ಕ್ಲಾಸಿಕ್ ಡಿಟೆಕ್ಟಿವ್ !

ಕಾದಂಬರಿ ಆರಂಭವಾಗುವುದು ದಿಲೀಪ್‌ಮೆಹ್ತಾನಿಂದಾಗಿ. ಕೊನೆಯಾಗುವುದು ಮುಕುಂದನ ಮೂಲಕ. ಹೇಳುವುದಾದರೆ ದಿಲೀಪ್‌ಮೆಹ್ತಾನ ಕಥೆ ತೀರಾ ಗೌಣ. ಏಕೆಂದರೆ 266 ಪುಟಗಳಲ್ಲಿ ಅವನ ಕಥೆ-ವ್ಯಥೆಗೆ ಕೇವಲ 66 ಪುಟಗಳು ಮಾತ್ರ. ಉಳಿದೆಲ್ಲ ಮುಕುಂದನದು. ಅವನೇ ಕೃತಿಯ ನಾಯಕ. ಹಾಂಟ್ ಚಿತ್ರಗಳಲ್ಲಿ ಮೊದಲಿಗೆ ಒಂದು ದೃಶ್ಯ ಬರುತ್ತದೆ. ಆ ದೃಶ್ಯ ಮುಂದಿನ ಕಥೆಗೆ ಒಂದು ಬಗೆಯ ಪ್ರತಿಪಾ ವಿಧಾನದ ಕಥೆ ಹೇಳಲು ಪೂರಕವಾಗಿ ಬರುತ್ತದೆ. ಅದೇ ರೀತಿ ದಿಲೀಪ್ ಮೆಹ್ತಾನ ಕಥೆ. ನಿಜವಾದ ಹೀರೋ ಮುಕುಂದನ ಪತ್ತೇದಾರಿಕೆಗೆ ಕೇವಲ ಒಂದು ಎಳೆ. ಕ್ಲೂ !

ದಿಲೀಪ್ ಮೆಹ್ತಾ ಮುಂಬಯಿಯಿಂದ ದೆಹಲಿಗೆ ಬಂದ ಅಧಿಕಾರಿ. ಹೋಂ ಸೆಕ್ರೆಟರಿಯೇಟ್‌ನಿಂದ ಬಡ್ತಿ ಪಡೆದು ಬಂದವ. ಎಕ್ಸ್‌ಟರ್ನಲ್ ಅಫೇರ್ಸ್ ಮಿನಿಸ್ಟ್ರಿಯಲ್ಲಿ ಪ್ರೈವೇಟ್ ಸೆಕ್ರೆಟರಿ. ಜವಾಬ್ದಾರಿಯುತ ಹುದ್ದೆ.

ಭದ್ರಿಯೇನೋ ಸಿಕ್ಕಿದೆ. ಆದರೆ ಅದಕ್ಕೆ ಮೆಹ್ತಾ ಅರ್ಹನೇ ? ಅವನ ಜತೆಯಲ್ಲೇ ಕೆಲಸ ಮಾಡುವ, ಫ್ಲಾಟ್‌ನಲ್ಲೇ ವಾಸಿಸುವ ಇತರೇ ಭ್ರಷ್ಟ ಅಧಿಕಾರಿಗಳಂತೆ ಇವನೂ ಏಕೆ 'ಸಂಥಿಂಗ್' ಕಮಾಯಿಗೆ ಮನಸ ತೆತ್ತಿರಬಾರದು ? ಅವಕಾಶಕ್ಕಾಗಿ ಕಾದಿರಬಾರದು.... ?

ಸಂದೇಹದ ಹಲವು ಪದರುಗಳ ಸೃಷ್ಟಿ, ಗಂಡನ ನಡತೆ ಬಗ್ಗೆ ಹೆಂಡತಿಗೆ ಅನುಮಾನ ಬರುವಂತೆ-ಕೆಲ ಘಟನೆಗಳ ಸೃಷ್ಟಿ. ಬ್ಲಾಕ್‌ಮೇಲ್. ಡೈಮಂಡ್ಸ್ ತುಂಬಿದ ಪ್ಲಾಸ್ಟಿಕ್ ಚೀಲ-ಅವನ ಜೇಬಲ್ಲಿ. ಸಾಗಾಣಿಕೆದಾರರ ಕುತಂತ್ರಕ್ಕೆ ಬಲಿ. ಮೆಹ್ತಾ ಕಕ್ಕಾಬಿಕ್ಕಿ. ಏನೂ ತಿಳಿಯದ ನಿಷ್ಕಪಟಿ. ಆದರೆ ಸತ್ಯ ಹೇಳಿದರೂ ಹೆಂಡತಿ ನಂಬಳು. ಏಕೆಂದರೆ ಅಷ್ಟೊಂದು ದೊಡ್ಡ ಸಾಕ್ಷಿ ಎದುರಿಗೆ !

ಮೆಹ್ತಾನ ಬದುಕಿನಲ್ಲಿ ವಿಷವರ್ತುಲಗಳ ಅಡ್ಡರಸ್ತೆಗಳು. ಏನು ಮಾಡಿದರೆ ಸರಿ. ಏನು ಮಾಡಿದರೆ ತಪ್ಪು–ನಿರ್ಣಯ ಪೆಂಡುಲಂ. ಲಾಲ್‌ಕಿಲಾ ಹತ್ತಿರ ಹೋಗಿ ಪೊಟ್ಟಣ ಎಸೆದು ನಿರಾತಂಕದಿಂದ ಬರಲು ನಿರ್ಧಾರ. ಇನ್ನೇನು ಎಸೆಯಬೇಕು ಫ್ಲಾಷ್ ಬೆಳಕು. ಕತ್ತಲಲ್ಲಿ ಕ್ಯಾಮರಾ ಕ್ಲಿಕ್ ! ಮತ್ತೆ ಮೆಹ್ತಾ ಉರಿವ ಬಾಂಡಲಿಯಿಂದ ನೇರ ಬೆಂಕಿಗೇ ಬಿದ್ದ. ಖಳರ ಕೈನಲ್ಲಿ ಅಸಹಾಯಕ ಬಂದಿ. ಅವರಿಗಾಗಿ ಕೆಲಸ ಮಾಡುವಂತೆ ಆಗ್ರಹ. ಕೆಲ ಮುಖ್ಯ ಪತ್ರಗಳ ನಕಲು. ಅದಕ್ಕಾಗಿ ವಿಶಿಷ್ಟ ವೈಜ್ಞಾನಿಕ ಉಪಕರಣ. ಕೆಲಸ ಮಾಡದಿದ್ದರೆ ಪರಿಣಾಮದ ಭೀಕರತೆಯ ದರ್ಶನ.

ಮೆಹ್ತಾ ಅಡಕತ್ತರಿಯಲ್ಲಿ ಸಿಕ್ಕ ಗೋಟು. ಇಲ್ಲದ ಫಿಲ್ಮ್ ಕೊಡಲು ಹೇಗೆ ಸಾಧ್ಯ ? ಖಳರ ಮಾತಿಗೆ ಪ್ರತಿ ತಂತ್ರ ಹೂಡಲು ವ್ಯವಧಾನವಿಲ್ಲ. ಮೆಹ್ತಾ ನಿರ್ಲಕ್ಷ್ಯ ತೋರಿದ. ಹೆಂಡತಿ ಮಕ್ಕಳ ಸುಖ ಕಡೆಗಣಿಸದೆ–ಇಂಥ ಕರಿಹಾದಿಯಲ್ಲೇ ಸಾಗಲು ಉಪದೇಶ ನೆರೆಯ ರಾಂನಾರಾಯಣ್‌ನಂಥವರಿಂದ. ಆದರೆ ಕಾಗದದ ಪ್ರತಿಯನ್ನು ಮೆಹ್ತಾ ದೂರವಾಣಿ ಕರೆ ತಿಳಿಸಿದಂತೆ ಯಾವ ಹೆಣ್ಣಿನ ವ್ಯಾನಿಟಿಗೂ ತುರುಕದೆ ನೇರ ಮನೆಗೆ ಧಾವಿಸಿದ.

ಬರುವಷ್ಟರಲ್ಲಿ ಆಘಾತ. ಮಗನಿಗೆ ಆಕ್ಸಿಡೆಂಟು. ಇದು ಗ್ಯಾಂಗಿನ ಕೆಲಸ ಎಂದೇ ಹೆಂಡತಿಯ ಅನಿಸಿಕೆ. ಸತ್ಯಸಂಧತೆ ಬಿಟ್ಟು ಎಲ್ಲರಂತಿರಲು ಅನುನಯದ ಕೋರಿಕೆ. ಸಂಬಳಕ್ಕಿಂತ ಗಿಂಬಳದ ಬಗ್ಗೆ ಕಾಳಜಿ ವ್ಯಕ್ತ ಪಡಿಸುವ, ಫ್ಲಾಟಿನಲ್ಲಿರುವವರ ಬಗ್ಗೆ ಹೆಂಡತಿಯಿಂದ ಮಾಹಿತಿ. ನ್ಯಾಯವಾಗಿದ್ದರೆ ಸುಖ ಮರೀಚಿಕೆ ಎಂಬ ಉಪದೇಶ.

ಮೆಹ್ತಾನ ತಲೆ ಈಗ ಗೊಂದಲಪುರ. ಚಿಂತೆಗಳ ಹುತ್ತ. ಬೆಳಗ್ಗೆ ಎದ್ದಾಗ ಬೀರುವಿನಲ್ಲಿರಿಸಿದ್ದ ಡೈಮಂಡ್ಸ್ ನಾಪತ್ತೆ ! ಕಛೇರಿಗೆ ಬಂದರೆ ಅಲ್ಲೂ. ಉಪದೇಶ. "ಬದುಕುವ ದಾರಿ ಕಲಿಯಿರಿ". ಯಾವುದು ಆ ದಾರಿ. ಕಣ್ಣಿದ್ದೂ ಕುರುಡನಾಗುವ ದಾರಿ–ಭ್ರಷ್ಟಾಚಾರ ! ದಿಲೀಪ ಮೆಹ್ತಾನ ಆತ್ಮಸಾಕ್ಷಿಗೆ ಈ ಹಾದಿ 'ಹೊಲಸು'. ಮನ ಪ್ರಕ್ಷುಬ್ಧ ಸಾಗರ. ಸೆಕ್ಸೇನಾ ಸಹ ಆ ಹಾದಿಯಲ್ಲೇ ಸಾಗಲು ಸಲಹೆ ನೀಡು

ತ್ತಾರೆ. ಏಕೋ ಮಧ್ವನ ಒಳದನಿ– "ಈ ಸಂಪಾದನೆ ಕ್ಷಣಿಕವಷ್ಟೇ ಅಲ್ಲ ಕ್ಷುಲ್ಲಕ ಕೂಡ. ಬೇಡ" ಎನ್ನುತ್ತದೆ. ಡೆಪ್ಯುಟಿ ಸೆಕ್ರೆಟರಿ ಬಳಿ ಬಂದಾಗ ಅಲ್ಲೊಬ್ಬ ಆಗಂತುಕ. ಕಾದಿದ್ದ ಅವರು ಆಗಂತುಕರನ್ನು ಪರಿಚಯಿಸಿದಾಗ ಮಧ್ವಗೆ ಅಚ್ಚರಿ. ಅರೆ ಈತನೇ ಅಲ್ಲವೇನು ಆಗಾಗ್ಗೆ ಕೋಟೆವರೆಗೆ ತನ್ನನ್ನು ಹಿಂಬಾಲಿಸಿ ಬಂದವನು! ಕ್ಯಾಮರಾ ಕ್ಲಿಕ್ಕಿಸಿದವನು! ಮತ್ತೆ.... ಮತ್ತೆ....

ಡೆಪ್ಯುಟಿ ಸೆಕ್ರೆಟರಿಯಿಂದ ಸ್ಪಷ್ಟೀಕರಣ. ಹೊಸದಾಗಿ ಹುದ್ದೆಗೆ ಬಂದಿದ್ದರಿಂದ ನಿಗಾ ಇಡಲು ಮಾಡಿದ್ದ 'ವ್ಯವಸ್ಥೆ'–ಇದು. ಒಳ್ಳೆ ವರದಿ ನೀಡಿದ್ದಾರೆ. ಮಂಜಿನಂತೆ ಕರಗಿತ್ತು ಬೆಟ್ಟ. ಪರಿಹಾರವಾದ ಅನುಮಾನದಿಂದಾಗಿ ಮಧ್ವ ಉಲ್ಲಸಿತ. 'ಏನೋ' ನಿಧಿ ಸಿಕ್ಕಿತ್ತು.

ಆದರೆ ಮನೆಯಲ್ಲಿ ಸ್ವಲ್ಪ ಉಲ್ಟಾ. ಕಳವಿನ ಬಗ್ಗೆ ದೂರು ಕೊಡದಿದ್ದಕ್ಕೆ ಆಕ್ಷೇಪ. ಸಣ್ಣ ತಡೆ. ವೇಲಾಯುಧನ್ ಆಗಮನ. ಅಧಿಕಾರಿಯಿಂದ ಕ್ಷಮಾಯಾಚನೆ. ಹಾವು ಹೂವಾಗಿತ್ತು.

ನಂತರ ಎಲ್ಲರ ಹಾದಿಯಲ್ಲೇ ಸಾಗುವಂತೆ ಪತ್ನಿಯಿಂದ ಆಗ್ರಹ. ಇದೇ ದಿನ ಉಪದೇಶ. ಎಲ್ಲರೂ ಒಳಹಾದಿಯಲ್ಲೇ ಸಾಗಿ ಸಾಕಷ್ಟು ಮಾಡಿಕೊಳ್ಳುತ್ತಿದ್ದಾರೆ. ನಾವೇನೂ ಸತ್ಯಸಂಧರಾಗಬೇಕಾಗಿಲ್ಲ. ವೇಲಾಯುಧನ್ ಹೇಗೆ ಹೀಗಾಗಿದ್ದಾನೆ ಎಂಬ ಉದಾಹರಣೆ. ಅವನ ಕೆಲ್ಸ ಮಾಡಿ ಕೊಟ್ಟರೆ ಕೈತುಂಬಾ ಕಮಾಯಿ. ಅವನ ಮಾತು ಕೇಳದಿದ್ರೆ ಪರಿಣಾಮ ಭೀಕರ. ಎಚ್ಚರಿಕೆಯ ಕರೆಗಂಟೆ. ಕಛೇರಿ ಕೆಲಸದಲ್ಲಿ ತಲೆ ಹಾಕದಿರುವಂತೆ ತಾಕೀತು ಮಧ್ವನಿಂದ. ಮಡದಿಗೆ ಇವರಿಂದ ಮುನಿಸು.

ಬೆಳಗ್ಗೆ ಮತ್ತೊಂದು ಬಾಂಬ್. ಅದು ಆಮಿಷದ ಸ್ಯಾಂಪಲ್. ಹತ್ತು ಸಾವಿರದ ಬಂಡಲ್. ಕೆಲಸಕ್ಕೆ ಅಡ್ವಾನ್ಸ್. ಮಧ್ವ ಕೆರಳಿದ. ಹಣವನ್ನು ಒಳಗಿಟ್ಟ.

ಇಂದು ಮಗಳ ಬರ್ತ್‌ಡೇ. ಬೇಗ ಹೋಗಬೇಕು. ಆದರೆ ಮಧ್ವ ಎದುರು ಗೊದ್ದಗಳ ಗೂಡು. ಒಂದು ಮುಗಿಯಿತೆಂದು ನಿಟ್ಟುಸಿರಿನ ಬೆನ್ನಿಗೇ ಮತ್ತೊಂದು ದುರ್ಘಟನೆ. ಸುತ್ತ ಸುತ್ತುತ್ತಿರುವ ವಿಷವರ್ತುಲದಿಂದ ಪಾರಾಗುವ ಬಗೆ.... ? ಕಛೇರಿಯಲ್ಲಿ ವ್ಯಸ್ತನಾಗಿದ್ದಾಗ ಮತ್ತೆ 'ಎಂ' ಪತ್ರ ಕಾಪಿ ಮಾಡಿ ಕಳಿಸುವಂತೆ ಆದೇಶ. ಮಧ್ವ ಪೆಂಡುಲಂ. ಅದನ್ನು ನೇರ ಪಡೆಯಲು ಬಂದ ಸುಂದರಿ ರೇಖಾ. ನಾನೇ ತಲುಪಿಸುವೆ. ಅಂಥವನ್ನು ಹಾಗೆಲ್ಲ ಕೊಡುವಂತಿಲ್ಲ ಎಂದ ಮಧ್ವ.

ತನ್ನ ಕಾರಿನಲ್ಲೇ ಬರುವಂತೆ ಸಪ್ರೇಮ ಆಹ್ವಾನ. ಮಾದಕ ಕರೆಗೆ ಬಿದ್ದ ಬಿಟ್ಟ ಮೆಹ್ತಾ. ಅವಳ ನಡೆ. ನುಡಿ. ಒಲವು ವೈಯ್ಯಾರಗಳಿಗೆ ಮೆಹ್ತಾ ಬಲಿಪಶು. ಅವಳ ಹೊಗಳಿಕೆಯು. ಸಾಮೀಪ್ಯದ ಸೋಂಕು ಕುಣಿಕೆಗೆ ಮೆಹ್ತಾ ತಲೆ ಕೊಟ್ಟ. ಪರಿಣಾಮ ಎಚ್ಚರಾದಾಗ-ಅಪರಿಚಿತ ಪ್ರದೇಶದಲ್ಲಿ ಅನಾಥ. ಹುಲ್ಲಿನ ಮೇಲೆ ಮಲಗಿದ್ದಾನೆ. ಕಾರಿಲ್ಲ. ಸುಂದರಿಯಿಲ್ಲ. ಬ್ರೀಫ್‌ಕೇಸಿನಲ್ಲಿದ್ದ ಪತ್ರಗಳೆಲ್ಲ ಸರಿಯಾಗಿವೆ. ಮತ್ತೆ ಇಲ್ಲಿಗೆ ಕರೆತಂದ ಉದ್ದೇಶ!

ಟ್ಯಾಕ್ಸಿ ಹಿಡಿದು ಕಛೇರಿಗೆ ಬಂದ. ಮನೆಯಿಂದ ಹೆಂಡತಿಯ ಕ್ರೋಧದ ಕರೆ. ಮಗಳನ್ನು ಮನೆಗೆ ಕರೆತರದೆ. ಕಛೇರಿಗೆ ಏಕೆ ಕರೆದುಕೊಂಡು ಹೋದಿರಿ? ಸ್ಕೂಲಿಗೆ ಫೋನು ಮಾಡಿದಾಗ ಅಲ್ಲಿಂದ ಸಿಕ್ಕಿತು ಈ ವಿಷಯ. ಮೆಹ್ತಾ ಕುಸಿದ. ಮಗಳನ್ನು ವ್ಯವಸ್ಥಿತವಾಗಿ ಯೋಜನೆ ರೂಪಿಸಿ—ಕಿಡ್‌ನ್ಯಾಪ್ ಮಾಡಿದ್ದಾರೆ! ಮೀನಾಳನ್ನು ಎಲ್ಲಿ. ಯಾರು. ಏಕೆ ಕಿಡ್ನ್ಯಾಪ್ ಮಾಡಿದ್ದಾರೆ?

ಮನೆಗೆ ಹೊರಟಾಗ ಸಿಕ್ಕ ಪತ್ರ—"ಹೇಳಿದ ಕೆಲಸ ಮಾಡದಿದ್ದರೆ ಪಶ್ಚಾತ್ತಾಪ ಪಡಬೇಕಾದೀತು" ಎಂಬ ಎಚ್ಚರಿಕೆ ನೀಡಿತು. ಜಿಜ್ಞಾಸೆ ಯಾರಿಗೆ ಹೇಳಲಿ? ದಾರಿಯಲ್ಲಿ ಬರುವಾಗ ಫಲಕವೊಂದು ದೃಷ್ಟಿ ಸೆಳೆಯಿತು. ಮುಕುಂದ್ ಡಿಟೆಕ್ಟಿವ್! ಜಿಗಿದ. ಅರೇ. ಈತ ಮದ್ರಾಸಿನಲ್ಲಿ ಖಾಸಗಿ ಪತ್ತೇದಾರನಾಗಿದ್ದನಲ್ಲವೇ? ಮತ್ತೆ ಪೋಲೀಸ್ ಇಲಾಖೆ? ಅಂತರ್ರಾಷ್ಟ್ರೀಯ ಸ್ಮಗ್ಲರ್‌ಗಳಿಗೆ ಸಿಂಹಸ್ವಪ್ನ ಈ ಮುಕುಂದ್. ಇವನೊಂದಿಗೆ ಪರಾಮರ್ಶಿಸಿದರೆ ಹೇಗಿರುತ್ತೆ? ಪಾದಗಳು ಅವನ ಕಛೇರಿಗೆ ಬಂದವು. ರಾಷ್ಟ್ರ ಪ್ರಶಸ್ತಿ ವಿಜೇತನಿಗೆ ಏನೆಂದು ತಿಳಿಸುವುದು? ಪುನಃ ಜಿಜ್ಞಾಸೆ. ಹೆಂಡತಿಗೆ ಫೋನಾಯಿಸಿದ. ಎಂಗೇಜ್ಡ್. ತನ್ನನ್ನೇ ಸಂಪರ್ಕಿಸುತ್ತಿರಬಹುದೇ? ಅಲ್ಲಿಗೇ ಒಂದು ಕರೆ ಮೆಹ್ತಾಗೆ? ಕಛೇರಿಗೆ ಹೋಗಿ ಕೆಲಸ ಮುಗಿಸಲು ಆಣತಿ. ಇಲ್ಲದಿದ್ದರೆ ಮಗಳು ಚಿಂದಿ. ಮೆಹ್ತಾನ ಗಂಟಲ ದ್ರವ ಒಣಗಿತು.

ಮುಕುಂದನ ನೂರು ಸಂದೇಹದ 'ಏಕೆ?' ಗಳಿಗೆ ಮೆಹ್ತಾ ತೊದಲಿದ. ತತ್ತರಿಸಿದ. ಗಾಬರಿಯಿಂದ ಹೊರಕ್ಕೆ ನಡೆದ. ಮುಕುಂದನ ಕ್ರಿಮಿನಲ್ ಮೈಂಡ್‌ನಲ್ಲಿ ಸಾವಿರ ದೃಶ್ಯಗಳು ಚಲನಚಿತ್ರಗಳು ಭಗ್ಗನೆ ಮೂಡಿದವು. ಅವನು ಹೋದ [illegible] ಕಿಟಕಿಯಲ್ಲಿ ಹಣಿಕಿದ. ಯಾವುದೋ ಅಪರಿಚಿತ ಬೈಕ್ ಅವನನ್ನು ಹತ್ತಿ ಹೋಯಿತು. ತಕ್ಷಣ ಮುಕುಂದ ಟೆಲಿಸ್ಕೋಪಿಕ್ ಕ್ಯಾಮರಾದಿಂದ ವಿವಿಧ ಭಂಗಿಗಳಲ್ಲಿ ದೃಶ್ಯ ಸೆರೆಹಿಡಿದ.

ಮೆಹ್ತಾ ಸಾವಿನಿಂದ ಪಾರಾಗಿದ್ದ. ಪ್ರಜ್ಞೆ ಹೋಗಿತ್ತು. ಪೋಲೀಸ್‌ಗೆ, ಅಂಬುಲೆನ್ಸ್‌ಗೆ ಫೋನಾಯಿಸಿದ. ಬರುವುದು ತಡವಾಗಬಹುದೆಂಬ ಶಂಕೆಯಿಂದ ತನ್ನ ಕಾರಿನಲ್ಲೇ ಆಸ್ಪತ್ರೆಗೆ ಸೇರಿಸಿದ. ಬಂದ ಬಳಿಕ ತನ್ನ ಲ್ಯಾಬ್‌ನಲ್ಲಿ ಕುಳಿತ. ಸ್ಪೆಕ್ಟ್ರೋಗ್ರಾಫ್‌ನಿಂದ ಪರೀಕ್ಷಿಸಿದ. ಡಿಕ್ಕಿ ಹೊಡೆದ ಟ್ರಕ್‌ನ ವೇಗ. ನಂಬರ್ ಪ್ಲೇಟಿಗೆ ಅಂಟಿದ್ದ ಮಣ್ಣು-ಟ್ರಕ್‌ನ ಅನ್ವೇಷಣೆಗೆ ನೇರವಾಗಿ ಟ್ರಕ್ ಸಿಕ್ಕಿತ್ತು.....

ಮೆಹ್ತಾನ ಮನೆ ಅಶಾಂತಿಯ ತೌರು. ಮಗಳು ನಾಪತ್ತೆ. ಮೆಹ್ತಾಗೆ ಆಕ್ಸಿಡೆಂಟು. ಹೆಂಡತಿ ನಳಿನಾ ಉನ್ಮತ್ತಾವಸ್ಥೆಯಲ್ಲಿದ್ದಳು. ಮಗ ಅನಿಲ್ ಕುಸಿದಿದ್ದ. ತಂದೆಯ ಪ್ರಾಣಕ್ಕೆ ಅಪಾಯವಿರಲಿಲ್ಲ. ಆದರೆ ಚೇತರಿಕೆಗೆ 10–12 ದಿವಸಗಳಾದರೂ ಬೇಕಾಗಿದ್ದವು. ಮೆಹ್ತಾ ಬೀರುವಿನಲ್ಲಿರಿಸಿದ್ದ ನೋಟುಗಳನ್ನು ಪರೀಕ್ಷಿಸಿದ. ಬೆರಳುಗಳ ಗುರುತುಗಳಿದ್ದರೂ ಅಸ್ಪಷ್ಟ. ಲೇಸರ್ ಪರೀಕ್ಷೆಗೊಪ್ಪಿದ ಮುಕುಂದ್. ಮೆಹ್ತಾ ಭ್ರಷ್ಟಾಚಾರಿಯಲ್ಲವೆಂಬುದನ್ನು ಹಿಂದಿನ ದಿನವೇ ಇಂಟೆಲಿಜೆನ್ಸ್ ಅನ್ನು ಸಂಪರ್ಕಿಸಿ ಖಾತ್ರಿಮಾಡಿಕೊಂಡಿದ್ದ. ಆದರೆ 'ಎಂ' ಪತ್ರಗಳ ಬಗ್ಗೆ ಯಾವ ಪುರಾವೆಯೂ ಸಿಕ್ಕಿರಲಿಲ್ಲ. ಮತ್ತೆ ಮೆಹ್ತಾ ಸುಳ್ಳುಗಾರನೇ ?

ಮುಕುಂದ್ ಅನಿಶ್ಚಿತತೆಯ ತೂಗುಯ್ಯಾಲೆಯಲ್ಲಿರುವಾಗಲೇ ಮೆಸೇಜ್ ಸಿಕ್ಕಿತ್ತು. "ಮೆಹ್ತಾ ಆಸ್ಪತ್ರೆಯಲ್ಲಿ ನಾಪತ್ತೆ !" ಅವನನ್ನು ಅಪಹರಿಸಲಾಗಿತ್ತು.

ಮುಕುಂದ್ ಚುರುಕಾದ. ಅನ್ವೇಷಣೆ ಬಿರುಸಾಗಿರುವಾಗಲೇ ಮುಕುಂದನಿಗೆ ಎತ್ತಂಗಡಿ. ಅಡ್ವೈಸರ್ ಹುದ್ದೆ. ನೇಪಾಳದ ಕೃಷಿ ಸಂಶೋಧನಾ ಕೇಂದ್ರದ ಸಲಹೆಗಾರ. ಖಟ್ಮಂಡುವಿಗೆ ವಿಮಾನಯಾನ.

ಇಲ್ಲಿಗೆ ಲೇಖಕರು ಮೆಹ್ತಾ ಪ್ರಕರಣವನ್ನು ತಾತ್ಕಾಲಿಕವಾಗಿ ನಿಲ್ಲಿಸುತ್ತಾರೆ. ನೇಪಾಳ–ಕೊಕೈನ್, ಹೆರಾಯಿನ್ ಇತ್ಯಾದಿ ಮಾದಕ ಪದಾರ್ಥಗಳ ಕಳ್ಳಸಾಗಾಣಿಕೆಗೆ ಹೆಸರಾಗಿದೆ. ವಿದೇಶಗಳು ಈ ಸಾಗಾಣಿಕೆಯ ಕೇಂದ್ರ. ನೆಟ್‌ವರ್ಕ್ ಜಾಲ. ಇದನ್ನು ಭೇಧಿಸುವುದು ಲೇಖಕರ ಮುಖ್ಯ ಉದ್ದೇಶ. ನೇಪಾಳವನ್ನು ಕೇಂದ್ರ ಬಿಂದುವನ್ನಾಗಿಟ್ಟುಕೊಳ್ಳುವುದು ಅವರ ಈ ಕಾದಂಬರಿಯ ಗುರಿಗಳಲ್ಲೊಂದು. ಇಲ್ಲೇ ಮುಕುಂದನಿಗೆ ಗೆಜ್ಜೆ ಕಟ್ಟಿದ ಹೆಜ್ಜೆ ಅರ್ಥಾತ್ ನಾಯಕಿ "ರಂಭಾ"

ಸಿಗುವುದು. ಅವಳ ಸಾಹಸ ಪ್ರವೃತ್ತಿಯೂ ಈ ಕೃತಿಗೆ ಸಾಕಷ್ಟು ಪ್ರೇರಣೆ ನೀಡಿದೆ. ಗಂಡಸಿನಂತೇ, ಅಪಾಯದ ಭೀಕರ. ಮಂಜು ಶಿಖರಗಳಲ್ಲಿ ಸಾಗಿ ಜಾಲ ಬೇಧಿಸುವ, "ಗಂಡಸು" ರಂಭಾ. ಆದರೆ ಅಷ್ಟೇ ಹಾತಾಳಗರಡಿ. ಸೂಕ್ಷ್ಮ ಮನೋಚನೆಯುಳ್ಳದೆ. ನವ–ಶಿಖಾಂತ ಪರಿಶೀಲಿಸದೆ ಯಾರನ್ನೂ ಸ್ವೀಕರಿಸದ ಧೀರೋದಾತ್ತೆ. ಪತಿಗುಣಗಳ ಪ್ರತಿರೂಪ. ಆಧುನಿಕ ವೈಜ್ಞಾನಿಕ ಉಪಕರಣಗಳನ್ನು ಸಮರ್ಥವಾಗಿ ಬಳಸಿಕೊಂಡು ನಂಬಿದವರನ್ನು ಕೊನೆತನಕ ಕೈಬಿಡದೆ ಕಾಪಾಡುವ ಮಮತಾ ಮೂಲ.

ಶ್ರೀನಿವಾಸರಾವ್ ಅವರ ಪತ್ತೇದಾರಿಗೇ ವಿಶಿಷ್ಟವಾದ ಭಾಷಾ ಬಳಕೆಯನ್ನು ಇಲ್ಲಿ ಗಮನಿಸಬಹುದು. ಭಾಷೆ ಸರಳ. ಪುಟ್ಟಪುಟ್ಟ ವಾಕ್ಯಗಳು ಕ್ಲಿಷ್ಟವಾಗಿಲ್ಲ. ಆದರೆ ಸಮರ್ಥ. ಇಂಗ್ಲಿಷ್ ಶಬ್ದಗಳ ಹೇರಳ ಬಳಕೆ. ಒಮ್ಮೊಮ್ಮೆ ಸಾಮಾನ್ಯಜ್ಞಾನವಿಲ್ಲದವರು "ಫ್ಯಾರಾ"ಗಳನ್ನು ಮಗುಚಿದರೂ ಅಚ್ಚರಿಪಡಬೇಕಿಲ್ಲ. ಕೆಲವೆಡೆ ಸೂಕ್ತ ವಿವರಣೆ—ಲೇಸರ್ ಬಗ್ಗೆ ವೈಜ್ಞಾನಿಕ ಪತ್ತೇದಾರಿ ಕಾದಂಬರಿಗೆ ಇಷ್ಟೊಂದು ಇಂಗ್ಲಿಷ್ ವಾಕ್ಯಗಳ, ಪದಸಮುಚ್ಚಯಗಳ ಬಳಕೆ ಅಗತ್ಯ ಅನಿವಾರ್ಯತೆಯೇ ಎಂದು ಹುಬ್ಬೇರಿಸುವಷ್ಟು ಬಳಕೆ ಇದ್ದರೂ ಎಲ್ಲೋ ಒಂದೆರಡು ಕಡೆ ಗಂಟಲಲ್ಲಿ ಸಿಲುಕುವುದು. ಆದ್ದರಿಂದ ಇದು ತೀರಾ ಗೌಣ.

ಪತ್ತೇದಾರಿ ಎಂದಕೂಡಲೇ ಒಂದು ಫಾರ್ಮುಲ ಕಣ್ಮುಂದೆ ನಿಲ್ಲುತ್ತದೆ. ಕೊಲೆ ಅಥವ ಅಪರಾಧ. ಅದರ ಶೋಧನೆಯಲ್ಲಿ ನಿರತ ಪತ್ತೇದಾರನಿಗೆ ಮಾನಸಿಕ ಬೆದರಿಕೆ. ದೈಹಿಕ ಹಿಂಸೆ. ಕೊನೆಯಲ್ಲಿ ಎಲ್ಲವೂ "ಶುಭಂ". ಇಲ್ಲಿಯೂ ಇಂತಹುದೇ "ಫಾರ್ಮುಲಾ" ಇದೆ. ಆದರೆ ಇಲ್ಲಿನ ಅರ್ಥಾತ್ ಈ ಕಾದಂಬರಿಯ ವಿಶೇಷವೆಂದರೆ ವೈಜ್ಞಾನಿಕ ಸಾಧನಗಳನ್ನು ರಚನಾತ್ಮಕ ಕೆಲಸಕ್ಕೆ ದುಡಿಸಿಕೊಳ್ಳುವ ಸದಾಶಯ ಅಣುಬಾಂಬಿನಂತೆ. ಕೊಲ್ಲಲೂ ಉಪಯೋಗಿಸಿಕೊಳ್ಳಬಹುದು. ಸೃಷ್ಟಿ ನಿರ್ಮಾಣಕ್ಕೂ ಬೆಳೆಸಿಕೊಳ್ಳಬಹುದು.

ಹೆಜ್ಜೆ ಹೆಜ್ಜೆಗೂ ಅಪಾಯ. ಬಿಳಿಸ ಸಾಹಸ ದಾಹದಲ್ಲೇ "ಸೆಲ್" ಕಂಡುಕೊಳ್ಳುವ ಅಂಜದ ಗಂಡಿನ ನಿರ್ಧಾರಗಳು ಓದುಗರನ್ನು ಬೆರಗುಗೊಳಿಸುತ್ತವೆ. ಕುತೂಹಲದ ಘಳಿಗೆಗಳು ಕೊನೆಯ ಪುಟದವರೆಗೂ ಪುಸ್ತಕವನ್ನು ಕೆಳಗಿಡದಂತೆ ಮಾಡುತ್ತವೆ. ಪ್ರಾಯಶಃ ಇದೇ ಶ್ರೀನಿವಾಸರಾಯರ ಸ್ಪೆಷಾಲಿಟಿ !

ಅವರ ಪಾತ್ರಚಿತ್ರಣ ಸ್ಟೀರಿಯೋ ಟೈಪ್ ಆಗಿಲ್ಲದಿರುವುದು ಕೃತಿಯ ಮತ್ತೊಂದು ಪ್ಲಸ್ ಅಂಶ. ಉದಾಹರಣೆಗೆ ಮುಕುಂದ ಅಥವ ರಂಭಾ.

ಮುಕುಂದ ಹೊಸ ಹುದ್ದೆ ಸ್ವೀಕರಿಸಲು ನೇಪಾಳಕ್ಕೆ ಬರುತ್ತಾನೆ ವಿಮಾನದಲ್ಲಿ. ಅವನ ನೆರಳಿನಂತೇ ಖಳರು ಅವನ ಬೆನ್ನಟ್ಟಿರುತ್ತಾರೆ. ಒಂದೆಡೆ ಸ್ವಾಗತಕ್ಕೆ ನಿಂತವರೂ ಅನುಸರಿಸುತ್ತಾರೆ, ಇನ್ನೊಂದೆಡೆ ಆವನನ್ನು ಇಲ್ಲವಾಗಿಸುವ ನಿರ್ಧಾರ ತಳೆದ ಗ್ಯಾಂಗು ಹಿಂಬಾಲಿಸುತ್ತದೆ. ಟ್ಯಾಕ್ಸಿಗೆ ಏರಿದಾಗಲೇ ಈ ಶೃಂಖಲೆ ಆರಂಭ. ಡ್ರೈವರನೂ ಇದರಲ್ಲಿ ಪಾರ್ಟನರ್. ಪ್ರಜ್ಞೆ ತಪ್ಪುತ್ತದೆ. ಆದರೆ ಎಚ್ಚರಾದಾಗ ಬೆಚ್ಚಗಿನ ಹಾಸಿಗೆಯ ಮೇಲೆ. ಸುಂದರಿ ರಂಭಾಳ ಸ್ವರ್ಗೀಯ ಸಾನ್ನಿಧ್ಯದಲ್ಲಿ ಮಲ್ಲುಲಿಯ ಉಪಚಾರದಲ್ಲಿ. ಖಳರ ಮೊದಲ ಯತ್ನ ವಿಫಲವಾಗುತ್ತದೆ.

ಎರಡನೇ ಯತ್ನ ಟೈಂಬಾಂಬ್ ಪ್ರಯತ್ನ. ಹಿಂದಿನ ದಿನ ಅವನ ಲಗೇಜ್‌ನಲ್ಲಿ—ಅದು ಕ್ಲೋಕ್‌ರೂಂನಲ್ಲಿದ್ದಾಗ ಖಳರು ಅದರಲ್ಲಿರಿಸಿದ್ದರು—ಅದೂ ವಿಫಲ ರಂಭಾಳ ಸಕಾಲಿಕ ಪ್ರಜ್ಞೆಯಿಂದಾಗಿ. ರಂಭಾ ಮೊದ-ಮೊದಲು ಒಗಟಾಗೇ ಉಳಿಯುತ್ತಾಳೆ ಮುಕುಂದನ ಪಾಲಿಗೆ. ಅಪಘಾತದ ಸುಳಿವು ಅವಳಿಗ ಹತ್ತಿದ್ದು ಹೇಗೆ ಎಂಬ ಜಿಜ್ಞಾಸೆ ಮುಕುಂದನಲ್ಲಿ ಬಗೆಬಗೆಯ ಸಂದೇಹಗಳ ರಿಂಗಣ ಸ್ಥಾಪಿಸುತ್ತವೆ. ಬೇಲಿಯೇ ಹೊಲ ಮೇಯುತ್ತಿದೆಯೋ? ಮೋಹದ ಹೂವೆಂದು ಬಗೆದದ್ದು ಹಾವೇ ? ರಂಭಾ ಖಳರ ಸುದ್ದಿ ವಾಹಕಳೇ ? ಡಬಲ್ ಕ್ರಾಸ್ ?

ಮುಕುಂದನ ಮಿದುಳು ಸೋಲುತ್ತದೆ. ಬಂದ ಕೆಲಸದತ್ತ ನಿಗಾ ವಹಿಸುತ್ತಾನೆ. ಗೌರೀಪ್ರಸಾದರು ವೈಜ್ಞಾನಿಕ ಸಂಯಂತ್ರಗಳನ್ನು ನೀಡುತ್ತಾರೆ. ಕಂಪ್ಯೂಟರ್ ವಾಚ್. ಸಿಗರೇಟ್ ಕೇಸ್ ಲೇಸರ್ ಕಂ. ರಿಸೀವರ್, ಮೈಕ್ರೋಫೋನ್ ಬಟನ್ ಕಾಲರ್, ಕನ್ನಡಕದ ಫ್ರೇಂನಲ್ಲಿ ಅಡಗಿಸಿದ ಸೆನ್ಸಿಟೀವ್ ಮೈಕ್ರೋಫೋನ್ ಡಾಲರ್ ಒಳಗೆ ಹುದುಗಿದ ಮೈಕ್. ಇವುಗಳ ಪ್ರಯೋಗ ಅರಿತ ಮುಕುಂದ ಖಟ್ಮಂಡುವಿಗೆ ಬಂದ. ಹೋಟೆಲ್‌ಗಳಲ್ಲಿ ಹೆರಾಯಿನ್ ಮಾರಾಟದ ದಂಧೆ ಬಲು ಜೋರೆಂದು ಕೇಳಿದ್ದ. ಪತ್ತೆಹಚ್ಚಲು ನಿರ್ಧರಿಸಿದ. 8–10 ಕೆ.ಜಿ. ಹೆರಾಯಿನ್ [illegible] ರೂಂ ಬಾಯ್ [illegible] ಪತ್ತೆ ಮಾಡಿದ. ಆದರೆ ಖಳರೊಡ್ಡಿದ

ಬಲೆಯಲ್ಲಿ ಬಿದ್ದ. ಇನ್ನೇನು ಚಾಕು ಅವನ ಗಂಟಲು ಹರಿದು ನೆತ್ತರನ್ನು ಚಿಮ್ಮಿಸಬೇಕು. ಮುಕುಂದ ತನ್ನ ಹಿಡಿದವನನ್ನು ಮುಂದೆ ತಳ್ಳಿ ಪಾರಾದ. ಆದರೆ ಸೆಲ್‌ನಲ್ಲಿ ಬಂದಿಯಾದ.

ಅವನ ಕೈಕಾಲುಗಳನ್ನು ಬಂಧಿಸಲಾಗಿತ್ತು. ಅವನ ಬೂಟಿನ ಒಳಗೆ ಪೀಜೋ ಹರಳಿನ ನೆನಪಾಯಿತು. ಅದನ್ನು ಒತ್ತಡಕ್ಕೆ ಒಳಪಡಿಸಿದರೆ ಕಿಡಿಗಳು ಹಾರುತ್ತವೆ. ಅದರಿಂದ ಬೆಂಕಿ ಉತ್ಪತ್ತಿಯಾಗಬಹುದು. ಹುಲ್ಲು ಭಗ್ಗೆಂದಿತು. ನೈಲಾನ್ ಹಗ್ಗ ಕರಗಿತು. ಚರ್ಮವೇನೋ ಸುಟ್ಟು ಅಸಾಧ್ಯ ನೋವಾದರೂ ಬಂಧನದಿಂದ ಮುಕ್ತನಾದ.

ಗಂಡಕಿ ನದಿಯಲ್ಲಿ ಮುಳುಗಿಸುವ ಹಂಚಿಕೆ ಅವರದ್ದು. ಅಷ್ಟರಲ್ಲೇ ರಂಭಾ ಅಲ್ಲಿ ಪ್ರತ್ಯಕ್ಷ! ಮತ್ತೆ ಅವಳ ಋಣದಲ್ಲಿ ಮುಕುಂದ ಬದುಕಿ ಬಂದ.

ಕಂಪ್ಯೂಟರ್ ಟ್ರಾನ್ಸ್ ರಿಸೀವರ್ ಗಡಿಯಾರದ ನೆರವಿನಿಂದ ಈ ಬಾರಿ ಮುಕುಂದ ರಂಭಾಗೆ ಸಿಕ್ಕಿದ್ದ. ಮರುದಿನ ಇಬ್ಬರೂ ಹೋಟೆಲ್‌ಗೆ ಬಂದಾಗಲೂ– ಖಳರ ಕಾಟ ತಪ್ಪಲಿಲ್ಲ. ನಶೆಯ ಹೊಗೆ ಉಗುಳಿ ಪಾರಾದ ಮುಕುಂದ. ಸುತ್ತಾಟ, ವಿಶ್ಲೇಷಣೆ ಮುಗಿಸಿ ಕಾರಿನತ್ತ ಬಂದಾಗ ಮುಕುಂದನಿಗೆ ಏನೋ ಅನುಮಾನ. ಕಾರಿನಿಂದ ಹೊರಬಂದು ದೂರ ನಿಲ್ಲುವುದೇ ತಡ, ಟೈಂಬಾಂಬ್ ಅದನ್ನು ಛಿದ್ರಗೊಳಿಸಿತು.

ಈಗಾಗಲೇ ನಾಲ್ಕು ಸಲವೂ ಸಾವಿನ ದವಡೆ ಹೊಕ್ಕು ಪಾರಾಗಿದ್ದ ಮುಕುಂದನಿಗೆ ಮರುದಿನ ಎಚ್ಚರಿಕೆಯ ದೂರವಾಣಿ ಕರೆ. ತಮ್ಮ ದಾರಿಯಿಂದ ತೊಲಗುವಂತೆ ಆದೇಶ. ನಲ್ವತ್ತು ಲಕ್ಷ ರೂಪಾಯಿ ಪರಿಹಾರ ಆಮಿಷ. ಆದರೆ ಆ ಅನಾಮಿಕ ಖಳ ರಂಭಾಳ ಹೆಸರು ಹೇಳಿ ಯೋಚಿಸಲು 2 ದಿವಸಗಳ ಗಡವು ನೀಡಿದ್ದ.

ಗೌರಿಪ್ರಸಾದರು ಮುಕುಂದನ ಅನ್ವೇಷಣೆಗೆ ನೆರವಾಗಲು ಬಿತಾರಿ ಥಾರಸ್ ಎಂಬ ಅಂಗರಕ್ಷಕನನ್ನು ನೇಮಿಸಿದರು. ಅವನ ನೆರವಿನಿಂದ ತಮ್ಮ ಕೃಷಿ ಫಾರಂ ಆಚೆ ಇರುವ ಬೇರೆ ಫಾರಂ ಪರೀಕ್ಷೆ ಮಾಡಲು ನಿರ್ಧರಿಸಿದ. ಅಲ್ಲಿ ನಡೆಯಬಾರದ್ದು ನಡೆಯುತ್ತಿದೆ ಎಂಬ ವಾಸನೆ ಮೂಗಿಗೆ ಬಡಿದಿತ್ತು.

ಮೊದಲ ಹಂತದಲ್ಲೇ ಸ್ವಲ್ಪದರಲ್ಲೇ ಪಾರಾದರು ಇಬ್ಬರು. ಸಿಕ್ಕಿಯೂ ಹೆಚ್ಚು ನರಳದೆ ಬಂದಿದ್ದರು. ಬುಸುಗುಟ್ಟೋ ಭೈರವ. ಹಾರಾಡೋ ಭೂತಗಳನ್ನು ನಿಭಾಯಿಸಿದ್ದಾಯಿತು. ಮುನ್ನಡೆದ. ಪಾರದರ್ಶಕ ಪ್ಲಾಸ್ಟಿಕ್ ಹಲಗೆ ಎತ್ತಿ ಕೊಠಡಿಯೊಳಕ್ಕೆ ಕಾಲಿರಿಸಿದ. ಒಳಗೆ ಹೆರಾಯಿನ್. ಚರಸ್. ಮರಿಜುನಾ. ಕೊಕೈನ್. ಭಾಂಗ್–ತಯಾರಿಕೆಗೆ ಬೇಕಾದ ರಾಸಾಯನಿಕ ವಸ್ತುಗಳು. ಇಲ್ಲೂ ಖಳರ ಕೈಗೆ ಸಿಕ್ಕ ಇನ್ನೇನು ಕಥೆ ಮುಗಿಯಿತು ಎನ್ನುವಷ್ಟರಲ್ಲಿ ಹೆಲಿಕ್ಯಾಪ್ಟರ್‌ನಲ್ಲಿ ರಂಭಾ ಪ್ರತ್ಯಕ್ಷ. ಮೂರು ದಿನಗಳಿಂದ ಅನ್ವೇಷಣೆಯಲ್ಲೇ ಇದ್ದ ಕಾರಣ ಗಾಬರಿಯಿಂದ ಅಂದಾಜಿನ ಮೇಲೆ ಹುಡುಕಿಕೊಂಡು ಬಂದಿದ್ದಳು. ಆದರೆ ಬಿಲೌಗೆ ಸಕತ್ ಏಟು ಬಿದ್ದಿತ್ತು.

ಮುಕುಂದ ಪರ್ಣಕುಟಿಯಲ್ಲಿ ನಡೆದಿದ್ದ. ಅಕ್ರಮ ಚಟುವಟಿಕೆಗಳನ್ನು ಪತ್ತೆ ಮಾಡಿದ. ಕಳ್ಳ ನೋಟುಗಳ ಮುದ್ರಣವನ್ನು ಕಂಡು ಬೆರಗಾದ. ಪಾಕಿಸ್ತಾನದ ಸುತ್ತ ಇರುವ ಭಾರತೀಯ ವಾಯುಪಡೆ ಪೂರ್ಣ ವಿವರ. ರೇಡಾರ್ ನೆಲೆ, ಮಿಸೈಲ್ ಜಾಗ, ಭೂ ವಿಮಾನ ನಿಲ್ದಾಣ, ವಿಮಾನಗಳ ಸಂಖ್ಯಾಬಲವಿದ್ದ ವರದಿ ನೋಡಿ ಬೆಚ್ಚಿದ. ಗೂಢ ಲಿಪಿಯಲ್ಲಿ ಟೇಪಾಗಿದ್ದ ವರದಿಯನ್ನೂ ಕಂಡ. ರಾಜದ್ರೋಹದ. ದೇಶದ್ರೋಹದ ಎಲ್ಲ ಚಟುವಟಿಕೆಗಳ ಕಾರಸ್ಥಾನ ಈ ನೆಲೆ. 20–25 ಕೋಟಿ ಮೌಲ್ಯದ ನಶೆ ಪುಡಿಗಳ ಸಂಗ್ರಹ.

ಟೇಬಲ್ಲಿನ ಕೆಳಗೆ ಶಕ್ತಿಶಾಲಿ ಟ್ರಾನ್ಸ್‌ಮೀಟರ್. ಹಲವು ಕೋಡ್ ವಾಕ್ಯಗಳು ಪರಿಶೀಲಿಸುತ್ತಿರುವಂತೇ ರಂಭಾಳ ಧ್ವನಿ ಕೇಳಿ ಮುಕುಂದ ಹೌಹಾರಿದ. ಈ ಬಾರಿ ಅವಳು ಖಳರ ಗುಂಪಿನಲ್ಲಿ ಅವರ ನೆರಳಾಗಿ. ಮುಕುಂದ ಸುಸ್ತಾದ. ಮುಕುಂದನ ಬಳಿ ಇದ್ದ ಎಲ್ಲ ವೈಜ್ಞಾನಿಕ ಸಲಕರಣೆಗಳೂ ಅವರ ಪಾಲಾದವು. ಗುಂಡೇಟಿನಿಂದ ಎಲ್ಲ ಛಿದ್ರಗೊಂಡವು. 15 ಅಡಿ ಪ್ರಪಾತಕ್ಕೆ ಅವನನ್ನು ತಳ್ಳಿ, ರಂಧ್ರಕ್ಕೆ ಭಾರಿ ಕಲ್ಲನ್ನು ಮುಚ್ಚಿದರು. ಖಳರೊಂದಿಗೆ ಕಿಲಕಿಲ ನಗುತ್ತಾ ರಂಭಾ ನಡೆದಳು.

ನಿಜವಾಗಿಯೂ ಮುಕುಂದ ಭಾರಿ ಅಪಾಯಕ್ಕೆ ಸಿಲುಕಿದ್ದ. ತಿನ್ನಲು ಏನೂ ಇಲ್ಲ. ಪಾಚಿ-ಹಾವಸೆ ಮೇಲೆ ನಾಲಗೆ ಹೊರಳಾಡಿಸಿ ತೇವ ಮಾಡಿಕೊಳ್ಳುವಷ್ಟು ಮಾತ್ರ ಅವಕಾಶ. ಅವನ ದೈಹಿಕ ಶಕ್ತಿ ದಿನೇ ದಿನೇ ಕುಸಿಯಿತು. ನಾಯಿಕೊಡೆ

ತಿಂದ. ತಾನು ಹೆಚ್ಚು ಕಾಲ ಬದುಕುವುದಿಲ್ಲ ಎಂದುಕೊಂಡಾಗ ಎಂಥದೋ ಆಸ್ಫೋಟವಾಗಿ, ಗುಹೆಯಲ್ಲಿ ಬೆಳಕು ಮೂಡಿತು. ಹೊರಗೆ ರಂಭಾ ನಿಂತಿದ್ದಳು. ಮಮತಾಮಯಿ ತಾಯಿಥರ. ತಾನೇ ಈ ಸ್ಥಿತಿಗೇ ಕಾರಣಳೆಂದೂ, ಹಾಗೆ ಮಾಡದೇ ಹೋಗಿದ್ದರೆ ಇಬ್ಬರ ಜೀವವೂ ಹೋಗಿರುತ್ತಿತ್ತೆಂದೂ ಕೈಫಿಯತು ನೀಡಿದಳು.

ಮುಕುಂದನಿಗೆ ಪುನರ್ಜನ್ಮ ಸಿಕ್ಕಿತ್ತು.

ಚಿನ್ನ. ಬೆಳ್ಳಿ. ಎಲೆಕ್ಟ್ರಾನಿಕ್ ಸಾಮಾನು. ಬಟ್ಟೆ. ಗಡಿಯಾರ. ವಜ್ರ–ವೈಢೂರ್ಯ, ಕಪ್ಪೆ ಕಾಲು. ಹಾವಿನ ಚರ್ಮ, ಹಾವಿನ ವಿಷ. ಮನುಷ್ಯರ ಅಸ್ಥಿಪಂಜರ–ಜತೆಗೆ ದೇಶದ ಗುಪ್ತ ಸಮಾಚಾರ ರವಾನೆ–ಸ್ಮಗ್ಲರ್‌ಗಳ ಚಟುವಟಿಕೆಯಲ್ಲಿ ಸೇರಿತ್ತು.

ಮುಕುಂದನ ಮುಂದಿನ ಕೆಲಸ ಕತ್ತಿಯ ಧಾರೆಯ ಮೇಲಿನ ನಡಗೆ. ಆದರವನು ಅದನ್ನು ಸಾಧಿಸಿದ. ಸಿಂಗ್ ಮತ್ತು ಅವನ ಬಾಸ್‌ರನ್ನು ಬಂಧಿಸಿದ. ದೇಶ ದ್ರೋಹಿಗಳು ಕೃಷ್ಣ ಜನ್ಮಸ್ಥಾನ ಸೇರಿದರು. ದಿಲೀಪ್ ಮೆಹ್ತಾನ ಸುದ್ದಿಯೂ ಬಂದಿತ್ತು. ಆಸ್ಪತ್ರೆಯಿಂದ ಕಿಡ್‌ನ್ಯಾಪ್ ಮಾಡಿದ ಖೂಳರು ಅವನನ್ನು ಫ್ರಾನ್ಸ್‌ಗೆ ಕರೆದೊಯ್ದಿದ್ದರು. ವೇಲಾಯುಧನ್ ಇದರ ಸೂತ್ರಧಾರ. ಮಿದುಳಿನ ಆಪರೇಷನ್‌ಗೂ ಒಳಪಟ್ಟಿದ್ದ ಮೆಹ್ತಾ. ದುಡ್ಡಿನಿಂದ ಅಡ್ಜಸ್ಟ್ ಆಗದವರನ್ನು ವೈದ್ಯಕೀಯ ನೆರವಿನ ಬಲೆಗೆ ಬೀಳಿಸಿಕೊಳ್ಳುವ ವಿಧಾನ ಇದಾಗಿತ್ತು. ಸಧ್ಯಕ್ಕೆ ದಿಲೀಪ್ ಮೆಹ್ತಾ ಅರೆಸ್ಟ್ ಆದರೂ ಮುಂದೆ ರಿಹ್ಯಾಬಿಲಿಟೇಟ್ ಆಗಲಿದ್ದಾನೆ.

ಮುಕುಂದನಿಗೆ ಮತ್ತೊಂದು ಕೆಲಸ. ಈ ಬಾರಿ ಇಂಡಿಯಾ–ಪಾಕ್ ಬಾರ್ಡರ್‌ನಲ್ಲಿ. ಶಸ್ತ್ರಾಸ್ತ್ರ ಹಾಗೂ ಮಾದಕ ವಸ್ತುಗಳ ಸ್ಮಗ್ಲರ್‌ನ್ನು ಬಗ್ಗು ಬಡಿಯುವುದು. ಇಷ್ಟರಲ್ಲೇ ಅವನ ಹೆಸರನ್ನು ರಾಷ್ಟ್ರಪತಿಗಳ ಪ್ರಶಸ್ತಿಗೆ ಕಳಿಸಲಾಗಿದೆ.

ಅತ್ಯಂತ್ತವು ಪತ್ತೇದಾರಿ ಚಲನಚಿತ್ರದಂತೆ ಚಕಚಕನೆ ಸಾಗುತ್ತದೆ ಕಾದಂಬರಿ. ಶ್ರೀನಿವಾಸರಾಯರು ಶೈಲಿಯ ಬಳಕೆಯಲ್ಲಿ ಬಹಳ ಮುತುವರ್ಜಿ ವಹಿಸಿದ್ದಾರೆ. ಓತಪ್ರೋತಧಾರೆ. ಜತೆಗೆ ಕಾದಂಬರಿ ಎಲ್ಲಿಯೂ 'ಬೋರ್' ಆಗದು. ಪ್ರಾದೇಶಿಕ ಕಥಾನಕಗಳನ್ನು ಲೇಖಕರು ಆತ್ಮೀಯವಾಗಿ ಚಿತ್ರಿಸಿದ್ದಾರೆ. ನೇಪಾಳದ ಭೌಗೋಳೀಯ ಲಕ್ಷಣಗಳು, ಅಲ್ಲಿನ ಪ್ರೇಕ್ಷಣೀಯ ಸ್ಥಳಗಳು ಅವುಗಳ ಸ್ಥಳ ಪುರಾಣ, ಗಾಢ ವಿವರಣೆಯೊಂದಿಗೆ ಪ್ರಕೃತಿ ವರ್ಣನೆಯೂ ಸೇರಿದೆ,

ಇಲ್ಲಿ ಭಾರತೀಯ ಪತ್ತೇದಾರಿಕೆಗೆ. ಪೊಲೀಸ್ ಇಲಾಖೆಗೆ ಶ್ರೀನಿವಾಸರಾವ್ ಒಂದು ಅಕ್ಷಯ ನಿಧಿಯನ್ನೇ ತೋರಿದ್ದಾರೆ. ನಮ್ಮ ಹಿಂದೀ. ಇಂಗ್ಲಿಷ್ ಅಥವ ಪ್ರಾದೇಶಿಕ ಭಾಷಾ ಚಲನ ಚಿತ್ರಗಳು ಅಪರಾಧವನ್ನು ಹೇಗೆ ಮಾಡುವುದು ಎಂಬುದನ್ನೇ ವೈಭವೀಕರಿಸಿ ತೋರಿಸುತ್ತವೆ. ಹಿಂಸೆ. ಕ್ಯಾಬರೆ. ಖಳನ ನಿವಾಸ. ಅವನ ಟಾರ್ಚರ್ ಛೇಂಬರ್. ವಿಧಾನಗಳನ್ನು ಭೀಭತ್ಸವಾಗಿ ತೋರುತ್ತಾರೆ. ಆದರೆ ಹೇಗೆ ಪತ್ತೆ ಮಾಡಿದ. ಅನುಸರಿಸಿದ ವಿಧಾನಗಳು ಹೇಗೆ ಎಂಬುದನ್ನು ತೀರಾ ನಾಟಕೀಯವಾಗಿ ತೋರಿ. ಅಬ್ರಪ್ಟ್ ಮುಕ್ತಾಯ ಮಾಡಿ ಬಿಡುತ್ತಾರೆ.

ಶ್ರೀನಿವಾಸರಾವ್ ಇಲ್ಲಿ ಬೆರಗಾಗುವಂಥ ವೈಜ್ಞಾನಿಕ ಸಲಕರಣೆಗಳ, ಸಾಧನ ಸಂಪತ್ತುಗಳ ಅನಂತ ಭಂಡಾರವನ್ನೇ ತೋರಿದ್ದಾರೆ. ಈ ವಿಜ್ಞಾನವನ್ನು ಚೆನ್ನಾಗಿ ದುಡಿಸಿಕೊಂಡು ಎಂಥ ದೇಶದ್ರೋಹಿಗಳನ್ನಾದರೂ. ಸ್ಮಗ್ಲರ್‌ಗಳನ್ನಾದರೂ–ಬಗ್ಗು ಬಡಿಯಬಹುದೆಂಬುದನ್ನು ತೋರಿದ್ದಾರೆ. ಪೊಲೀಸ್ ಇಲಾಖೆ ನಿಜಕ್ಕೂ ತಲೆದೂಗಲೇಬೇಕು. ಆಧುನಿಕ ಸಲಕರಣೆಗಳು ಇಲ್ಲದೆ ಪತ್ತೆದಾರಿಕೆ. ಬೇಹುಗಾರಿಕೆ ನಿರ್ಜೀವವಾಗಿ–ಸ್ಮಗ್ಲರ್‌ಗಳು ಸದಾ ಕೈಯಿಂದ ಜಾರಿ ಹೋಗುತ್ತಾರೆ. ಹೇಗೆ ಸಾಧ್ಯ ? ಎಂದು ತಲೆಯ ಮೇಲೆ ಕೈಹೊತ್ತು ಕೂಡುವವರಿಗೆ ಶ್ರೀನಿವಾಸ್‌ರಾವ್‌ರ ಈ ಕೃತಿ ಒಂದು ಮಾರ್ಗದರ್ಶಿ. ಮಾಹಿತಿಗಳ ಗೈಡ್.

ಹೀಗಾಗಿ ಮಾಮೂಲಿ ಕೊಲೆ. ಕಳ್ಳತನ, ಬ್ಲಾಕ್‌ಮೇಲ್ ಇತ್ಯಾದಿಗಳಿಂದ ಭಿನ್ನವಾಗಿ ನಿಲ್ಲುತ್ತದೆ ಈ ಕೃತಿ. ಎಂದೇ ಇದನ್ನು ಕ್ಲಾಸಿಕ್ ಡಿಟೆಕ್ಟಿವ್ ಎನ್ನಲು ಹಿಂಜರಿಯಬೇಕಿಲ್ಲ.



ಸಾಹಸ ಪ್ರಧಾನ ಕಿರುಕಾದಂಬರಿ

# ಪುಟಾಣಿ ಸಾಹಸಿಗಳು

—ಎಂ. ವಿ. ನಾಗರಾಜರಾವ್

ಮಕ್ಕಳ ಮನಸ್ಸಿಗೆ ಮುದ ಕೊಡುವ ಸಾಹಿತ್ಯ ರಚನೆ ಎಂದಿನಿಂದ ಆರಂಭವಾಯಿತು ಎಂದು ಹೇಳುವುದು ಸುಲಭವಲ್ಲ. ಪಂಚತಂತ್ರ. ಹಿತೋಪದೇಶ, ಜಾತಕ ಕತೆಗಳು, ಈಸೋಪನ ನೀತಿಕಥೆಗಳು–ಇತ್ಯಾದಿ ಈ ಹಿಂದೆಯೇ ರಚಿತವಾಗಿದ್ದು ಎಲ್ಲರ ಮೆಚ್ಚುಗೆಯನ್ನು ಪಡೆದವು. ಬಹುಶಃ ಶಿಶುಸಾಹಿತ್ಯ ರಚನೆಯ ಪ್ರಾರಂಭ ಸಹ ಇಲ್ಲಿಂದಲೇ ಆಗಿರಬೇಕು. ಮಕ್ಕಳ ಕುತೂಹಲವನ್ನು ತಣಿಸುವ ಉದ್ದೇಶದಿಂದ ಹಿರಿಯರು ಈ ಕತೆಗಳನ್ನು ಅಂದಿನಿಂದ ಇಂದಿನವರೆಗೆ ಹೇಳುತ್ತಾ ಬಂದಿದ್ದಾರೆ. ರಾಮಾಯಣ. ಮಹಾಭಾರತ. ಉಪನಿಷತ್ತಿನ ಕತೆಗಳು. ಅನೇಕ ಆಖ್ಯಾಯಿಕೆಗಳು. ಜನಪದ ಕತೆಗಳು ಹಾಗೂ ಕುತೂಹಲದಿಂದ ಕೂಡಿದ ರೋಮಾಂಚಕಾರಿ ಸಾಹಸದ ಕತೆಗಳು ಮಕ್ಕಳ ಮನೋಲ್ಲಾಸ ಹಾಗೂ ಸಾಹಸದ ಅನುಭವಗಳಿಗೆ ಪ್ರೇರಣೆಯನ್ನು ನೀಡುತ್ತಾ ಬಂದಿವೆ. ಈ ಕತೆಗಳನ್ನು ಎಷ್ಟು ಬಾರಿ ಕೇಳಿದರೂ–ಹೇಳಿದರೂ ಮಕ್ಕಳ ಮತ್ತು ಹಿರಿಯರ ಆಸಕ್ತಿ ಕುಂದುವುದಿಲ್ಲ. ಇಂಥ ಆಸಕ್ತಿಯನ್ನು ಸದಾ ಕಾಲ ಉಳಿಸಿಕೊಳ್ಳಬಲ್ಲ ಶಿಶು ಸಾಹಿತ್ಯ ರಚನೆ ಸುಲಭದ ಮಾತಲ್ಲ. ಶಿಶು ಸಾಹಿತ್ಯ ರಚನಾಕಾರ ಮೊದಲು ಮಗುವಿನ ಮನಸ್ಸನ್ನು ಅರಿಯಬೇಕು. ಮಗುವಿನ ಬೇಕು–ಬೇಡಗಳನ್ನು ಕಂಡುಕೊಳ್ಳಬೇಕು. ಅನಂತರ ವಿಷಯವನ್ನು ಜಾಣ್ಮೆಯಿಂದ ಸರಳವಾಗಿ. ಆಕರ್ಷಕವಾಗಿ ನಿರೂಪಿಸಬೇಕು. ವಿಷಯವನ್ನು ಅನವಶ್ಯಕವಾಗಿ ಹಿಗ್ಗಿಸದೆ, ವಾಕ್ಯಗಳಲ್ಲಿ ಸಾಮರಸ್ಯ ಮತ್ತು ಸಮತೋಲನವನ್ನು ಕಾಯ್ದುಕೊಂಡು ನೇರ ಶೈಲಿಯಲ್ಲಿ ಹೇಳಬೇಕು. ಮಕ್ಕಳ ಕುತೂಹಲವನ್ನು ಕಾಯ್ದುಕೊಳ್ಳುವ ಮನರಂಜನೆಯನ್ನು ಒದಗಿಸುವ ಹಾಗೂ ಅವರ ಸರ್ವತೋಮುಖ ಬೆಳವಣಿಗೆಗೆ ಕಾರಣವಾಗುವ ಸಾಹಿತ್ಯ ನಿರ್ಮಾಣ

ಮಾಡುವ ಗುರುತರವಾದ ಹೊಣೆ ಶಿಶುಸಾಹಿತ್ಯಕಾರನ ಮೇಲಿದೆ ಎಂದರೆ ತಪ್ಪಾಗಲಾರದು. ಮನೋವೈಜ್ಞಾನಿಕ ರೀತಿಯಲ್ಲಿ ವಿಷಯವನ್ನು ಅರಗಿಸಿಕೊಂಡವನಿಗೆ ಮಾತ್ರ ಮಕ್ಕಳ ಸಾಹಿತ್ಯ ನಿರ್ಮಾಣ ಸಾಧ್ಯ.

ಕವನ. ಕತೆ. ನಾಟಕ, ಪ್ರವಾಸ ಕಥನ. ಮಹಾಪುರುಷರು, ವಿಜ್ಞಾನಿಗಳು. ಸಂತರು—ಇವರ ಜೀವನ ಚರಿತ್ರೆ. ಸಾಧನೆ—ಇತ್ಯಾದಿ. ಮಕ್ಕಳ ಮನಸ್ಸಿನಲ್ಲಿ ವಿಶೇಷವಾಗಿ ಪ್ರಭಾವ ಬೀರಬಲ್ಲವು. ಮಕ್ಕಳಲ್ಲಿ ಹುದುಗಿರುವ ಕವಿತ್ವಶಕ್ತಿ, ಸೌಂದರ್ಯಪ್ರಜ್ಞೆ, ಮಾನಸಿಕ ಸಂತುಲನ ಶಕ್ತಿ ಅನುಭವ ವಿಸ್ತಾರ, ಏಕಾಗ್ರತೆ, ಗ್ರಹಣಶಕ್ತಿ. ಸಾಹಸ ಪ್ರವೃತ್ತಿ. ಅನುಕರಣೆ ಇತ್ಯಾದಿ ಶಿಶು ಸಾಹಿತ್ಯದ ಬೇರೆ ಬೇರೆ ಪ್ರಾಕಾರಗಳಿಂದ ಜಾಗೃತವಾಗುವುದರಲ್ಲಿ ಅನುಮಾನವಿಲ್ಲ.

ಚಿಕ್ಕ ವಯಸ್ಸಿನ ಎಳೆಯರನ್ನು ಗಮನದಲ್ಲಿಟ್ಟುಕೊಂಡು ಶ್ರೀ ಎಸ್. ವಿ. ಶ್ರೀನಿವಾಸರಾವ್—ಅವರು ಹನ್ನೆರಡಕ್ಕೂ ಹೆಚ್ಚು ಪುಸ್ತಕಗಳನ್ನು ಬರೆದಿದ್ದಾರೆ. ಇದರಲ್ಲಿ ಕನ್ನಡ ನಾಡಿನ ಹಿರಿಯರು. ಬಾನುಲಿ ನಾಟಕಗಳು. ಮಹಾಪುರುಷರು. ಕನ್ನಡದ ಕವಿಗಳು. ಸಂತರು ಇತ್ಯಾದಿ ಹಲವು ಹತ್ತಾರು ವಿಷಯಗಳಿವೆ. ಜೊತೆಗೆ "ಪುಟಾಣಿ ಸಾಹಸಿಗಳು" ಎಂಬ ಸಾಹಸ ಪ್ರಧಾನವಾದ ಕಿರು ಕಾದಂಬರಿಯೊಂದನ್ನು ರಚಿಸಿದ್ದಾರೆ.

'ಪುಟಾಣಿ ಸಾಹಸಿಗಳು' ಶಿಶು ಕಾದಂಬರಿ ರಚನೆಗೆ ಲೇಖಕರೇ ಹೇಳಿರುವಂತೆ ದೆಹಲಿಯ ಪಂಚತಾರಾ ಹೋಟೇಲೊಂದರಲ್ಲಿ ಜರುಗಿದ ಅಗ್ನಿದುರಂತದ ಒಂದು ಘಟನೆ ಕಾರಣವಾಗಿದೆ. ಆರಂಭದಿಂದ ಅಂತ್ಯದವರೆಗೆ ಕುತೂಹಲವನ್ನು ಉಳಿಸಿಕೊಂಡು ಓದುಗರಿಗೆ ರೋಮಾಂಚಕಾರಿ ಅನುಭವವನ್ನುಂಟು ಮಾಡುವಲ್ಲಿ ಈ ಕಿರು ಕಾದಂಬರಿ ಯಶಸ್ವಿಯಾಗಿದೆ. ಇಲ್ಲಿಯ ಮಕ್ಕಳ ಸಾಹಸ ಓದುಗರನ್ನು ಉಸಿರು ಬಿಗಿ ಹಿಡಿಯುವಂತೆ ಮಾಡುತ್ತದೆ. ಹೋಟೇಲಿನ ಅಗ್ನಿದುರಂತದ ಕರಾಳ ಛಾಯೆ ನಮ್ಮನ್ನು ಕೊನೆಯಲ್ಲಿ ಆವರಿಸಿ ಬಿಡುತ್ತದೆ. ಬಿಂದು ಮತ್ತು ಜ್ಯೋತಿಯರ ದುರಾದೃಷ್ಟವನ್ನು ನೆನೆದು ನಮ್ಮ ಕಣ್ಣುಗಳು ತೇವವಾಗುತ್ತವೆ. ಮಮ್ಮಿ ಮತ್ತು ಡ್ಯಾಡಿಯನ್ನು ಕಳೆದುಕೊಂಡ ಎಳೆಯರ ಬಗ್ಗೆ ನಮ್ಮ ಹೃದಯದಲ್ಲಿ ಅನುಕಂಪದ ತರಂಗಗಳೇಳುತ್ತವೆ.

ಚಿಕ್ಕ ವಯಸ್ಸಿನ ಮಕ್ಕಳಲ್ಲಿ ಸಾಹಸಪ್ರವೃತ್ತಿಯನ್ನು. ಕುತೂಹಲ ಮತ್ತು ಆಸಕ್ತಿಯನ್ನು ಬೆಳೆಸುವಲ್ಲಿ ಸಹಾಯಕವೆನಿಸುವ 'ಪುಟಾಣಿ ಸಾಹಸಿಗಳು' ಕಿರು ಕಾದಂಬರಿಯನ್ನು ರಚಿಸಿ ಶ್ರೀ ಎಸ್. ಪಿ. ಶ್ರೀನಿವಾಸರಾವ್ ಕಿರು ಸಾಹಿತ್ಯ ರಚನಾಕಾರರಿಗೆ ಹೊಸದೊಂದು ಮಾರ್ಗದತ್ತ ಬೆರಳು ತೋರಿಸಿದ್ದಾರೆ. ಶ್ರೀಯುತರ ಇತರ ಕೃತಿಗಳಲ್ಲಿ ಮಕ್ಕಳ ಮನೋವಿಕಾಸಕ್ಕೆ. ಮನರಂಜನೆಗೆ ಆದರ್ಶ ಗುಣಗಳಿಗೆ. ರಾಷ್ಟ್ರಾಭಿಮಾನಕ್ಕೆ, ಶುಚಿ ಜೀವನಕ್ಕೆ, ಭವ್ಯ ಬಾಳಿಗೆ ಸಮೃದ್ಧಿಯಾದ ಆಹಾರವಿದ್ದರೆ 'ಪುಟಾಣಿ ಸಾಹಸಿಗಳು' ಕಿರು ಕಾದಂಬರಿಯಲ್ಲಿ ಸಾಹಸ. ಧೈರ್ಯ. ಕೆಚ್ಚು ಮತ್ತು ಛಲ ಓತಪ್ರೋತವಾಗಿದೆ.



# ಆತ್ಮೀಯ

—ಡಾ॥ ಸಾ. ಶಿ. ಮರುಳಯ್ಯ

ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಧಾರಾವಾಹಿಗಳಿಂದ ಒಳ್ಳೆಯದೂ ಆಗಿದೆ, ಕೆಟ್ಟದ್ದೂ ಆಗಿದೆ. ದೈನಂದಿನ ವಾರ್ತೆಯ ಜೊತೆ ಒಂದಿಷ್ಟು ಸಾಹಿತ್ಯಕ ಸಿಹಿ ದೊರಕುವುದು, ಓದುಗರಲ್ಲಿ ಒಂದು ಬಗೆಯ ರುಚಿ ಹುಟ್ಟಿಸಿದ್ದು, ಮತ್ತು ಅನೇಕ ಸುಪ್ತ ಹಾಗೂ ಗುಪ್ತ ಪ್ರತಿಭೆಗಳು ಬಹು ಬೇಗ ಬೆಳಕಿಗೆ ಬರುವಂತೆ ಈ ಪ್ರಬಲ ಪ್ರಸಾರ ಮಾಧ್ಯಮ ನೆರವಾದದ್ದು—ಇವೆಲ್ಲಾ ಪ್ಲಸ್ ಪಾಯಿಂಟ್‌ಗಳೇ. ಆದರೆ ಧಾರಾವಾಹಿಗಳು ಬರತೊಡಗಿದ ಮೇಲೆ ನೇರವಾಗಿ ಪ್ರಕಟವಾಗುವ ಕತೆ ಕಾದಂಬರಿಗಳ ಪ್ರಮಾಣ ಕಡಿಮೆಯಾಯಿತು. ದಿನ ಬೆಳಗಾದರೆ ಪತ್ರಿಕೆಗಳಲ್ಲೇ ಒಂದಿಷ್ಟು ಆಹಾರ ದೊರಕುತ್ತಿರುವಾಗ ಬೇರೆ ಹಣ ಕೊಟ್ಟು ಕಾದಂಬರಿ ಪುಸ್ತಕ ಗಳನ್ನೇಕೆ ಕೊಳ್ಳಬೇಕು ? ಕೊಂಡರೂ ಓದಲು ವ್ಯವಧಾನವೆಲ್ಲಿದೆ ಈ ಧೋರಣೆ ಓದುಗರಲ್ಲಿ. ಮತ್ತೆ ಧಾರಾವಾಹಿಗಳು ಪುಸ್ತಕ ರೂಪದಲ್ಲಿ ಬಂದರೆ, ಅವಕ್ಕೆ ಬೇಡಿಕೆ ಇಲ್ಲವೇ ಇಲ್ಲ. 'ಓ ! ಇದಾ, ಬಿಡೋ ನಾನಾಗಲೇ ಧಾರಾವಾಹಿಯಾಗಿ ಓದಿದ್ದೇನೆ. ಮತ್ತೊಮ್ಮೆ ಏಕೆ, 'ಚರ್ವಿತ ಚರ್ವಣ' ಎಂದು ಅಂಜೋಣ. ಇವು ಮೈನಸ್ ಪಾಯಿಂಟ್‌ಗಳು.

ಈ ಎರಡೂ ಅನುಭವಗಳು ನನಗಾದದ್ದು ಶ್ರೀ ಎಸ್. ವಿ. ಶ್ರೀನಿವಾಸರಾವ್ ರವರ ಕಾದಂಬರಿಗಳನ್ನು ಓದಿದ ಮೇಲೆ. ಅವರ 'ಸ್ವಾತಿಯ ಹನಿ' ಸೆಕೆಂಡ್ ಹ್ಯಾಂಡ್ ಬುಕ್‌ಸ್ಟಾಲ್‌ನಲ್ಲಿ ಚೀಪಾಗಿ ಸಿಕ್ತು, ಕೊಂಡು ತಂದೆ. ಓದೋಕೆ ಪ್ರಾರಂಭಿಸಿ ಎರಡು ಪುಟ ಓದೋದರೊಳ್ಗೆ ಇದನ್ನು ಯಾವಾಗ್ಲೋ ಓದಿದ ಹಾಗಿದೆಯಲ್ಲಾ ಅಂದುಕೊಂಡೆ, ಒಂದು ಅಧ್ಯಾಯ ಓದಿ ಮುಗಿಸೋದರೊಳಗೆ ಗೊತ್ತಾಯಿತು ಇದು ಕೃತಿಚೌರ್ಯ ಅಲ್ಲ ಸುಧಾ ಪತ್ರಿಕೆಯಲ್ಲಿ 'ಅನುಬಂಧ' ಅನ್ನೋ ಹೆಸರಿನ ಧಾರಾವಾಹಿ. ಈಗ ಪುಸ್ತಕ ರೂಪದಲ್ಲಿ ಹೆಸರು ಬದಲಾಯಿಸಿ ಕೊಂಡು, ವೇಷಾನೂ ಬದಲಾಯಿಸಿಕೊಂಡು ಬಂದಿದೆ ಅಂತಾ. ನಾನು ಮುಂದೆ ಓದುವ ಗೋಜಿಗೆ ಹೋಗಲಿಲ್ಲ. ಆದರೆ ಶ್ರೀನಿವಾಸರಾವ್‌ರವರ ಮಬ್ಬು ಮುಂಜಾವು, ಕಾಡ ಬೆಳದಿಂಗಳು, ಇಬ್ಬನಿ, ಸ್ವಾತಿಯ ಹನಿ, ಹರಿಗೋಲು, ಮಂಥನ, ರಂಗಸ್ಥಳ, ಗೆಜ್ಜೆ ಕಟ್ಟಿದ ಹೆಜ್ಜೆ, ಸೋನಾರ್ ಬಾಂಗ್ಲಾ, ಸುಣ್ಣವಿಲ್ಲದ

ವೀಳ್ಯ—ಇಂತಹ ಹೆಸರಿನ ಕಾದಂಬರಿಗಳನ್ನು ನೋಡಿದ ಮೇಲೆ ಅನ್ನಿಸಿತು ಈತ ಯಾರೋ ಓರ್ವ ತುಂಬು ಪ್ರತಿಭಾವಂತ ಅಂತಾ, ಹಾಗಂದುಕೊಂಡೆ, ಸುಮ್ಮನಾದೆ. ಕೆಲವು ದಿನಗಳ ಮೇಲೆ ಅವರ ಮಕ್ಕಳ ಸಾಹಿತ್ಯ ಕೃತಿಗಳನ್ನು ಓದಿದೆ : ರೇಡಿಯೋ ದಲ್ಲಿ ಆಗೊಂದು ಈಗೊಂದು ಪ್ರಸಾರ ನಾಟಕ ಕೇಳಿದೆ. ನನಗನ್ನಿಸಿತು ಖಂಡಿತಾ ಆತನನ್ನು ಪತ್ತೆ ಹಚ್ಚಬೇಕು : ಪರಿಚಯ ಮಾಡಿಕೊಳ್ಳಬೇಕು ಅಂತಾ. ಆದರೆ ಯಾರನ್ನೂ ಕೇಳದೆ ಇರುವ ನನ್ನ ಕೆಟ್ಟ ಸ್ವಭಾವ ಅದಕ್ಕೆ ಅವಕಾಶ ಕೊಡಲಿಲ್ಲ.

ಆದರೆ ಒಂದು ದಿನ ಖ್ಯಾತ ಕಾದಂಬರಿಕಾರ್ತಿ 'ನಿರುಪಮಾ' ನಮ್ಮ ಮನೆಗೆ ಬಂದರು. ಮಕ್ಕಳ ಸಾಹಿತ್ಯ ಕುರಿತ ವಿಚಾರಗೋಷ್ಠಿಗೆ ಕರೆದರು. ಗೋಷ್ಠಿ ಯೊಂದರ ಅಧ್ಯಕ್ಷನಾಗಿ ಅಂದು ನ್ಯಾಷನಲ್ ಹೈಸ್ಕೂಲಿಗೆ ಹೋದೆ. ಅಲ್ಲಿನ ಕಾರ್ಯಕ್ರಮದ ಪಟ್ಟಿಯಲ್ಲಿ ಸ್ವಾಗತ : ಕಾರ್ಯದರ್ಶಿ ಎಸ್. ವಿ. ಶ್ರೀನಿವಾಸ ರಾವ್ ಎಂದಿತ್ತು. ಈ ಹೆಸರು ಎಂದೋ ಎಲ್ಲೋ ಕೇಳಿದ ಹಾಗಿತ್ತಲ್ಲಾ ಎಂದು ನನ್ನ ನೆನಪಿನ ತಿಪ್ಪೆ ಕೆದಕಿದೆ. ಥಟ್ ಅಂತಾ ಹೊಳೀತು, ಕಾದಂಬರಿಕಾರ ಶ್ರೀನಿವಾಸರಾವ್ ! ಕೂಡಲೇ ಕೇಳಿದೆ. ಅವರು ನಾನೇ ಅವನು ಅಂದರು. ತುಂಬಾ ಸಂತೋಷ ಆಯಿತು. ಬಹಳ ದಿವಸಗಳಿಂದ ಆ ವ್ಯಕ್ತಿಯನ್ನು ಹುಡುಕು ತ್ತಿದ್ದೆ. ತಾವಾಗಿಯೇ ಸಿಕ್ಕಿದರಲ್ಲಾ ಎಂಬ ಹಿಗ್ಗು ನನ್ನದಾಯಿತು. ಕಾರ್ಯಕ್ರಮ ಮುಗಿದ ಮೇಲೆ ಕೇಳಿದೆ, "ನೀವು ತುಂಬಾ ಚೆನ್ನಾಗಿ ಬರೀತೀರಿ. ಇದು ಉಪಚಾರದ ಮಾತಲ್ಲ. ನಾನೊಬ್ಬ ಸಾಹಿತ್ಯದ ವಿದ್ಯಾರ್ಥಿಯಾಗಿ, ಓದುಗನಾಗಿ, ವಿಮರ್ಶಕ ನಾಗಿ ಹೇಳ್ತಿದ್ದೇನೆ....ಅನ್ಯಥಾ ಭಾವಿಸಬೇಡಿ. ನಿಮ್ಮ ಪರಿಚಯ ಆದದ್ದು ನನಗೆ ತುಂಬಾ ಸಂತೋಷ ತಂದಿದೆ. ಬೆಂಗಳೂರಲ್ಲೇ ಇದ್ದೇವೆ ಅಂದ ಮೇಲೆ ಭೇಟಿ ಮಾಡ್ತಿರೋಣ, ಮರೀಬೇಡಿ" ಅಂದೆ. ಇಬ್ಬರೂ ಆ ಒಪ್ಪಂದಕ್ಕೆ ಬಂದ್ವಿ. ಆದರೆ ಅದು ಮಂತ್ರಿಗಳು ಸ್ವೀಕರಿಸಿದ ಪ್ರಮಾಣ ವಚನದ ಹಾಗೆ ಅಥವಾ ಕೋರ್ಟಿನಲ್ಲಿ ನ್ಯಾಯಾಧೀಶನ ಮುಂದೆ ಫಿರ್ಯಾದಿ ಪ್ರಮಾಣ ಮಾಡಿದ ಹಾಗೆ ಆಯಿತು ! ಪರಸ್ಪರ ಇಬ್ಬರೂ ಭೇಟಿಯನ್ನೂ ಮಾಡಲಿಲ್ಲ, ಅಲ್ಲಿ ಇಲ್ಲಿ ಸಿಕ್ಕಿದಾಗ ಮಾತನಾಡಿ ಸಲೂ ಇಲ್ಲ.

ಕನ್ನಡ ಸಾಹಿತ್ಯ ಪರಿಷತ್ತಿನ ಎಲೆಕ್ಷನ್ ಸಮಯದಲ್ಲಿ ನಾವಿಬ್ಬರೂ ತುಂಬಾ ಹತ್ತಿರ ಆದ್ವಿ. ಹೊಸ ಸ್ನೇಹ, ಹೊಸ ದ್ವೇಷಗಳು ಹುಟ್ಟಿ ಬೆಳೆಯೋದೇ ಎಲೆಕ್ಷನ್ ಸಮಯದಲ್ಲಿ ಅಲ್ಲವೆ ! ಅದೇ ರೀತಿ ಮತ್ತೆ ಹೊಸದಾಗಿ ಪರಿಚಯ. ಲೋಕಾಭಿರಾಮ ನುಡಿ, ಬೈಟು ಕಾಫಿ, ರಾಮಕೃಷ್ಣ ಲಾಡ್ಜಿನ ಒಂದು ಕೊಠಡಿ ನಮ್ಮ ಎಲೆಕ್ಷನ್ ಆಫೀಸಾಗ್ದುದರಿಂದ ನಿತ್ಯ ಸಂಜೆ ಭೇಟಿಯಾಗುತ್ತಿದ್ದೆವು. ಆಗ ಕೇಳಿದೆ. "ನಿಮ್ಮ ಹೆಸರು ಎಲ್ಲೋ ಕೇಳಿದ ಹಾಗಿದೆ ಶ್ರೀನಿವಾಸರಾವ್. ನೀವು........"

"ಏನ್ರೀ ರೀ........ನಾನು ಮಕ್ಕಳ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿ ಅಲ್ಲವೇ. ನಿಮ್ಮನ್ನ ಒಂದು ವಿಚಾರಗೋಷ್ಠಿಗೆ ಕರೆದಿರಲಿಲ್ಲವೇ, ನನ್ನ ಕಾದಂಬರಿಗಳ ವಿಚಾರ ವಾಗಿ ಉದ್ದುದ್ದ ಭಾಷಣ ಬಿಗಿದಿರಿ....ಮರೆತು ಬಿಟ್ರಿರಾ ?" ನನಗೆ ನಾಚಿಕೆ ಆಯಿತು. ನೆನಪಿನ ಸುರುಳಿ ಬಿಚ್ಚಿಕೊಂಡಿತು. "ಹೌದು ಶ್ರೀನಿವಾಸರಾವ್.... ಮರೆತು ಬಿಟ್ಟೆ. ಕ್ಷಮಿಸಿ....ಅಂದ ಹಾಗೆ ನೀವು ಯಾವ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು ?" ಈ ಪ್ರಶ್ನೆ ಕೇಳಿದಾಗ ನನ್ನ ತಲೆಯಲ್ಲಿ ಕನ್ನಡ ಅಧ್ಯಾಪಕರು ಮಾತ್ರ ಕನ್ನಡದ ಕೆಲಸ ಮಾಡೋರು, ಮಿಕ್ಕೋರು ಅಲ್ಲಾ ಎಂಬ ಭಾವನೆ. ಅವರು ಹೇಳಿದರು. "ನಾನು ರಕ್ಷಣಾ ಇಲಾಖೆನಲ್ಲಿದ್ದೇನೆ". "ಅಂದರೆ ನೀವು...." "ಹೌದು, ನಾನು ಸೆಂಟ್ರಲ್ ಗೌರ್ನಮೆಂಟ್ ಅಧಿಕಾರಿ....ಆ ಇಲಾಖೆಯಲ್ಲಿ ಸೈಂಟಿಫಿಕ್ ಆಫೀಸರ್ ಆಗಿದ್ದೀನಿ...." ಅಂದರು. ನನ್ನ ತಲೆ ಧಿಮ್ ಅಂತು !

'ಅಲ್ಲಾ ಸೈಂಟಿಫಿಕ್ ಆಫೀಸರ್‌ಊ ಆರ್ಟಿಸ್ಟಿಕ್ ರೈಟರ್ ಆದದ್ದು ಹೇಗೆ ?' ಅಂತಾ. ಅಲ್ಲೂ ಸಹ ಬರಹ ಕನ್ನಡ ಮೇಷ್ಟ್ರ ಗುತ್ತಿಗೆ ಅನ್ನೋ ಭಾವನೆ ಇತ್ತು. ಆಮೇಲೆ ನಾನೇ ತಿದ್ದಿಕೊಂಡೆ, ಅಭಿಪ್ರಾಯ ಬದಲಿಸಿಕೊಂಡೆ. ಪ್ರತಿಭೆ ಯಾರಪ್ಪನ ಮನೆ ಸೊತ್ತು. ಅದು ಕನ್ನಡ ಮೇಷ್ಟ್ರ ಗೇಣಿ ಅಲ್ಲ ! ಅಂದುಕೊಂಡೆ, ಸಮಾಧಾನ ಮಾಡಿಕೊಂಡೆ.

ಆ ಘಳಿಗೆಯಲ್ಲಿ ಸಮಾಧಾನ ಆಯ್ತು. ಆದರೆ ಮತ್ತೊಂದು ಅಸಮಾಧಾನ ತಲೆ ಹಾಕಿತು. ಶ್ರೀನಿವಾಸರಾವ್‌ರವರು ಕೊಠಡಿಯಲ್ಲಿ ಮಾತಾಡುವಾಗಲೆಲ್ಲಾ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರನ್ನು ಏನೋ, ತಾನೋ, ಹೋಗೋ, ಬಾರೋ—ಅನ್ನೋರು. 'ಎಲಾ ಇವನಾ ! ಇವನ್ಯಾರಪ್ಪಾ ಸಿದ್ಧಲಿಂಗಯ್ಯನನ್ನ ಏಕವಚನದಲ್ಲಿ ಸಂಬೋಧಿಸೋನು' ಅಂದುಕೊಂಡೆ. ಅಂದುಕೊಳ್ಳುವಷ್ಟರಲ್ಲಿ ಯಾರೋ ಬಂದು ನನ್ನ ಆಸ್ತಿಪಾಸ್ತಿಯ ಮೇಲೆ ದುರಾಕ್ರಮಣ ಮಾಡಿದ ಹಾಗಾಯಿತು. ಅಂದರೆ ಸಿದ್ಧಲಿಂಗಯ್ಯನ ಏಕವಚನ ಸಂಬೋಧನೆ ನನ್ನ ಹಕ್ಕು ಮಿಕ್ಕವರಿಗಿಲ್ಲಾ. ಈತ ಕಾಲೇಜು ಶಿಕ್ಷಣ ಇಲಾಖೆ ನಿರ್ದೇಶಕ. ಇವನನ್ನು ಇಷ್ಟು ಸಲೀಸಾಗಿ ಸಲುಗೆಯಿಂದ ಮಾತನಾಡಬೇಕಾದರೆ... ? ಓಹ್ ! ಇರಬೇಕು ಎಲೆಕ್ಷನ್ ಪ್ರಭಾವ. ಸಿದ್ಧಲಿಂಗಯ್ಯ 'ಸೀನಾ' ಅಂತಾ ಸಂಬೋಧಿಸ್ತಾನೆ, ಆತ 'ಸಿದ್ದು' ಅಂತಾನೆ. ಇದು ತುಂಬಾ ಟೆಂಪರರಿ ! ಅಂದುಕೊಂಡೆ. ಆದರೂ ತಡೆಯಲಾಗಲಿಲ್ಲ. ಕೇಳೇ ಬಿಟ್ಟೆ—"ಏನೂ ನಿಮ್ಮಿಬ್ಬರಿಗೂ ಇಷ್ಟು ಸ್ನೇಹ.... ಯಾವಾಗಿನಿಂದ ?" ಸಿದ್ಧಲಿಂಗಯ್ಯನ ಉತ್ತರ "ಹುಟ್ಟಿದಾಗಿನಿಂದ !" "ಹ್ಹಾಂ, ನಾನು ನೀನು ಮಹಾರಾಜಾ ಕಾಲೇಜಿನಲ್ಲಿ ಮೊದಲ ಕನ್ನಡ ಆನರ್ಸ್ ತರಗತಿಗೆ ಸೇರಿದಾಗ ಜೊತೆಯಲ್ಲಿ ಮೂರು ವರ್ಷ ಪುತ್ತೂರು ಹಾಸ್ಟಲಿನಲ್ಲಿದ್ದಾಗ

ಆದ ಚಡ್ಡಿ ಫ್ರೆಂಡ್ಸು !" ಎಂದೆ. "ಹೌದು ನಾನು ಸೀನ ನಿನಗೆ ಮುಂಚೆ ಲಂಗೋಟಿ ಫ್ರೆಂಡ್ಸ್ !" ಅಂದ.

ನನ್ನ ಮತ್ತು ಸಾಹಿತಿ ಮಿತ್ರ ಎಸ್. ವಿ. ಶ್ರೀನಿವಾಸರಾವ್‌ರವರ ಸ್ನೇಹ ಬೆಳೆದದ್ದು ಹೀಗೆ. ನಾವಿಬ್ಬರೂ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕ್ರಮವಾಗಿ ಕಾರ್ಯದರ್ಶಿ ಮತ್ತು ಕೋಶಾಧಿಕಾರಿಯಾದೆವು. ಅವರ ಸಖ್ಯ ನನಗೆ ತೃಪ್ತಿ ತಂದಿದೆ. ಯಾವುದೇ ಕೊಳೆಯಿಲ್ಲದ ತಿಳಿಯಾದ ಮನಸ್ಸು ನಮ್ಮ ಶ್ರೀನಿವಾಸರಾವ್ ರದು. ಅವರಿಗೆ ಕಪಟ, ಮೋಸ ತಿಳಿದಿಲ್ಲ, ಕವಡು ನುಡಿ ಆಡಿ ಗೊತ್ತಿಲ್ಲ. ತುಂಬಾ ಮಿತಭಾಷಿ. ಯಾವುದನ್ನೇ ಹೇಳಲಿ ಮುಚ್ಚು ಮರೆಯಿಲ್ಲದೆ, ಯಾವುದೇ ಕ್ಲೀಶೆ ಇಲ್ಲದೆ ನೇರವಾಗಿ ನುಡಿಯುತ್ತಾರೆ. ಶ್ರೀನಿವಾಸರಾವ್ ತುಂಬಾ ಸ್ನೇಹಮಯಿ. ನಿಷ್ಕಾಮವಂತ, ಪ್ರಾಮಾಣಿಕ, ಈ ಸರ್ಟಿಫಿಕೇಟನ್ನು ನಾನು ಸ್ನೇಹಿತನಾಗಿ ಕೊಡ ಬೇಕಾಗಿಲ್ಲ. ಅವರ ನಡೆ-ನುಡಿಗಳನ್ನು ಪ್ರತ್ಯಕ್ಷ ಕಂಡವರಿಗೆಲ್ಲಾ ಅರಿವಿಗೆ ಬರುವ ಅಂಶಗಳು ಅವು. ಅವರೆಷ್ಟು ಸರಳರೋ ಅಷ್ಟೇ ಸೌಜನ್ಯದ ವ್ಯಕ್ತಿ. ನಾನು ಅಮೇರಿಕಾ ಮತ್ತು ಕೆನಡಾ ದೇಶಗಳಿಗೆ ಹೋಗಿ ಬಂದ ಮೇಲೆ ಬಿಡದೆ ನನ್ನ ಅನುಭವ ಕೇಳಿದರು. ಕೇಳಿ ಆನಂದಿಸಿದರು. ಅವರ ಅಕುಟಿಲ ಪ್ರಾಂಜಲ ಮನಸ್ಸು ನನ್ನನ್ನು ತುಂಬಾ ಆಕರ್ಷಿಸಿತು. ಗಂಟೆಗಟ್ಟಲೆ ಹೇಳಿದೆ. ಕೆಲವು ದಿನಗಳ ಹಿಂದೆ ತಾವು ತಮ್ಮ ಕುಟುಂಬ ಸಮೇತ ಅಂಡಮಾನ್ ನಿಕೋಬಾರ್ ದ್ವೀಪಗಳಿಗೆ ಪ್ರವಾಸ ಹೋಗಿ ಬಂದರು. ಅವರ ಅನುಭವಗಳನ್ನು ನನ್ನೊಡನೆ ಹಂಚಿಕೊಂಡರು. ಅವರಿಗೆ ನಾನು, ನನಗೆ ಅವರು ಹೇಳಿಕೊಂಡೆವು. ಇಬ್ಬರೂ ಒಂದೊಂದು ಪ್ರವಾಸದ ಕಥನ ಬರೆಯೋಣ ಎಂದು. ನಾನು ಹೇಳಿದ್ದನ್ನು ಅವರು ಸತ್ಯವಾಗಿಸಿದ್ದಿರಬಹುದು. ನನಗೆ ಗೊತ್ತಿಲ್ಲ. ಆದರೆ ಅವರು ಹೇಳಿದಂತೆ ನಾನಿನ್ನೂ ನಡೆದುಕೊಂಡಿಲ್ಲ.

ಏನೇ ಇರಲಿ ನನ್ನ ಮಿತ್ರರಿಗೆ ಸಂಭಾವನಾ ಗ್ರಂಥವನ್ನರ್ಪಿಸುತ್ತಿರುವ ಈ ಸಂದರ್ಭದಲ್ಲಿ ನಾನೇನು ಕಾಣಿಕೆ ಕೊಡಲಿ ? ನನ್ನ ಅಭಿಮಾನದ ಎರಡು ಮಾತು ಗಳು. ಅವರು ನೂರ್ಕಾಲ ಬಾಳಲಿ. ಅವರ ಲೇಖಣಿ ಶ್ರೀಮಂತವಾಗಲಿ ; ಧೀಮಂತವಾಗಲಿ. 'ಕನ್ನಡ ಸಾಹಿತಿ ದರ್ಶನ'ದಂತಹ ಮೌಲಿಕ ಕೃತಿಗಳು ಅವರ ಲೇಖಣಿಯಿಂದ ಹೊರ ಬರಲಿ ಎಂದು ಹಾರ್ದಿಕವಾಗಿ ಹಾರೈಸುತ್ತೇನೆ.



# ಸದ್ದಿಲ್ಲದ ಸಾಹಿತ್ಯ ಕಾರ್ಯಕರ್ತ

—ರಸಿಕ ಪುತ್ತಿಗೆ

ಎಪ್ಪತ್ತರ ದಶಕಗಳಲ್ಲಿ ಬೆಂಗಳೂರಲ್ಲಿ ನಡೆಯುತ್ತಿದ್ದ ಸಾಹಿತ್ಯ ಕಾರ್ಯಕ್ರಮ ಗಳಲ್ಲೂ ನೀಟಾಗಿ ಉಡುಪು ಧರಿಸಿದ ಸುಂದರ ವ್ಯಕ್ತಿ ಚಟುವಟಿಕೆಯಿಂದ ಓಡಾಡು ತ್ತಿದ್ದರು. ಸುಮಾರಿಗೆ ನನ್ನ ಓರಗೆಯವರಾದ ಶ್ರೀನಿವಾಸರಾವ್ ತನ್ನನ್ನು ಪರಿಚಯ ಮಾಡಿಕೊಂಡು ಕೈ ಕುಲುಕುತ್ತಿದ್ದ ಇವರು ಯಾವುದೋ ಸರಕಾರೀ ಕೆಲಸದಲ್ಲಿದ್ದರು, ಪ್ರೊಫೆಸರ್, ಲೆಕ್ಚರರ್. ಉಪಾಧ್ಯಾಯರ ಗುಂಪಾಗಿದ್ದ ಸಾಹಿತ್ಯ ಲೋಕದಲ್ಲೂ ಕಾಣಿಸಿಕೊಂಡ ಶ್ರೀನಿವಾಸರಾವ್ ಕನ್ನಡ ಪ್ರಭದಲ್ಲೂ ಧಾರಾವಾಹಿ ಕಾದಂಬರಿ (ಹರಿಗೋಲು) ಪ್ರಕಟವಾದಾಗ ನಿಕಟ ಸಂಪರ್ಕವಿದ್ದ ನಾರಾಯಣ ಸ್ವಾಮಿಯವರ ಮೂಲಕ ನನಗೆ ಹತ್ತಿರದವರಾದರು. ಭಾರತ ಭಾರತಿ ಬಳಗದಲ್ಲಿಯೂ ನನ್ನ ಜೊತೆಗಾರರಾದರು. ಅಲ್ಲಿಯೂ ಇವರ ಕೆಲವು ಕೃತಿ ಪ್ರಕಟವಾಗಿದೆ. ಇವರ ಎರಡು ಪ್ರಕಟಿತ ಕಾದಂಬರಿಗಳ ವಿಮರ್ಶೆಯೊಮ್ಮೆ ಕನ್ನಡ ಪ್ರಭದಲ್ಲೂ ಪ್ರಕಟವಾಯಿತು. ಆ ವಿಮರ್ಶೆ ಬರೆದ ನಾನು ಮತ್ತೊಮ್ಮೆ ಅವರನ್ನು ನೋಡಿದಾಗ ವಿಮರ್ಶೆ ಓದಿದಿರಾ ? ಎಂದಾಗ ಓದಿದೆ ಎಂದಷ್ಟೇ ಹೇಳಿದರು. ಹಾಗೆ ಪರಿಚಯ ಬೆಳೆಯುತ್ತ ಮಕ್ಕಳ ಸಾಹಿತ್ಯ ಲೋಕದತ್ತ ಬಹುಶಃ ನಾವು ಒಟ್ಟಿಗೇ ಕಾಲು ಹಾಕಿದ ಹಾಗೆ ಅನ್ನಿಸಿತು. ಮಕ್ಕಳ ಸಾಹಿತ್ಯ ಪರಿಷತ್ತು ಎಂಬ ಸಂಸ್ಥೆ ಆರಂಭವಾದಾಗ ಅದರ ಮೂಲಕ ನಮ್ಮ ಪರಿಚಯ ಹತ್ತಿರವಾಯಿತು. ಅನುವಾದ, ಸ್ವಂತ ರಚನೆ, ಮಕ್ಕಳ ಸಾಹಿತ್ಯ, ರೇಡಿಯೋ ರೂಪಕ ನಾಟಕ, ಮುಂತಾದ ಹತ್ತಾರು ವಿಧಗಳಲ್ಲಿ ಬರೆಯು ತ್ತಿದ್ದ ಶ್ರೀನಿವಾಸ ರಾಯರು—ಪ್ರಜಾಮತದಲ್ಲಿ ಮಕ್ಕಳೇ ಇವರನ್ನು ನೀವು ಬಲ್ಲಿರಾ ಎಂಬ ಮಾಲಿಕೆ ಆರಂಭಿಸಿ ಆ ಲೇಖನಗಳನ್ನೆಲ್ಲಾ ಪುಸ್ತಕ ರೂಪದಲ್ಲಿ ಪ್ರಕಟಿಸಿ ಉತ್ತಮ ಕಾರ್ಯ ಮಾಡಿದರು. ಒಂದು ದಾಖಲೆ ಸೃಷ್ಟಿಸಿದರು.

ತಮ್ಮದೇ ಪ್ರಕಾಶನ ಸಂಸ್ಥೆ ಆರಂಭಿಸಿ ಆ ಮೂಲಕ ಉತ್ತಮ ಪುಸ್ತಕಗಳನ್ನು ಕನ್ನಡಕ್ಕೆ ನೀಡಿದ ಶ್ರೀನಿವಾಸರಾವ್ ಒಳ್ಳೆಯ ಗೆಳೆಯ. "ಮಾತು ಕಡಿಮೆ ಕೃತಿ ಹೆಚ್ಚು" ಎಂಬ ಗಾದೆ ಉದಾಹರಣೆಯಾಗಿರುವ ಶ್ರೀನಿವಾಸರಾವ್ ನನಗಿಂತಲೂ ಪ್ರಾಯದಲ್ಲಿ ಒಂದು ವರ್ಷ ದೊಡ್ಡವರು ಎಂದು ತಿಳಿದುದು ಅವರು ಹೇಳಿದ ನಂತರವೇ. ಅವರದು ಚಿರಯೌವನ. ಸದ್ದಿಲ್ಲದೆ ಸಾಹಿತ್ಯ ಸೇವೆ ಸಲ್ಲಿಸುವ

ಶ್ರೀನಿವಾಸರಾಯರು ಸುಲಭವಾಗಿ ಸಾಹಿತ್ಯ ಲೋಕಕ್ಕೆ ಬಂದವರಲ್ಲ. ನಿರಂತರ ಪರಿಶ್ರಮ, ಅಧ್ಯಯನ, ಹೋರಾಟ, ಮೇಲೇರಬೇಕೆಂಬ ನಿರಂತರ ಬಯಕೆಗಳ ಫಲವಾಗಿ ನಿಮಿರಿ ನಿಂತವರು.

ಸರಕಾರೀ ಸೇವೆಯ ಬಂಧನ ಕಳಚಿಕೊಂಡ ಶ್ರೀನಿವಾಸರಾಯ ಇನ್ನು ಮುಂದಿನ ತಮ್ಮ ಜೀವನದ ಅವಧಿಯಲ್ಲಿ ಮಕ್ಕಳ ಸಾಹಿತ್ಯಕ್ಕೆ ತಮ್ಮನ್ನು ಮೀಸಲಿರಿಸಿಕೊಳ್ಳಲಿ ಎಂದು ಆಶಿಸುತ್ತೇನೆ.

ಅವರ ಕುರಿತು ವಿಮರ್ಶಾತ್ಮಕ ಅಭ್ಯಾಸ ಮಾಡಿ ಲೇಖನ ಬರೆಯುವ ನನ್ನ ಬಯಕೆ ಹತ್ತು ಹಲವು ಕಾರ್ಯಗಳಿಂದ ಕೈಗೂಡಲಿಲ್ಲ. ಆದರೆ ತುಮಕೂರಿನ ಸಾರಂಗಿ ವೆಂಕಟ ರಾಮಯ್ಯ ಶ್ರೀನಿವಾಸರಾಯರು, ತಮ್ಮ ಕೃತಿಗಳ ಮೂಲಕ ಚಟುವಟಿಕೆಗಳ ಮೂಲಕ ಕನ್ನಡ ಸಾರತ್ವದ ಲೋಕದಲ್ಲೂ ಮರೆಯಲಾರದ ನೆನಪಾಗಿ ಇರುತ್ತಾರೆ.

ಅವರು ಮಕ್ಕಳ ಸಾಹಿತ್ಯ ಲೇಖಕರಿಗಾಗಿಯೇ ಒಂದು ಚಟುವಟಿಕೆಯ ಕೇಂದ್ರ ಸ್ಥಾಪಿಸಿ ಅದರ ಕೇಂದ್ರವ್ಯಕ್ತಿಯಾಗಿ ದುಡಿದರೆ ಅತ್ಯಂತ ಸಂತಸ ಪಡುವವರಲ್ಲಿ ನಾನೂ ಒಬ್ಬ. ಭಗವಂತನು ಸಕಲ ಸನ್ಮಂಗಳವನ್ನು ಮಾಡಲಿ. ವರ್ಧತಾಂ–ಅಭಿವರ್ಧತಾಂ ಶ್ರೀನಿವಾಸ ಶ್ರೀ.





# ಶ್ರೀನಿವಾಸರಾವ್–ನಾನು ಕಂಡಂತೆ

—ಶ್ರೀಮತಿ ನಿರುಪಮಾ

ಸಹೃದಯ, ಸೌಜನ್ಯಗಳ ಸಾಕಾರವಾದ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರನ್ನು ಮೊಟ್ಟ ಮೊದಲಿಗೆ ಭೇಟಿಯಾದದ್ದು ಸುಮಾರು 1971 ರಲ್ಲಿ. ಅವರು ಆಗತಾನೆ ಮುಂಬಯಿಯಿಂದ ವರ್ಗವಾಗಿ ಬೆಂಗಳೂರಿಗೆ ಬಂದು ಮಲ್ಲೇಶ್ವರದಲ್ಲಿ ನಮ್ಮ ಮನೆಯ ಹತ್ತಿರವೇ ಮನೆ ಮಾಡಿದ್ದರು. ಆಗತಾನೆ ಅವರ ಕಾದಂಬರಿ ಕಾಡಬೆಳದಿಂಗಳು "ಸುಧಾ"ದಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿತ್ತು. ಅವರು ತುಮಕೂರಿನವರೆಂದು ತಿಳಿದಾಗ, ನಾನೂ ಸಹ ತುಮಕೂರು ಜಿಲ್ಲೆಯವನೇ ಆದ್ದರಿಂದ ಅವರ ಬಗ್ಗೆ ಸಹಜವಾಗಿ ಕುತೂಹಲ ಮೂಡಿತ್ತು.

ಕಾರಣಾಂತರದಿಂದ ಒಮ್ಮೆ ಅವರ ಮನೆಗೆ ಹೋದಾಗ ಶ್ರೀನಿವಾಸರಾವ್ ದಂಪತಿಗಳು ನನ್ನನ್ನು ತುಂಬ ಆದರ ವಿಶ್ವಾಸಗಳಿಂದ ಕಂಡರು. ಅವರ ಸಹೃದಯತೆ ಕಂಡು ನನಗೆ ತುಂಬ ಸಂತೋಷವೆನಿಸಿದುದರ ಜೊತೆಗೆ ಆಶ್ಚರ್ಯವೂ ಆಯಿತು. ನಾಲ್ಕಾರು ವಾಕ್ಯಗಳು ಬರೆಯಲು ಬಂದೊಡನೆ ಜೊತೆಗೆ ಒಂದೋ ಎರಡೋ ಪುಸ್ತಕ ಪ್ರಕಟವಾದೊಡನೆ ಎಂಥವರೂ ಕವಿ, ಮಹಾಕವಿಗಳಾಗಿ ಮರ ಹತ್ತಿ ಕೂರುತ್ತಾರೆ. ಅಂತಹುದರಲ್ಲಿ ಅಷ್ಟು ಹೊತ್ತಿಗಾಗಲೇ ನಾಲ್ಕಾರು ಕಾದಂಬರಿ ಗಳನ್ನು ಪ್ರಕಟಿಸಿ, ಕನ್ನಡದ ಪ್ರಮುಖ ವಾರ, ದಿನ ಪತ್ರಿಕೆಗಳಲ್ಲಿ ಧಾರಾಳವಾಗಿ ಧಾರಾವಾಹಿ ಕಾದಂಬರಿಗಳನ್ನು ನೀಡುತ್ತಿದ್ದ ಶ್ರೀನಿವಾಸರಾವ್ ತುಂಬ ಸರಳ ಹಾಗೂ ಸೌಜನ್ಯಗಳ ಮೂರ್ತಿಯಾಗಿ ಕಂಡರು. ಅವರ ಪತ್ನಿ ಶ್ರೀಮತಿ ಅನಸೂಯ ಅವರಿಗೆ ಹೇಳಿ ಮಾಡಿಸಿದಂತೆ. ಅವರಿಬ್ಬರ ನಡೆ, ನುಡಿ, ಯೋಚನೆ, ವಿಶ್ವಾಸ ಒಂದೇ ಎಂಬಂತೆ ಇರುವುದು (ಇಂದಿಗೂ) ತುಂಬ ಅಪರೂಪ ಹಾಗೂ ಅಪೂರ್ವ. ಇಂತಹ ದಂಪತಿಗಳ ನಿಕಟ ಸಂಪರ್ಕದಲ್ಲಿ ನಾನು ಸುಮಾರು ಇಪ್ಪತ್ತಕ್ಕೂ ಹೆಚ್ಚಿನ ವರುಷಗಳನ್ನು ಹೇಗೆ ಕಳೆದೆ ? ನಿಜಕ್ಕೂ ಇದೊಂದು ಯೋಗಾಯೋಗವೆನ್ನ ಬಹುದು.

ಒಬ್ಬ ಸಹ ಲೇಖಕರಾಗಿ, ಸಹೃದಯಿಯಾಗಿ, ಉತ್ತಮ ಸ್ನೇಹಿತರಾಗಿ ನನ್ನ ಸಾಹಿತ್ಯದ ಬದುಕಿನ ಚಟುವಟಿಕೆಗಳೆಲ್ಲದರಲ್ಲೂ ಪಾಲ್ಗೊಳ್ಳುತ್ತ ಸ್ಪಂದಿಸುತ್ತ,

ಸನಿಕರಿಸುತ್ತ ಬಂದ ವ್ಯಕ್ತಿ ಶ್ರೀನಿವಾಸರಾವ್. ಆದರೆ ನನಗೆ ವೈಯಕ್ತಿಕವಾಗಿ ಅವರಲ್ಲಿ ಹೆಚ್ಚಿನ ಅಭಿಮಾನ ಮೂಡಿಸಿ ನನ್ನ ಜೀವನದಲ್ಲಿ ಅವರಿಗೊಂದು ವಿಶಿಷ್ಟ ಸ್ಥಾನ ಕಲ್ಪಿಸುವಂತಾದುದಕ್ಕೆ ಒಂದು ಕಾರಣವೂ ಇದೆ. ಇದೊಂದು ವೈಯಕ್ತಿಕ ವಿಚಾರವಾದರೂ ಹೇಳಬಹುದೆಂದೆನಿಸಿದ್ದರಿಂದ ಹೇಳಬಯಸುತ್ತೇನೆ.

ನನಗೆ ಮದುವೆಯಾಗಿ ಅತ್ತೆ ಮನೆಯ ದೊಡ್ಡ ಕುಟುಂಬಕ್ಕೆ 18ನೇ ಸದಸ್ಯಳಾಗಿ ಹೋದಾಗ ನನ್ನ ಕೊನೆಯ ಮೈದುನ ನಾಣಿಗೆ 13 ವರುಷ. ಸ್ವತಃ ಸಂಕೋಚ ಪ್ರವೃತ್ತಿಯ ಹುಡುಗ. ನನ್ನನ್ನು ಕಂಡರೇ ತುಂಬ ಗೌರವವಿತ್ತು. ಅವನಿಂದಾಗಿ ಇಡೀ ರಸ್ತೆಯ ಹುಡುಗರೆಲ್ಲರೂ ನನ್ನನ್ನು ಅತ್ತಿಗೆ ಎಂದು ಕರೆಯುತ್ತಿದ್ದರು. ನಾವಿಬ್ಬರೂ ಅಕ್ಕ ತಮ್ಮಂದಿರಂತೆ ಬೆಳೆದೆವು. ಅತ್ತೆಯ ಮನೆಯಲ್ಲಿ ಸಾಕಷ್ಟು ಕಷ್ಟ ನೋವುಗಳನ್ನು ಕಾಣುತ್ತಿದ್ದ ನನಗೆ ನಾಣೀಯ ಆತ್ಮೀಯತೆ, ಪ್ರೀತಿ ವಿಶ್ವಾಸಗಳು, ನನ್ನ ಕಷ್ಟ ನಿವಾರಿಸಲು ಅವನು ತರುತ್ತಿದ್ದ ಬವಣೆ, ನನ್ನ ಜೀವನದಲ್ಲಿ ಆಸೆ ಹುಟ್ಟಿಸಿದ್ದವು.ಚಿನ್ನದಂತಹ ಹುಡುಗ ! ತನ್ನ 24ನೇ ವಯಸ್ಸಿನಲ್ಲಿ ನಮ್ಮನ್ನಗಲಿದ.

1971 ರಲ್ಲಿ ನಾನು ಮೊಟ್ಟಮೊದಲಿಗೆ ಶ್ರೀನಿವಾಸರಾವ್ ಅವರನ್ನು ಕಂಡಾಗ ನಾನು ನಿಜಕ್ಕೂ ಚಕಿತಳಾದೆ. ನಮ್ಮ ನಾಣಿಯೇ ಮೂರ್ತಿವೆತ್ತು ಬಂದಂತಿದ್ದ ಅವರ ಮುಖದ ಚಹರೆ, ನಡೆ ನುಡಿ, ಸಹೃದಯತೆ ಮುಂತಾದ ನಾಣಿಯ ಹೋಲಿಕೆಗಳೆಲ್ಲವನ್ನೂ ಅವರಲ್ಲಿ ಕಂಡೆ. ನನಗರಿವಿಲ್ಲದಂತೆ ಅವರ ಬಗ್ಗೆ ಅಭಿಮಾನ ಮೂಡಿತು. ಅದಕ್ಕೆ ನೀರೆರೆದು ಪ್ರೋಷಿಸಿದವರು ಅವರ ಪತ್ನಿ ಶ್ರೀಮತಿ ಅನಸೂಯ. ಹೀಗೆ ನಮ್ಮ ಅವರ ಸ್ನೇಹ ಜೀವನದ ಹಲವಾರು ಮಜಲುಗಳ ಪ್ರಯಾಣ ಮಾಡುತ್ತ ಬಂದಿದೆ. ಇದು ಕೇವಲ ನನ್ನ ವೈಯಕ್ತಿಕ ಅನುಭವ.

ಸಾರಸ್ವತ ಕ್ಷೇತ್ರದಲ್ಲಿ ಸಾಹಿತಿ ಶ್ರೀನಿವಾಸರಾಯರಿಗೊಂದು ವಿಶಿಷ್ಟ ಸ್ಥಾನವಿದೆ. ಅವರು ತಾವು ಯಾವುದೇ ಕಥೆ, ಕಾದಂಬರಿಗಳನ್ನು ಬರೆಯಲು ತೊಡಗಿದರೂ ಅದಕ್ಕೆ ತಕ್ಕ ಮಾಹಿತಿ ಸಂಗ್ರಹಣೆ, ಅದು ಎಲ್ಲಿದ್ದರೂ ಹುಡುಕಿ ತರುವ ಸಹನೆ, ಸಾಮರ್ಥ್ಯ, ಅವುಗಳೆಲ್ಲವನ್ನು ತಮ್ಮ ಕಥಾವಸ್ತುವಿನ ಚೌಕಟ್ಟಿನಲ್ಲಿ ಅಚ್ಚುಕಟ್ಟಾಗಿ ಅಡಗಿಸುವ ಜಾಣ್ಮೆಯ ಜೊತೆಗೆ ವಿಸ್ತಾರವಾದ ಕಾಲ್ಪನಿಕ ಶಕ್ತಿ, ಮೋಹಕ ಶೈಲಿಯ ಬರವಣಿಗೆ ಅವರನ್ನು ಇತರರಿಗಿಂತ ಭಿನ್ನವಾಗಿಸಿದೆ. ಇನ್ನೊಂದು ವೈಶಿಷ್ಟ್ಯವೆಂದರೆ ಇವರು ರಚಿಸಿದ ಹೆಚ್ಚಿನ ಸಂಖ್ಯೆಯ ಕಥೆ ಕಾದಂಬರಿಗಳು ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗಿರುವುದು. ಇವರ ಶೈಲಿ ಹೃದ್ಯ, ಅಭಿವ್ಯಕ್ತಿ ಪ್ರಸ್ಫುಟ–ವಾಕ್ಯ ರಚನೆ ಸುಂದರ. ಕಥಾವಸ್ತು ಇತಿಹಾಸದ ಆಳದಿಂದ ಹಿಡಿದು ಆಧುನಿಕ ಬದುಕಿನವರೆಗೆ

ಎಲ್ಲ ಹರಹುಗಳನ್ನು ಪಡೆದುಕೊಂಡಿದೆ. ಇವರ ಕೆಲ ಕೃತಿಗಳಂತೂ ಚಿರಂತನ ಮೌಲ್ಯವುಳ್ಳವು. ಕನ್ನಡ ಸಾಹಿತಿಗಳ ಪರಿಚಯದ ಗ್ರಂಥ "ಕನ್ನಡ ಸಾಹಿತಿ ದರ್ಶನ" ಮಕ್ಕಳಿಗೆ ಬರಹಗಾರರ ಪರಿಚಯ ಮಾಡಿಕೊಟ್ಟ "ಮಕ್ಕಳೇ ಇವರನ್ನು ಬಲ್ಲಿರಾ ?" ಇವು ಇವರ ಅಧ್ಯಯನ ಶೀಲತೆಯನ್ನೂ ಮಾಹಿತಿ ಸಂಗ್ರಹಣಕಾರ್ಯದಲ್ಲಿ ಇವರ ದಕ್ಷತೆಯನ್ನೂ ಸಾರುತ್ತವೆ. ಕೊಡಗಿನ ಇತಿಹಾಸಕ್ಕೆ ಸಂಬಂಧಿಸಿದ ಪ್ರೌಢಪ್ರತಾಪ ವೀರರಾಜೇಂದ್ರ ಒಂದು ಅತ್ಯುತ್ತಮ ಮಾದರಿಯ ಐತಿಹಾಸಿಕ ಕಾದಂಬರಿ, ಈ ಕೃತಿಗಳ ಪ್ರತಿಯೊಂದು ಪುಟದಲ್ಲೂ ಅವರ ಪರಿಶ್ರಮ ಪ್ರತಿಭೆ ಎದ್ದು ಕಾಣುತ್ತದೆ. ತಮ್ಮ ವೃತ್ತಿಯಲ್ಲಿ ಕಂಡಂತ ತಿಳಿವಳಿಕೆಯನ್ನು ತಮ್ಮ ಪ್ರವೃತ್ತಿಯಲ್ಲೂ ಅಡಗಿಸುವ ಸಾಮರ್ಥ್ಯ ಹೊಂದಿರುವ ಶ್ರೀನಿವಾಸರಾವ್ ಬರೆದ ವೈಜ್ಞಾನಿಕ ಪುಸ್ತಕಗಳಿಗೂ ಕೊರತೆ ಇಲ್ಲ. ಸೃಜನಾತ್ಮಕ ಸಾಹಿತ್ಯವನ್ನು ಸಶಕ್ತವಾಗಿ ತಮ್ಮ ಲೇಖಣಿಯಲ್ಲಿ ಸೆರೆಹಿಡಿದ ಇವರು ಸಮೀಕ್ಷಣಾತ್ಮಕ ಸಾಹಿತ್ಯವನ್ನೂ ಅಷ್ಟೇ ಯಶಸ್ವಿಯಾಗಿ ನಿರೂಪಿಸಿದ್ದಾರೆ. ಒಟ್ಟಿನಲ್ಲಿ ರಸಾತ್ಮಕ ದೃಷ್ಟಿ, ವಿಮರ್ಶಾತ್ಮಕ ದೃಷ್ಟಿ, ವೈಜ್ಞಾನಿಕ ದೃಷ್ಟಿ ಯಾವುದೂ ನಿರ್ಲಕ್ಷಕ್ಕೊಳಗಾಗಿಲ್ಲ. ಜೊತೆಗೆ ಸಾಹಿತ್ಯದ ಎಲ್ಲ ಪ್ರಕಾರ ಗಳನ್ನೂ (ಕವಿತೆ ಬಿಟ್ಟು) ತಮ್ಮದಾಗಿಸಿಕೊಂಡಿರುವ ಇವರು ಜೀವನ ಚರಿತ್ರೆ,ನಾಟಕ ಗಳನ್ನೂ ಬರೆದಿದ್ದಾರೆ. ಇವರು ಅನುವಾದಿಸಿದ ಕಥಾಸಂಕಲನಕ್ಕೆ ರಾಷ್ಟ್ರೀಯ ಬಹುಮಾನ ದೊರಕಿದೆ. ಬಾನುಲಿ ನಾಟಕಗಳು ಟಿ.ವಿ. ನಾಟಕಗಳು ಇವರ ರಚನೆಯ ವ್ಯಾಪಕತೆಯನ್ನೂ ಸಾರುತ್ತವೆ.

ಅನೇಕ ಸಂಘ ಸಂಸ್ಥೆಗಳ ಚಟುವಟಿಕೆಯ ಬದುಕನ್ನೂ ಕಟ್ಟಿಕೊಂಡಿರುವ ಶ್ರೀನಿವಾಸರಾವ್ ಅವರ ಇನ್ನೊಂದು ಮುಖ ಅಷ್ಟೇ ದೇದೀಪ್ಯಮಾನ. ಈ ದಿಸೆ ಯಲ್ಲಿ ಅವರ ವ್ಯಕ್ತಿತ್ವ ನಿಷ್ಕಳಂಕ. ಯಾರೊಂದಿಗೂ ಜಗಳ ಕಟ್ಟಿಕೊಳ್ಳದೇ ಬೇರೆ ಯವರ ಬಗೆಗೆ ಈರ್ಷೆ ಅಸೂಯೆಗಳನ್ನು ಪಡದೇ, ಎಲ್ಲ ಸಮಯದಲ್ಲಿ ಎಲ್ಲರಿಗೂ ಸಹಕಾರ,ಸಹಾಯದ ಹಸ್ತ ನೀಡುತ್ತ ಬಂದಿರುವ ಶ್ರೀನಿವಾಸರಾವ್ ಅಜಾತ ಶತ್ರು. ನಾವು ಮೊಟ್ಟ ಮೊದಲಿಗೆ ಪ್ರಾರಂಭಿಸಿದ ವಿಚಾರ ವಿನಿಮಯ ಸಂಸ್ಥೆಯಲ್ಲಿ ಸಕ್ರಿಯ ಪಾತ್ರ ವಹಿಸಿ ಎಲ್ಲ ಸಭೆ ಸಮಾರಂಭಗಳಲ್ಲಿ ಮುಖ್ಯ ಪಾತ್ರ ವಹಿಸಿ ನೆರವಾಗು ತ್ತಿದ್ದರು. 72 ರಲ್ಲಿ ನಾವು ಬೆಂಗಳೂರಿನ ಹಿರಿ ಕಿರಿಯ ಲೇಖಕ ಲೇಖಕಿಯರೊಂದಿಗೆ ಹಂಪೆ, ತುಂಗಭದ್ರಾ ಅಣೆಕಟ್ಟು ಮುಂತಾದ ಪ್ರವಾಸ ಹೋದಾಗ ಶ್ರೀನಿವಾಸರಾವ್ ದಂಪತಿಗಳು ಮಾಡಿದ ಸಹಾಯವನ್ನು ಇಂದಿಗೂ ನೆನಸಿಕೊಳ್ಳುತ್ತೇನೆ. ನಂತರ ನಾನು ಅವರು ಕೆಲವಾರು ಸಂಘ ಸಂಸ್ಥೆಗಳನ್ನು ಕಟ್ಟಲು ಯೋಜಿಸಿದೆವು. ಈ ನಮ್ಮ ಯೋಜನೆಗಳಲ್ಲಿ ಕೆಲವು ಕಾರ್ಯರೂಪಕ್ಕೆ ಬಂದವು. ಅವುಗಳಲ್ಲಿ ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತೂ ಒಂದಾಗಿದೆ. ಈ ಪರಿಷತ್ತಿನ ಕೆಲಸಗಳಲ್ಲಿ ಪ್ರಮುಖ ಪಾತ್ರ ವಹಿಸಿ ಅದರ ಏಳಿಗೆಗಾಗಿ ದುಡಿದಿದ್ದಾರೆ. ಈ ಪರಿಷತ್ತಿನ ಎಲ್ಲ ಸಭೆ, ಸಮಾರಂಭ

ಸಾಹಿತ್ಯ ಸಮ್ಮೇಳನಗಳಲ್ಲಿ ಪತಿಯೊಂದಿಗೆ ಭುಜ ಕೊಟ್ಟು ಅಷ್ಟೇ ಆಸ್ಥೆ ಆಸಕ್ತಿಗಳಿಂದ ದುಡಿದಿದ್ದಾರೆ ಅನಸೂಯಾರಾವ್, ಶ್ರೀಯುತರಾದ ಸೂರ್ಯನಾಥ ಕಾಮತ್, ಜಿ. ಎಸ್. ಸಿದ್ದಲಿಂಗಯ್ಯ, ದಾಸೇಗೌಡ–ಇವರು ಈ ಪರಿಷತ್ತಿಗಾಗಿ ಅನೇಕ ರೀತಿ ಯಲ್ಲಿ ನೆರವಾಗುತ್ತ ಬಂದವರು. ಶ್ರೀನಿವಾಸರಾವ್ ಈ ಪರಿಷತ್ತಲ್ಲದೇ ಬನಶಂಕರಿ ಸಾಂಸ್ಕೃತಿಕ ಸಂಘ ಮುಂತಾದ ಇನ್ನೂ ಹಲವಾರು ಸಂಸ್ಥೆಗಳಲ್ಲಿ ಸಕ್ರಿಯವಾಗಿ ದುಡಿದಿದ್ದಾರೆ. ಈಗಲೂ ದುಡಿಯುತ್ತಿದ್ದು ಬೆಂಗಳೂರಿನ ಸಾಹಿತ್ಯ, ಸಾಂಸ್ಕೃತಿಕ ಪ್ರಪಂಚದ ಚೈತನ್ಯಾತ್ಮಕ ಪಾತ್ರವಾಗಿರುವ ಶ್ರೀ ರಾವ್ ಅಭಿನಂದನೀಯರು.

ಇತ್ತೀಚಿನ ವರುಷಗಳಲ್ಲಿ ಈ ನಿಟ್ಟಿನ ಅವರ ಚಟುವಟಿಕೆ ಒಂದು ಮಹತ್ವ ಪೂರ್ಣ ತಿರುವನ್ನು ಪಡೆದುದು ಒಂದು ವಿಶೇಷ. 1989 ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಚುನಾವಣೆ ನಡೆದು ಶ್ರೀ ಜಿ. ಎಸ್. ಸಿದ್ದಲಿಂಗಯ್ಯನವರು ಅಧ್ಯಕ್ಷರಾಗಿ ಆಯ್ಕೆಯಾದ ನಂತರ ಪರಿಷತ್ತಿಗೆ ಶ್ರೀನಿವಾಸರಾವ್ ಕೋಶಾಧಿಕಾರಿಯಾಗಿ ನೇಮಕ ಗೊಂಡಾಗ ಅನೇಕರಿಗೆ ತುಂಬ ಆಶ್ಚರ್ಯವಾಯಿತು. ಕಾರಣ ಆಗ್ಗೆ ಅವರಿನ್ನೂ ರಿಟೈರ್ಡ್ ಆಗಿರಲಿಲ್ಲ. ವೃತ್ತಿಯಿಂದ ಇಂಜನಿಯರಾಗಿ ಪ್ರವೃತ್ತಿಯಿಂದ ಕಲ್ಪನಾ ಲೋಕದಲ್ಲಿ ತೇಲಾಡುವ ಸಾಹಿತಿ ಶ್ರೀನಿವಾಸರಾವ್ ನಿರ್ದುಷ್ಟವಾದ ಹಣಕಾಸುಗಳ ನಿಷ್ಕೃಷ್ಟ ಲೆಕ್ಕಾಚಾರಗಳನ್ನು ಹೊಂದಿಸಿ, ತಲೆ ಕೆಡಿಸುವ ಕ್ಲಿಷ್ಟ ಕಾರ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಬಲ್ಲರೇ ? ಎಂದು ಸಂಶಯಿಸಿದವರೂ ಉಂಟು. ಆದರೆ ಅವರಲ್ಲಿ ಸ್ವಭಾವತಃ ಬಂದ ಪ್ರಾಮಾಣಿಕತೆ, ನಿರ್ವಂಚನೆಯ ದುಡಿತ ಎಲ್ಲರ ಅನುಮಾನವನ್ನು ಸುಳ್ಳು ಮಾಡಿತು. ಈಗಾಗಲೇ ಮೂರು ವರುಷಗಳಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಕೋಶಾಧ್ಯಕ್ಷರಾಗಿ ಜನಪ್ರಿಯರಾದುದರ ಜೊತೆಗೆ ಅವರು ತಮ್ಮ ಪಾಲಿನ ಕರ್ತವ್ಯವನ್ನು ಅಚ್ಚುಕಟ್ಟಾಗಿ ನೆರವೇರಿಸಿದ್ದಕ್ಕೆ ಈಚಿನ ಮೂರು ವರುಷಗಳಲ್ಲಿ ನಡೆದ ಅಖಿಲ ಭಾರತ ಮಟ್ಟದ ಸಾಹಿತ್ಯ ಸಮ್ಮೇಳನ ಹಾಗೂ ಅವರು ಹಮ್ಮಿಕೊಂಡ ಇತರ ಕಾರ್ಯಕ್ರಮಗಳೇ ಸಾಕ್ಷಿ. ಈ ಕಾರ್ಯಗಳಲ್ಲಿ ಬಂದ ಅಡಚಣೆ ಗಳನ್ನು ಸಾಕಷ್ಟು ಪರಿಹರಿಸಿಕೊಂಡು ಯಶಸ್ವಿಯಾಗಿ ಮುಂದುವರೆಯುತ್ತಿದ್ದಾರೆ. ಇಲ್ಲಿಯೂ ಅವರ ಅಕಳಂಕ ಕೀರ್ತಿಗೆ ಚ್ಯುತಿಯಾಗದೆ ಸವ್ಯಸಾಚಿಯಾಗಿ ಮೆರೆದಿದ್ದಾರೆ.

ಅವರ ವ್ಯಕ್ತಿತ್ವದ ಬಗ್ಗೆ ಯೋಚಿಸಿದಾಗ ಶ್ರೀನಿವಾಸರಾವ್ ಅವರಲ್ಲಿ ನಾನೆಂದೂ ದೋಷ ಕಂಡಿಲ್ಲ. ಸಾಮಾನ್ಯವಾಗಿ ಹೀಗೊಂದು ಗಾದೆಯಿದೆ. ಸ್ನೇಹಿತರ ಅಥವಾ ವ್ಯಕ್ತಿಯ ನಿಜ ಸ್ವಭಾವ ಪ್ರಯಾಣದಲ್ಲಿ ಗೊತ್ತಾಗುತ್ತೆ ಎಂದು. 1987 ರಲ್ಲಿ ಸಾಹಿತ್ಯ ಅಕಾಡೆಮಿಯ ಪರವಾಗಿ ಶ್ರೀನಿವಾಸರಾವ್ ದಂಪತಿಗಳು ಆಂಧ್ರ ಪ್ರದೇಶ ಪ್ರವಾಸ ಕೈಗೊಂಡಾಗ ನಾನೂ ಅವರೊಡನೆ ಹೋಗಿದ್ದೆ. ನಾವು

ಅನೇಕ ಕಡೆ ಸಂಚಾರ ಮಾಡಿದೆವು. ಆ ಕಾಲದಲ್ಲಿ ಅವರ ಸೌಜನ್ಯದ ನಡವಳಿಕೆ, ಆತ್ಮೀಯತೆ, ನಿಷ್ಕಳಂಕ ಸ್ವಭಾವ ನನ್ನನ್ನು ಬೆರಗುಗೊಳಿಸಿದವು. ನಂತರ ಕೆಲವಾರು ಸಂದರ್ಭಗಳಲ್ಲಿ ನಾವು ಊರುಗಳನ್ನು ಸುತ್ತುವಾಗಲೂ ನಾವು ಜನ್ಮಾಂತರ ಸ್ನೇಹಿತ ರೆಂಬಂತೆ ಒಡಹುಟ್ಟಿದವರಂತೆ ಇದ್ದೆವು. ಇನ್ನೊಂದು ವಿಶೇಷವೇನೆಂದರೆ ಅವರು ಯಾವ ಹೊತ್ತಿನಲ್ಲೂ ಯಾವ ಸಂದರ್ಭದಲ್ಲೂ ಸ್ವಲ್ಪವೂ ಬೇಸರ ತೋರಿಸಿಕೊಳ್ಳು ತ್ತಿರಲಿಲ್ಲ. ಅವರು ಅಷ್ಟೊಂದು ಸಹನೆ, ಸೌಜನ್ಯಗಳಿಂದ ನಡೆದುಕೊಂಡದ್ದನ್ನು ನೆನೆದಾಗ ಇಂಥಹವರು ನಿಜಕ್ಕೂ ತುಂಬ ವಿರಳ ಎನಿಸುತ್ತದೆ.

ಒಟ್ಟಿನಲ್ಲಿ ಬಹುಮುಖ ವ್ಯಕ್ತಿತ್ವವಿರುವ, ಸಿದ್ಧಹಸ್ತರಾದರೂ ಸಿದ್ಧಾರ್ಥ ನಂತಿರುವ ಸದ್ದುಗದ್ದಲವಿಲ್ಲದ ವ್ಯಕ್ತಿ ಶ್ರೀನಿವಾಸರಾವ್. ಬಹು ಎತ್ತರದಿಂದ ಭೋರ್ಗರೆಯುತ್ತ ಧುಮುಕುವ ಜಲಪಾತವಂತಲ್ಲದೇ, ರಮಣೀಯ ಪರಿಸರದಲ್ಲಿ ನಿಶ್ಯಬ್ದವಾಗಿ ಹರಿಯುವ ನಿರ್ಮಲ ರಸತರಂಗಿಣಿಯಂತೆ ಅವರ ಸ್ವಭಾವ ಹಾಗೂ ಸಾಹಿತ್ಯ. ಅವರಲ್ಲಿ ಪ್ರತಿಭೆ ಇದೆ. ಅವರ ಸುತ್ತಲೂ ಅಂತಹ ಪರಿಸರವಿದೆ. ಅವರ ರಚನೆಗಳು ಸಾಹಿತ್ಯ ಚರಿತ್ರೆಯಲ್ಲಿ ಮೈಲಿಗಲ್ಲನ್ನು ಸೃಷ್ಟಿಸಿವೆ. ಸಾಹಿತ್ಯ ಸೃಷ್ಟಿಯ ಸುದೂರ ಯಾನದಲ್ಲಿ ಸಾರ್ಥಕತೆಯ ಮಜಲನ್ನು ಮುಟ್ಟುತ್ತಿದ್ದಾರೆ. ಸರಸ್ವತಿಯ ಮುಡಿಗೆ ಉತ್ತಮ ಪುಷ್ಪಗಳನ್ನಿತ್ತಿರುವ ಅವರ ಈ ಸಾಹಿತ್ಯ ಸೇವೆ ಮೇರು ಸ್ಥಾಯಿಯಲ್ಲಿ ನಿಂತು ಅವರ ಕೀರ್ತಿ ಪತಾಕೆಯನ್ನು ಎತ್ತರಕ್ಕೆ ಹಾರಿಸಲಿ ! ಎಂದು ಹಾರೈಸುತ್ತೇನೆ, ಅವರಿಗೂ ಅವರ ಕುಟುಂಬಕ್ಕೂ ಭಗವಂತನು ಮಂಗಳ ವನ್ನುಂಟು ಮಾಡಲಿ.



# ಮುಂಬಯಿ ನೆನಪುಗಳು

—ಟಿ. ಎಸ್. ವೆಂಕಟೇಶ್

ಹೊರನಾಡ ಕನ್ನಡಿಗರಲ್ಲಿ ಮುಂಬಯಿಯಲ್ಲಿ ನೆಲೆಸಿರುವ ಕನ್ನಡಿಗರ ಚಟುವಟಿಕೆಗಳು ವೈವಿಧ್ಯ ಹಾಗೂ ಸರ್ವತೋಮುಖವಾದವು. ಸಾಹಿತ್ಯ, ಕಲೆ, ವಿದ್ಯಾಭ್ಯಾಸ, ಕೈಗಾರಿಕೆ ಹೀಗೆ ಯಾವುದೇ ಕ್ಷೇತ್ರದಲ್ಲಿ ನೋಡಿದರೂ ಕನ್ನಡ ರಾಜ್ಯದ ಚಟುವಟಿಕೆಗಳಿಗೆ ಸರಿಸಮಾನವಾಗಿ ಕೆಲಸ ಮಾಡುತ್ತಿರುವ ಕ್ಷೇತ್ರ ಮುಂಬಯಿಯೆಂದರೆ ತಪ್ಪಾಗಲಾರದು. ಇದನ್ನು ಪರಿಚಯಿಸುವುದು ಅಭಿನಂದನಾ ಗ್ರಂಥದಲ್ಲಿ ಅಳವಡಿಸುವ ಲೇಖನದಲ್ಲಿ ಸಾಧ್ಯವಾದುದಲ್ಲವೆಂದು ಭಾವಿಸುತ್ತೇನೆ. ಆದ್ದರಿಂದ ನನ್ನ ಪರಮ ಆಪ್ತ ಮಿತ್ರರೂ ನನ್ನ ಅಭಿಮಾನಿಗಳೂ ಆದ ಶ್ರೀ ಎಸ್. ವಿ. ಶ್ರೀನಿವಾಸರಾಯರ ಮತ್ತು ನಾನು ಮುಂಬಯಿಯಲ್ಲಿದ್ದ ಸಮಯದ ಕನ್ನಡಿಗರ ಕಾರ್ಯ ಚಟುವಟಿಕೆಗಳ ಪರಿಚಯವನ್ನು ಸ್ವಲ್ಪ ಮಟ್ಟಿಗೆ ಮಾಡಿಕೊಡಲು ಅತ್ಯಂತ ಹರ್ಷ ಪಡುತ್ತೇನೆ.

ನನ್ನ ಮತ್ತು ಶ್ರೀ ಎಸ್. ವಿ. ಶ್ರೀನಿವಾಸರಾಯರ ಸ್ನೇಹ ಅರ್ಧ ಶತಮಾನಕ್ಕಿಂತಲೂ ಮಿಗಿಲಾದುದು. ಬಾಲ್ಯದ ನಮ್ಮ ಆಟಪಾಟಗಳಿಗೆ ತುಮಕೂರಿನ ಅವರ ಸ್ವರಾಜ್ಯ ಭವನವೇ ಕೇಂದ್ರ ಸ್ಥಳ. ಶಾಲೆಗೆ ಬರುವಾಗ, ಆಟಕ್ಕೆ ಬರುವಾಗ ಅವರು ಚಡ್ಡಿ ಜೋಬಿನಲ್ಲಿ ತರುತ್ತಿದ್ದ ಚಕ್ಕುಲಿ, ಕೋಡಬಳೆ, ಒಂದೊಂದು ಸಾರಿ ರೊಟ್ಟಿ ಸಹ ಈಗಲೂ ನೆನೆದರೆ ಬಾಯಲ್ಲಿ ರಸಪೂರಿಸುತ್ತವೆ. ಅಂದಿನ ನಮ್ಮ ಆಟಗಳಾದ ಚಿಣ್ಣಿದಾಂಡು, ಕ್ರಿಕೆಟ್ (ಮೊದಲು ಚಂಡು(ಬಟ್ಟೆ) ನಂತರ ರಬ್ಬರ್ ಬಾಲು, ಕಾರ್ಕ್ ಬಾಲು, ಲೆದರ್ ಬಾಲು) ಮೊದಲಾದ ಆಟಗಳ ಪ್ರಾರಂಭ, ಸಾಮಗ್ರಿಗಳ ಶೇಖರಣೆಗೂ ಅವರ ಮನೆಯೇ ಪ್ರಮುಖ ಸ್ಥಳ. ಪ್ರಾಥಮಿಕ ಶಾಲೆಯಿಂದ ಪ್ರಾರಂಭವಾದ ನಮ್ಮ ಜತೆ ಪ್ರೌಢಶಾಲೆಗೆ ಬಂದಾಗ ಅವರು ಆರ್ಯನ್ ಹೈಸ್ಕೂಲಿಗೂ ನಾನು ಸಿದ್ಧಗಂಗಾ ಹೈಸ್ಕೂಲಿಗೂ ಸೇರುವ ಮೂಲಕ ಬೇರೆಯಾದರೂ ಇತರೆ ಚಟುವಟಿಕೆಗಳಿಗೆ ಅವರ ಮನೆ ಮತ್ತು ಗಾಂಧಿ ಮೈದಾನದಲ್ಲಿ ಸೇರುವುದು ನಮಗೂ, ನಮ್ಮ ಇತರೆ ಆಪ್ತ ಸ್ನೇಹಿತರಾದ ರಾಮಸ್ವಾಮಿ, ಕೃಷ್ಣಮೂರ್ತಿ, ಧೀರೇಂದ್ರ, ಕುಬೇರ, ಶಿವರಾಂ ಮುಂತಾದವರಿಗೂ ಇಂದಿಗೂ ಚೆನ್ನಾಗಿ ನೆನಪಿನಲ್ಲಿರುವಂತಹದು. ಅವರು ಆರ್ಯನ್ ಹೈಸ್ಕೂಲಿನಲ್ಲಿ ಓದುತ್ತಿದ್ದಾಗಲೇ ಕವಿತೆ, ಲೇಖನಗಳನ್ನು ಬರೆದು ಮೆಚ್ಚಿಗೆ, ಬಹುಮಾನ ಗಳಿಸಿದ

ಸುಸಂದರ್ಭಗಳಲ್ಲಿ ನಾವೆಲ್ಲ ಕೂಡಿ ಸಂತೋಷ ಪಡುತ್ತಿದ್ದ ಸಮಯವೂ ನಮ್ಮ ಮುಂದೆ ಅಚ್ಚಳಿಯದಂತಿದೆ. ಸುಮಾರು 1940 ರಿಂದ ಪ್ರಾರಂಭವಾದ ನಮ್ಮ ಜೊತೆ 1950-52ರ ಹೊತ್ತಿಗೆ ವಿದ್ಯಾಭ್ಯಾಸಕ್ಕೆ ನಾನು ಮೈಸೂರಿಗೆ ಹೋಗಬೇಕಾದ ಕಾರಣ ಹಾಗೂ ಇತರೆ ಕಾರಣಗಳಿಂದ ಬೇರೆಯಾದರೂ, 1960-61 ರಲ್ಲಿ ಮುಂಬಯಿಯಲ್ಲಿ ಉದ್ಯೋಗ ವರ್ಗಾವಣೆಯಿಂದ ಇಬ್ಬರೂ ಪುನಃ ಸೇರಿದಂತಾಗಿ, ಅಂದಿನಿಂದ ಇಂದಿನವರೆಗೂ ಆಳವಾಗಿ ರೂಢಿಸಿಕೊಂಡು ಬಂದಿರುವ ನಮ್ಮ ಸ್ನೇಹ ಅಪೂರ್ವವಾದುದೆಂದೇ ಭಾವಿಸುತ್ತೇನೆ. ಸ್ನೇಹ ನಮ್ಮಿಬ್ಬರಿಗೂ ಮೀಸಲಾಗದೆ, ಕುಟುಂಬ ಮತ್ತು ಮಕ್ಕಳು ಮೊಮ್ಮಕ್ಕಳಲ್ಲಿಯೂ ಬೇರೂರಿಕೊಂಡು ಮುಂದುವರೆಯುತ್ತಿದೆ.

ಮುಂಬಯಿಯಲ್ಲಿ ಭಾಂಡುಪ್‌ನಲ್ಲಿ ಅಕಸ್ಮಾತ್ ಆಗಿ ನಾವು ಸಂಧಿಸಿ ಅನೇಕ ವರ್ಷಗಳಿಂದ ಬಿಟ್ಟುಹೋಗಿದ್ದ ನಮ್ಮ ಸ್ನೇಹ ಪುನಃ ಬೆಸುಗೆಯಾಗಿ ನಮ್ಮ ಕಾರ್ಯ ಚಟುವಟಿಕೆಗಳಿಗೆ ಹೊಸ ರೂಪ ಬಂದಂತಾಯಿತು. ಹತ್ತಿರದಲ್ಲಿಯೇ ಮನೆಗಳನ್ನು ಮಾಡಿ, ಮುಂಬಯಿಯ ಕನ್ನಡ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಪ್ರಾರಂಭಿಸಿದೆವು. ಆ ಸಮಯದಲ್ಲಿ ಮುಂಬಯಿಯಲ್ಲಿ ಸುಮಾರು 80-90 ಕನ್ನಡ ಸಂಘ ಸಂಸ್ಥೆಗಳು ಕೆಲಸ ಮಾಡುತ್ತಿದ್ದವು. ಪ್ರಮುಖವಾಗಿ ಕರ್ನಾಟಕ ಸಂಘ, ಮೈಸೂರು ಅಸೋಸಿಯೇಷನ್, ಮುಂಬಯಿ ಕನ್ನಡ ಸಂಘ, ಕನ್ನಡ ಮೊಗವೀರ ಸಂಘ್, ಕನ್ನಡ ಕಲಾ ಕೇಂದ್ರ, ಭಾಂಡುಪ್ ಕನ್ನಡ ಸಂಘ್, ಕರ್ನಾಟಕ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಪ್ರಮುಖವಾದವು. ಮೈಸೂರು ಅಸೋಸಿಯೇಷನ್ ಸ್ವಂತ ಕಟ್ಟಡ ಹೊಂದಿದ್ದು ಅಲ್ಲಿ ಮೆಸ್, ಒಳಾಂಗಣ ಕ್ರೀಡೆಗಳು, ಪುಸ್ತಕ ಭಂಡಾರ, ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತಿದ್ದರೂ, ಅಲ್ಲಿಯ ಸದಸ್ಯರಲ್ಲಿ ಒಂದು ವಿಧವಾದ ಪ್ರತಿಷ್ಠೆಯಿದ್ದು ಸಮಭಾವನೆ ಹೆಚ್ಚಾಗಿ ಕಾಣ ಬರುತ್ತಿರಲಿಲ್ಲವಾಗಿ ಅದು ಸೀಮಿತ ವರ್ಗಕ್ಕೆ ಮೀಸಲಾಗಿತ್ತೆಂದು ಭಾವಿಸಬಹುದು. ಅಂದಿನ ಆದರ ಅಧ್ಯಕ್ಷ ರಾಗಿದ್ದ ಜೆ. ಎಸ್. ಐಯ್ಯರ್‌ರವರು ಬಹಳ ಶ್ರೀಮಂತರಾಗಿದ್ದರೂ ಎಲ್ಲರೊಡನೆ ಬೆರೆತು, ಆತ್ಮೀಯವಾಗಿ ಕಾಣುತ್ತಿದ್ದು ಸಂಸ್ಥೆಯ ಬೆಳವಣಿಗೆಗೆ ಮೂಲಭೂತ ರಾಗಿದ್ದುದು ನೋಡಿ ನಮಗೆ ಸ್ಫೂರ್ತಿಯುಂಟಾಗುತ್ತಿತ್ತು. ಮುಂಬಯಿಯ ಕರ್ನಾಟಕ ಸಂಘವು ಆಗಿನ್ನೂ ಸ್ವಂತ ಕಟ್ಟಡವಿಲ್ಲದೆ ಶ್ರೀ ಎ. ಎಸ್. ಕೆ. ರಾವ್‌ರವರ ಪರಿಶ್ರಮದ ಕಾರ್ಯದರ್ಶಿತ್ವದಲ್ಲಿ ಅನೇಕ ಕಾರ್ಯಕ್ರಮಗಳನ್ನು ನಡೆಸುತ್ತಿದ್ದು ಇಂದಿನ ವಿಶ್ವೇಶ್ವರಯ್ಯ ಭವನ ಅವರ ಮತ್ತು ಇತರರ ದೀರ್ಘ ಕಾಲದ ಪರಿಶ್ರಮದ ಫಲವೆಂದರೂ ತಪ್ಪಾಗಲಾರದು. ಮೈಸೂರು ಅಸೋಸಿಯೆಷನ್ ಎದುರಿಗೇ ಇರುವ ಮಾತುಂಗ ಭಾವುದಾಜಿ ರಸ್ತೆಯ ಮುಂಬಯಿಯ ಕನ್ನಡ ಸಂಘವು ಪ್ರಮುಖ

ವಾದುದು. ಮುಂಬಯಿಯಲ್ಲಿ ಸಾಹಿತ್ಯ ಚಟುವಟಿಕೆಗಳಿಗೆಲ್ಲಾ ಕೇಂದ್ರಸ್ಥಾನದಂತಿತ್ತು. ಇತರೇ ಕನ್ನಡ ಸಂಘ ಸಂಸ್ಥೆಗಳ ಸದಸ್ಯರೂ ಇಲ್ಲಿ ಸದಸ್ಯರಾಗಿದ್ದು ಕಾರ್ಯಕ್ರಮ ಗಳಲ್ಲಿ ಭಾಗವಹಿಸುತ್ತಿದ್ದರು. ಇಲ್ಲಿ ಪುಸ್ತಕ ಭಂಡಾರಿಯಾಗಿ (*Librarian*) ನಂತರ ಕಾರ್ಯದರ್ಶಿ, ಕೊನೆಗೆ ಗೌ॥ ಖಜಾಂಚಿಗಾರರಾಗಿ ಕೆಲಸ ಮಾಡುವ ಸೌಭಾಗ್ಯ ನನಗೂ ಲಭಿಸಿತ್ತು. ನಾನು ಕಾರ್ಯದರ್ಶಿಯಾಗಿದ್ದ ಸಮಯದಲ್ಲಿ ಶ್ರೀ ಎಸ್. ವಿ. ಶ್ರೀನಿವಾಸ ರಾಯರೂ ಕಾರ್ಯಕಾರಿ ಸಮಿತಿ ಸದಸ್ಯರಾಗಿದ್ದು ವಿಶೇಷ ಸಮಿತಿಯ ಸದಸ್ಯರೂ ಆಗಿದ್ದು ತಮ್ಮ ಸೇವೆಯನ್ನು ಸಲ್ಲಿಸಿರುತ್ತಾರೆ.

ಕನ್ನಡ ಸಂಘದ ಪ್ರಮುಖ ಚಟುವಟಿಕೆಗಳಲ್ಲಿ ನಾಡಹಬ್ಬ, ಗಣಪತಿ ಹಬ್ಬ, ಪುರಂದರ ದಾಸರ ಪುಣ್ಯ ದಿನಾಚರಣೆ ಪ್ರಮುಖವಾದವು ಪ್ರತಿಯೊಂದು ಸಂಸ್ಥೆಯೂ ತಮ್ಮದೇ ಆದ ಸಾಂಸ್ಕೃತಿಕ ಕಾರ್ಯಕ್ರಮಗಳು, ಪುಸ್ತಕ ಭಂಡಾರ ನಡೆಸುತ್ತಿದ್ದರೂ ಮುಂಬಯಿಯ ಕನ್ನಡ ಸಂಘದ ಕಾರ್ಯಕ್ರಮವೇ ಪ್ರಮುಖ ಚಟುವಟಿಕೆ. ಸಂಘದ ಆಜೀವ ಅಧ್ಯಕ್ಷರಾದ ಪಂಡಿತ ವಾ॥ ಹುಲಿಗೋಪಾಲಾಚಾರ್ಯರ ನೇತೃತ್ವದಲ್ಲಿ ವ್ಯಾಸರಾಯ ಬಲ್ಲಾಳರು, ವೆಂಕಟೇಶ ಮೂರ್ತಿ, ಶ್ರೀನಿವಾಸಾಚಾರ್, ಡಾ॥ ಶ್ರೀನಿವಾಸ ಹಾವನೂರು, ಪ್ರೊ॥ ಜಿ. ವಿ. ಕುಲಕರ್ಣಿ ಮೊದಲಾದ ಗಣ್ಯರ ನೇರ ಸಹಕಾರ, ಸಹಾಯ, ಸಲಹೆಗಳೊಂದಿಗೆ ಎಲ್ಲಾ ಕಾರ್ಯಕ್ರಮಗಳು ನಡೆಯುತ್ತಿದ್ದವು. ನಾಡಹಬ್ಬಕ್ಕೆ ಕರ್ನಾಟಕದಿಂದ ಪ್ರಮುಖ ವ್ಯಕ್ತಿಗಳನ್ನು ಮುಖ್ಯ ಅತಿಥಿಗಳನ್ನು ಕರೆಸಿ ಎರಡು ಅಥವಾ ಮೂರು ದಿನದ ಕಾರ್ಯಕ್ರಮವನ್ನು ಸಾಹಿತ್ಯ ಸಂಕಿರಣ, ವಿಚಾರ ಗೋಷ್ಠಿ, ಸಮ್ಮೇಳನಗಳನ್ನು ನಡೆಸುವುದು ಪ್ರಮುಖ ವಾಗಿದ್ದವು. ಇಂತಹ ಒಂದು ಕಾರ್ಯಕ್ರಮಕ್ಕೆ ತಿ. ತಾ. ಶರ್ಮರವರು ಮುಖ್ಯ ಅತಿಥಿಗಳಾಗಿ ಬಂದು ಸುಮಾರು ಒಂದು ವಾರ ಕಾಲ ಮುಂಬಯಿಯಲ್ಲಿದ್ದು ವಿವಿಧ ಸಂಘಸಂಸ್ಥೆಗಳಿಗೂ ಭೇಟಿ ನೀಡಿ ತಮ್ಮ ಅಮೂಲ್ಯವಾದ ಸಲಹೆಗಳನ್ನು ನೀಡಿದ್ದು ನಮ್ಮ ಮನಸ್ಸಿನಲ್ಲಿ ಇಂದಿಗೂ ನಿಂತಿದೆ. ನಾಡಹಬ್ಬ ಸಮಯದಲ್ಲಿ ಸ್ಮರಣ ಸಂಚಿಕೆಯ ಬಿಡುಗಡೆ ಮಾಡಿ ಅದರಲ್ಲಿ ಗಣ್ಯ ವಿದ್ವಾಂಸರ ಲೇಖನಗಳನ್ನು ಆಹ್ವಾನಿಸಿ ಸಾಹಿತ್ಯ ಪ್ರಚಾರ ನಡೆಸುವುದು ಒಂದು ವಿಶೇಷ ಕಾರ್ಯಕ್ರಮವಾಗಿರುತ್ತಿತ್ತು. ಎಸ್. ವಿ. ಶ್ರೀನಿವಾಸರಾಯರ ಸಲಹೆ ಮತ್ತು ಸಹಾಯದೊಂದಿಗೆ ಅಖಿಲ ಭಾರತ ಮಟ್ಟದಲ್ಲಿ ಲೇಖನಗಳನ್ನು ಆಹ್ವಾನಿಸಿ ಮುಖ್ಯವಾದವುಗಳನ್ನು ಸ್ಮರಣ ಸಂಚಿಕೆಯಲ್ಲಿ ಪ್ರಚಾರ ಪಡಿಸಿದ್ದು ಒಂದು ವಿಶೇಷ. ಇದಕ್ಕಾಗಿ ಅವರು ತಮ್ಮ ಕಛೇರಿಗೆ ರಜ ಹಾಕಿ ದುಡಿದದ್ದು ಸಹಕಾರ ನೀಡಿದ್ದು ಮರೆಯುವಂತಿಲ್ಲ.

ಸುಮಾರು ಒಂದು ವಾರ ಕಾಲ ನಡೆಯುತ್ತಿದ್ದ ಗಣಪತಿ ಮಹೋತ್ಸವದಲ್ಲಿ ಪ್ರತಿ ದಿನ ವಿವಿಧ ಮನರಂಜನೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು (ಸಂಗೀತ,

ಉಪನ್ಯಾಸ, ಕಥಾಕಾಲಕ್ಷೇಪ, ಇತ್ಯಾದಿ) ವಿಜೃಂಭಣೆಯಿಂದ ನಡೆಯುತ್ತಿದ್ದವು. ಗಣಪತಿ ವಿಸರ್ಜನೆಗೆ ಸುಮಾರು ಇನ್ನೂರಕ್ಕೂ ಹೆಚ್ಚು ಮಂದಿ ಮೆರವಣಿಗೆಯಲ್ಲಿ ದಾದರ್ ಬೀಚ್‌ಗೆ ಹೋಗಿ, ವಿಸರ್ಜನೆಯಾದ ನಂತರ ಎಲ್ಲರಿಗೂ ಉತ್ಕೃಷ್ಟವಾದ ಪ್ರಸಾದ ವಿನಿಯೋಗವಾಗುತ್ತಿತ್ತು.

ಪುರಂದರ ದಾಸರ ಪುಣ್ಯ ದಿನೋತ್ಸವದ ಸಂದರ್ಭದಲ್ಲಿಯೂ, ದಾಸರ ಕೀರ್ತನೆಗಳ ಸ್ಪರ್ಧೆಗಳನ್ನು ವಿವಿಧ ವರ್ಗಗಳ ಜನಗಳಲ್ಲಿ ಏರ್ಪಡಿಸಿ ಒಂದು ದಿನದ ಕಾರ್ಯಕ್ರಮ ನಡೆಸಿ ಬಹುಮಾನ ವಿತರಣೆ. ದಾಸ ಸಂಕೀರ್ತನೆ, ವಿಚಾರ ಗೋಷ್ಠಿಗಳನ್ನು ನಡೆಸಲಾಗುತ್ತಿತ್ತು. ನಾವು ಮುಂಬಯಿಯಲ್ಲಿದ್ದಾಗಲೇ ಅಖಿಲ ಭಾರತ ಮಟ್ಟದಲ್ಲಿ ದಾಸರ ನಾಲ್ಕನೆ ಪುಣ್ಯ ಶತಮಾನೋತ್ಸವದ ದೊಡ್ಡ ಕಾರ್ಯಕ್ರಮ ನಡೆಸಿ ಅದರಲ್ಲಿ ನಾನು, ಶ್ರೀ ಎ. ಎಸ್. ಕೆ. ರಾವ್ ಮತ್ತು ಶ್ರೀ ಎಂ. ಕೆ. ಶ್ರೀನಿವಾಸನ್‌ರವರು ಕಾರ್ಯದರ್ಶಿಗಳಾಗಿ ಕೆಲಸ ಮಾಡಲು ಲಭಿಸಿದ್ದು ನಮ್ಮ ಸುದೈವವೆಂದು ಭಾವಿಸುತ್ತೇನೆ. ಈ ಸಂದರ್ಭದಲ್ಲಿ ಕವಿ ವಸಂತ ಕವಲಿಯವರಿಂದಲೇ ರಚಿಸಿ ದಿಗ್ದರ್ಶಿಸಲ್ಪಟ್ಟ ನಾಟಕ ಹಾಗೂ ಅಂಚೆ ಇಲಾಖೆಯಿಂದ ದಾಸರ ಚಿತ್ರದ ಅಂಚೆ ಚೀಟಿಯ ಬಿಡುಗಡೆಯ ಏರ್ಪಾಟು ಮಾಡಲಾಗಿತ್ತು. ಮುಂಬಯಿಯ ಕನ್ನಡ ಸಂಘದಲ್ಲಿ ಪ್ರತಿ ಶನಿವಾರ ಸಂಜೆ ಭಜನೆ ಕಾರ್ಯಕ್ರಮವೂ ನಡೆಯುತ್ತಿತ್ತು.

ಕರ್ನಾಟಕದಿಂದ ಒಂದು ಸಾಹಿತಿಗಳ ನಿಯೋಗ ಪ್ರೊ॥ ವಿ. ಸೀ. ಯವರ ನೇತೃತ್ವದಲ್ಲಿ ಮುಂಬಯಿಗೆ ಭೇಟಿ ನೀಡಿ ಅನೇಕ ಸಂಘ ಸಂಸ್ಥೆಗಳ ಕಾರ್ಯಕ್ರಮವನ್ನು ವೀಕ್ಷಿಸಿ, ಸಲಹೆಗಳನ್ನಿತ್ತು, ಕನ್ನಡಿಗರ ಚಟುವಟಿಕೆಗಳನ್ನು ಶ್ಲಾಘಿಸಿತ್ತು. ಈ ನಿಯೋಗದಲ್ಲಿ ಖಾದ್ರಿ ಶಾಮಣ್ಣನವರೇ ಮುಂತಾದ ಪ್ರಮುಖ ವ್ಯಕ್ತಿಗಳಿದ್ದುದು ಅವರುಗಳ ಜತೆ ಕಳೆದ ಸಮಯವು ಚಿರಸ್ಮರಣೀಯ.

ಮುಂಬಯಿಯ ಮೇಯರ್ ಆಗಿ ದಿವಿಗಿಯವರೂ, ರಾಜಕೀಯದಲ್ಲಿ ಡಾ॥ ಲಲಿತಾರಾವ್, ಔದ್ಯೋಗಿಕ ಕ್ಷೇತ್ರದಲ್ಲಿ ನಾರಾಯಣಸ್ವಾಮಿ, ಜೆ. ಎನ್. ಐಯರ್. ಆರ್. ಡಿ. ಚಾರ್ ವಿದ್ಯಾ ಕ್ಷೇತ್ರದಲ್ಲಿ ಪತ್ರಿಕೋದ್ಯಮದಲ್ಲಿ ವೆಂಕಟೇಶಮೂರ್ತಿ, ಸಂಗೀತ ಕ್ಷೇತ್ರದಲ್ಲಿ ಶ್ರೀ ಸಿ. ಕೆ. ಶಂಕರನಾರಾಯಣರಾವ್, ಸಾಹಿತ್ಯ ಕ್ಷೇತ್ರದಲ್ಲಿ ವ್ಯಾಸರಾಯ ಬಲ್ಲಾಳರು ಮೊದಲಾದ ಪ್ರಮುಖ ವ್ಯಕ್ತಿಗಳ ಒಡನಾಟ ಕನ್ನಡ ಸಂಘಕ್ಕಿತ್ತು. ಸಾಮಾನ್ಯವಾಗಿ ಎಲ್ಲರೂ ಮುಂಬಯಿಯ ಕನ್ನಡ ಸಂಘದ ಆಜೀವ ಸದಸ್ಯರಾಗಿದ್ದು ಬೇರೆ ಬೇರೆ ಕ್ಷೇತ್ರಗಳಲ್ಲಿಯೂ ಕನ್ನಡ ನುಡಿ, ಸಾಹಿತ್ಯ, ಕಲೆಗಾಗಿ ಸಂಘಟಿತರಾಗಿ ಮುಂಬಯಿಯಲ್ಲೆ ಸೇವೆ ಸಲ್ಲಿಸುತ್ತಿದ್ದುದು

ನಮಗೆ ಸ್ಫೂರ್ತಿದಾಯಕವಾಗಿತ್ತು. ಮುಂಬಯಿಯ ಒಟ್ಟು ಜನಸಂಖ್ಯೆಯಲ್ಲಿ ಕನ್ನಡಿಗರು ಮೂರನೆಯ ಸ್ಥಾನದಲ್ಲಿದ್ದು, ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದು ಜತೆಗೆ ಕನ್ನಡ ನಾಡುನುಡಿಗಳ ಅಭಿವೃದ್ಧಿಗೂ ಸೇವೆ ಸಲ್ಲಿಸುತ್ತಿರುವುದು ಕನ್ನಡಿಗರೆಲ್ಲರೂ ಮೆಚ್ಚತಕ್ಕದ್ದೆ. ಇಂದಿಗೂ ಈ ಕಾರ್ಯಕ್ರಮಗಳು ನಡೆಯುತ್ತಿದ್ದು ಪ್ರತಿಭಾವಂತರು ಮೆರೆಯುತ್ತಿರುವುದು ಹೆಮ್ಮೆಪಡತಕ್ಕ ವಿಷಯವಾಗಿದೆ. ಮುಂಬಯಿಗೆ ಹೋದ ಯಾವ ಕನ್ನಡಿಗನಾದರೂ ಒಂದಲ್ಲ ಒಂದು ರೀತಿಯಲ್ಲಿ ಒಂದಲ್ಲ ಒಂದು ಕನ್ನಡ ಸಂಘ: ಸಂಸ್ಥೆಯ ಸದಸ್ಯತ್ವವನ್ನು ಹೊಂದಿ ವಿವಿಧ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು ಸರ್ವೇ ಸಾಮಾನ್ಯ. ಇಂತಹ ಒಂದು ಸದಾವಕಾಶ ನನಗೂ ನನ್ನ ಆಪ್ತ ಮಿತ್ರರಾದ ಶ್ರೀ. ಎಸ್. ವಿ. ಶ್ರೀನಿವಾಸರಾಯರಿಗೂ ದೀರ್ಘ ಕಾಲ ಲಭಿಸಿದ್ದು ನಮ್ಮ ಜೀವಮಾನದಲ್ಲೆ ಒಂದು ಸದವಕಾಶವೆಂದು ಭಾವಿಸಬೇಕಾಗಿದೆ.

ಶ್ರೀನಿವಾಸರಾಯರ ಮುಂಬಯಿಯ ವಾಸ; ಚಟುವಟಿಕೆಗಳು ಅವರ ಆತ್ಮೀಯವಾದ ಸಾಹಿತ್ಯಾಭಿವೃದ್ಧಿಗೂ ಸಹಾಯಕವಾಗಿತ್ತೆಂದು ಭಾವಿಸುತ್ತೇನೆ. ಅಲ್ಲಿಯೂ ಅವರ ನಾಟಕ ಸಾಹಿತ್ಯ ಕೃತಿಗಳು ಮೈಗೂಡಿ ಒಂದು ಪ್ರಚಾರವೂ ಆಯಿತು ಮತ್ತು ಕನ್ನಡಿಗರಿಗೆ ಅವರ ಸೇವೆಯೂ ಲಭಿಸಿದಂತಾಯಿತು. ತಮ್ಮ ಈ ಅನುಭವವನ್ನೂ ಹೆಚ್ಚಿಸಿಕೊಂಡು ನಿರಂತರವಾಗಿ ಸಾಹಿತ್ಯ ಸೇವೆಯನ್ನು ನಾನಾ ರೂಪವಾಗಿ ಮುಂದುವರೆಸಿಕೊಂಡು ಬರುತ್ತಿರುವ ಶ್ರೀ ಶ್ರೀನಿವಾಸರಾಯರ ಷಷ್ಟಬ್ದಿ ಪೂರ್ತಿ ಸಮಾರಂಭದಲ್ಲಿ ಅವರಿಗೆ "ಶ್ರೀ ಸೌರಭ" ಎಂಬ ಅಭಿನಂದನಾ ಗ್ರಂಥವನ್ನು ಸಮರ್ಪಿಸುತ್ತಿರುವುದು ಅವರ ಸೇವೆಗೆ ತಕ್ಕ ಗೌರವವೆಂದು ಭಾವಿಸುತ್ತೇನೆ.



# ಶ್ರೀನಿವಾಸರಾಯರ ವೃತ್ತಿ-ಪ್ರವೃತ್ತಿ

—ಎಚ್. ಕೆ. ರಾಮಮೂರ್ತಿ

ಕನ್ನಡ ಸಾಹಿತ್ಯಕ್ಕೆ ಉದಾರ ಕೊಡುಗೆಯನ್ನಿತ್ತಿರುವ ಸಾಹಿತಿಗಳ ಪಟ್ಟಿಯನ್ನು ಅವಲೋಕಿಸಿದಾಗ ಸಾಮಾನ್ಯವಾಗಿ ಬೇರೆ ಬೇರೆ ವೃತ್ತಿಗಳನ್ನು ಅವಲಂಬಿಸಿ ಕೇವಲ ತಮ್ಮ ಆತ್ಮತೃಪ್ತಿಗಾಗಿ ಸಾಹಿತ್ಯವನ್ನು ಸೃಜಿಸಿದ ಅನೇಕ ಮಹನೀಯರ ಹೆಸರುಗಳು ಕಾಣಬರುತ್ತವೆ. ವಿವಿಧ ಭಾಷಾ ಅಧ್ಯಾಪಕರುಗಳು, ಪತ್ರಿಕಾಕರ್ತರು ಹಾಗೂ ಸರ್ಕಾರೀ ಮತ್ತು ಇತರ ನೌಕರರು ಸಾಕಷ್ಟು ಸಂಖ್ಯೆಯಲ್ಲಿ ಸಾಹಿತಿಗಳ ಪರಂಪರೆಯನ್ನು ಹೆಚ್ಚಿಸಿದ್ದರೆ, ವಿಜ್ಞಾನ ಮತ್ತು ತಾಂತ್ರಿಕ ಅಧಿಕಾರಿಗಳ ಕೊಡುಗೆ ಈ ದಿಸೆಯಲ್ಲಿ ತುಸು ವಿರಳವೆಂದೇ ಹೇಳಬಹುದು. ಈ ದಿಸೆಯಲ್ಲಿ ಅವಲೋಕಿಸಿದಾಗ ಹೆಚ್ಚಿನ ಪ್ರಚಾರ ದಾಂಧಲೆಗಳಿಲ್ಲದೆ ವಿಜ್ಞಾನ ಮತ್ತು ಸಾಹಿತ್ಯ ಎರಡು ಕ್ಷೇತ್ರಗಳಲ್ಲೂ ಸಮಾನ ಸಾಮರ್ಥ್ಯಗಳಿಂದ ತಮಗೆ ವಹಿಸಿದ ಅಥವಾ ತಾವೇ ವಹಿಸಿಕೊಂಡ ಕೆಲಸವನ್ನು ನಿರ್ವಹಿಸಿಕೊಂಡು ಸಾಗುತ್ತಿರುವ ವ್ಯಕ್ತಿ ಶ್ರೀ ಎಸ್. ವಿ. ಶ್ರೀನಿವಾಸ ರಾವ್‌ರವರು. ಸುಮಾರು 22 ವರ್ಷಗಳ ಕಾಲ ಅವರ ಜೊತೆಯಲ್ಲಿ ತಾಂತ್ರಿಕ ಕೆಲಸದಲ್ಲಿ, ಲಲಿತ ಕಲಾ ಸಂಘದಲ್ಲಿ, ನಾಟಕ ನಿರ್ವಹಣೆಯಲ್ಲಿ ಹಾಗೂ ಸಾಮಾಜಿಕ ಕೆಲಸಗಳಲ್ಲಿ ಪಾಲುಗೊಂಡ ಅದೃಷ್ಟ ನನ್ನದು.

ಅವರ ಪರಿಚಯ ನನಗೆ ಪ್ರಥಮವಾಗಿ ಆದುದು 1969ರ ಸುಮಾರಿನಲ್ಲಿ. ಬಾಹ್ಯವಾಗಿ ಅಷ್ಟೇನೂ ಎದ್ದು ಕಾಣುವ ವ್ಯಕ್ತಿತ್ವವಲ್ಲವಾದರೂ ಪರಿಚಯಿಸಿದಾಗ ಅವರ ಹೆಸರು ತೀರಾ ಅಪರಿಚಿತವೆನಿಸಲಿಲ್ಲ. ಆಗ ನಮ್ಮನ್ನು ಭೇಟಿ ಮಾಡಿದ ಸ್ನೇಹಿತರು, ಶ್ರೀಯುತರು ಅನೇಕ ಮಾಸಿಕ ಹಾಗೂ ವಾರ ಪತ್ರಿಕೆಗಳಲ್ಲಿ ಕಥೆಗಳನ್ನು ಬರೆದಿರುವುದನ್ನು ಹೇಳಿದರು. ಅಂದಿನ ಸಿ. ಎ. ಎಲ್. ಲಲಿತ ಕಲಾ ಸಂಘದಲ್ಲಿ ನಾಟಕ ಕಾರ್ಯಕ್ರಮಗಳನ್ನು ಹಾಗೂ ಆಕಾಶವಾಣಿಯಲ್ಲಿ ನಾಟಕಗಳನ್ನು ನಡೆಸಿಕೊಡುತ್ತಿದ್ದ ನನಗೆ ಶ್ರೀಯುತರ ಸಾಹಿತ್ಯ ಕೃಷಿಯಿಂದ ಸಿಗಬಹುದಾಗಿದ್ದ ನೆರವನ್ನು ನೆನೆಸಿಕೊಂಡು ಬಹಳ ಸಂತೋಷ ಸಮಾಧಾನಗಳಾದವು, ಆದರೆ ನಮ್ಮ ಕಾರ್ಯಕ್ಷೇತ್ರದಲ್ಲಿ ಅವರಲ್ಲಿರುವ "ಸಾಹಿತಿ" ಪ್ರಕಟಗೊಳ್ಳುವ ಮೊದಲೇ ಅವರ ವೃತ್ತಿಯ ಪಕ್ವತೆಯ ಅರಿವಾಯಿತು. ರಕ್ಷಣಾ ಇಲಾಖೆಯಲ್ಲಿ ವಿದ್ಯುತ್ ಕೋಶ (ಬ್ಯಾಟರಿ) ಒಂದು ತಪ್ಪಿಸಿಕೊಳ್ಳಲಾಗದ ವಿಭಾಗ. ಮುಂಬಯಿಯಲ್ಲಿದ್ದಾಗ ಈ ಸಾಧನಗಳ ಸಾಮರ್ಥ್ಯ

ವನ್ನು ಅಳೆಯುವ ಅಳತೆಗೋಲುಗಳನ್ನು ನಿರ್ಮಿಸಿ ಮೆಚ್ಚುಗೆ ಪತ್ರವನ್ನು ಪಡೆದಿದ್ದ ಇವರಿಗೆ ಬೆಂಗಳೂರಿನಲ್ಲೂ ಅನೇಕ ಕಾಲ ಅದೇ ಕೆಲಸವನ್ನು ಮುಂದುವರಿಸಿಕೊಂಡು ಹೋಗುವ ಸೌಭಾಗ್ಯ ಲಭಿಸಿತ್ತು. ಇತರೇ ವಿಭಾಗಗಳಲ್ಲಿ ಕಾರ್ಯವಹಿಸುತ್ತಿದ್ದ ನಮಗೆ ಶ್ರೀಯುತರ ಕಾರ್ಯ ಜ್ಞಾನ ಅತ್ಯವಶ್ಯವಾಗಿರುತ್ತಿದ್ದಿತು. ಅಂತೆಯೇ ಅವರ ಸೌಹಾರ್ದತೆ ಮತ್ತು ತಮ್ಮ ಅನುಭವಗಳನ್ನು ಬೇರೆಯವರೊಂದಿಗೆ ಹಂಚಿಕೊಳ್ಳುವ ಉದಾರತೆ ನಮ್ಮೆಲ್ಲರ ಮೆಚ್ಚುಗೆ ಗಳಿಸಿತು. ಹೊಸ ಬ್ಯಾಟರಿ ಆವಿಷ್ಕಾರಕ್ಕೆ ಹಾಗೂ ಪರೀಕ್ಷಣಾ ಉಪಕರಣಗಳನ್ನು ಸಲಹೆಮಾಡಿ ಅವರು ಮೆಚ್ಚುಗೆ ಪತ್ರ ಹಾಗೂ ನಗದು ಬಹುಮಾನಗಳನ್ನು ಗಳಿಸಿದಾಗ ಅವರ ಕಾರ್ಯಜ್ಞಾನಕ್ಕೆ ತಲೆದೂಗು ವಂತಾದರೂ, ವಿಜ್ಞಾನ ಹಾಗೂ ತಾಂತ್ರಿಕತೆಯಲ್ಲೇ ತನ್ಮಯರಾಗಿರುವ ಈ ವ್ಯಕ್ತಿಯ ಸಾಹಿತ್ಯ ದೃಷ್ಟಿಯನ್ನು ನಮ್ಮಲ್ಲಿ ಯಾರೂ ಹೆಚ್ಚಿನ ರೀತಿಯಲ್ಲಿ ಗುರುತಿಸಿರಲಿಲ್ಲ.

ಮೊದಲ ಬಾರಿಗೆ ಅವರ ಸಾಹಿತ್ಯ ದೃಷ್ಟಿಯನ್ನು ಗುರುತಿಸುವ ಅವಕಾಶ ನಮಗೆ ಲಭಿಸಿದುದು ನಮ್ಮ ಲಲಿತ ಕಲಾ ಸಂಘದ ಚಟುವಟಿಕೆಗಳು ಆರಂಭವಾದ ಸಂದರ್ಭದಲ್ಲಿಯೇ. ನಮ್ಮ ಕಾರ್ಯಚಟುವಟಿಕೆಗಳಿಗೆ ರೂಪುರೇಷೆಯನ್ನು ನಿರ್ಮಿಸುವ ಸಂದರ್ಭದಲ್ಲಿ ಎಲ್ಲ ಸದಸ್ಯರ ಅಭಿಪ್ರಾಯಗಳನ್ನು ಗಣನೆಗೆ ತೆಗೆದುಕೊಳ್ಳುವುದು ನಮ್ಮಲ್ಲಿದ್ದ ಸಂಪ್ರದಾಯ. ಅಂತೆಯೇ ನಾಟಕ ಪ್ರದರ್ಶನದ ಚರ್ಚೆಯ ಸಂಬಂಧ ದಲ್ಲಿ ನಾಟಕಗಳ ಆಯ್ಕೆಗೆ ಇರಬೇಕಾದ ಗುಣಗಳನ್ನು ವಿಮರ್ಶಿಸುವಾಗ ಅವರಲ್ಲಿರುವ "ಸಾಹಿತಿ" "ಬುದ್ಧಿಜೀವಿ" ಹಾಗೂ "ಕಲಾವಿದ"ನ ಮುಖಗಳನ್ನು ನಾವು ಕಾಣು ವಂತಾಯಿತು. ಸಾಂಪ್ರದಾಯಿಕವಾಗಿ ಚರ್ಚೆಯಲ್ಲಿ ಭಾಗವಹಿಸಿ ಇಡೀ ಕಲಾವೃಂದದ ಪರಿಸರಕ್ಕೇ ಒಂದು ಹೊಸ ಜಾಡನ್ನು ತೋರಿಸಿದ ಅವರು ಲಲಿತ ಕಲಾ ಸಂಘದ ಮುಖ್ಯರಲ್ಲಿ ಪ್ರಮುಖರಾದರು.

ಪ್ರವೃತ್ತಿಯೇನೇ ಇರಲಿ, ವೃತ್ತಿಯ ಗೌರವ, ಘನತೆಗಳನ್ನು ಮುಂಚಿನಿಂದಲೂ ಪುರಸ್ಕರಿಸಿಕೊಂಡು ಬಂದ ಶ್ರೀನಿವಾಸರಾಯರು ಕಾಲ ಕಳೆದಂತೆ ತಮ್ಮ ತಾಂತ್ರಿಕ ಜ್ಞಾನವನ್ನೂ ಸಹ ದಿನೇ ದಿನೇ ಉತ್ತಮಗೊಳಿಸಿಕೊಂಡು ತಮ್ಮ ಕಾರ್ಯಕ್ಷಮತೆಯಲ್ಲಿ ಪ್ರಥಮ ಶ್ರೇಣಿಯಲ್ಲಿಯೇ ಮುಂದುವರೆದರು. ಸಾಹಿತ್ಯ-ಕಛೇರಿಯ ವೇಳೆಯ ಹೊರತಾದ ಕೃಷಿ. ತಾಂತ್ರಿಕತೆಯಲ್ಲಿ ತನ್ಮಯತೆ, ಆಳವಾದ ಪರೀಕ್ಷಣ ಬುದ್ಧಿ, ನೂತನ ವಿಷಯಗಳ ಹಸಿವು ಇವುಗಳಿಂದಾಗಿ ತಮ್ಮ ವಿಜ್ಞಾನೀ ಸಹೋದರರಿಂದಲೂ ಮತ್ತು ಉನ್ನತ ಅಧಿಕಾರಿಗಳಿಂದಲೂ "ಶಹಭಾಶ್"ಗಿರಿ ಪಡೆಯುವುದು ಅವರಿಗೆ ಹೊಸದೇನಲ್ಲ, ಅವರ ಪರಿಶ್ರಮದ ಫಲವಾಗಿ 70ರ ದಶಕದ ಮಧ್ಯಭಾಗದಲ್ಲಿ ಅವರು ಅಧಿಕಾರೀ ವರ್ಗಕ್ಕೆ ಬಡತಿ ಹೊಂದಿದರು.

ನಮ್ಮ ಸಂಸ್ಥೆ (ಸಿ. ಕ್ಯೂ. ಎ. ಎಲ್)ಯ ಬಹುಜನಗಳ ದೃಷ್ಟಿಯಲ್ಲಿ ಶ್ರೀನಿವಾಸರಾವ್ ಒಬ್ಬ ವಿಜ್ಞಾನದಲ್ಲಿ ಪದವೀಧರ. ಅವರು ಕೆಲಸ ಮಾಡುತ್ತಿದ್ದ ರೀತಿ, ಬೇರೆಯವರೊಂದಿಗೆ ಹಾಸುಹೊಕ್ಕಾಗಿ ಮಿಳಿತವಾಗುತ್ತಿದ್ದ ಅವರ ಸ್ವಭಾವ ದಿಂದಾಗಿ ಅವರ ವಿಷಯ-ಯಾರಿಗೂ ಗೊತ್ತಿರಲಿಲ್ಲ. ಆದರೆ ಅವರ ಆಪ್ತವರ್ಗದ ಕೆಲವರಿಗೆ ಮಾತ್ರ ಅವರು ವಿದ್ಯಾರ್ಥಿ ದೆಸೆಯಲ್ಲಿಯೇ ನಡೆಸಿದ ಹಿಂದಿಯ ಅಭ್ಯಾಸ ಹಾಗೂ ಕನ್ನಡ ಸಾಹಿತ್ಯಕ್ಕೆ ಅವರ ಕೊಡುಗೆ ಬಗ್ಗೆ ತಿಳಿದಿದ್ದಿತು.

ಶ್ರೀನಿವಾಸರಾಯರ ಸಾಹಿತ್ಯ ಸೃಷ್ಟಿಯ ಪ್ರಾರಂಭ ನವ್ಯತೆಯಿಂದಾದರೂ ಕಾಲಕ್ರಮೇಣ ಸುಮಾರು 70 ಹಾಗೂ 80ರ ದಶಕಗಳಲ್ಲಿ ಸಮೃದ್ಧಿಯಾಗಿ ಬೆಳೆಯಿತು. ಅಂತೆಯೇ ಅವರು ಅಧಿಕಾರಿಯಾದಂದಿನಿಂದ ತಂತ್ರಜ್ಞಾನದಲ್ಲೂ ಒಂದು ಆಸ್ಫೋಟನೆ ಆಯಿತು. ಸಾಮಾನ್ಯವಾಗಿ ವಿದ್ಯುತ್ ಯಾಂತ್ರಿಕ ವಿಭಾಗ ದಲ್ಲಿಯೇ ಕೆಲಸ ಮಾಡಿದ್ದ ಅವರು ಅಧಿಕಾರಿಯಾಗಿ ಬಡ್ತಿಯಾದಂದಿನಿಂದ ಸೇವಾ ಕಾರ್ಯ ವಿಭಾಗಕ್ಕೆ (ನಕ್ಷೆ ತಯಾರಿಕೆ, ಯಾಂತ್ರಿಕ ಸಲಕರಣೆ ವಿಭಾಗ, ಅಚ್ಚುಮೊಳೆ ಯಂತ್ರ ವಿಭಾಗ) ನೇಮಕವಾದರು. ಯಾರೂ ಬಯಸದ ಈ ತಿರುವು ಈ ಸಂಸ್ಥೆಯ ಮಟ್ಟಿಗೆ ಗೌಣವಾಗಿದ್ದ ಸಾಹಿತ್ಯ ಹಾಗೂ ಕಲಾ ಮಾಧ್ಯಮವನ್ನೂ ಚುರುಕು ಗೊಳಿಸುವುದರಲ್ಲಿ ಸಹಾಯಕವೇ ಆಯಿತೆಂದು ಹೇಳಬಹುದು. ವೃತ್ತಿಯ ಅವಿಭಾಜ್ಯ ಅಂಗವಾಗಿ ನಮ್ಮ ಸಂಸ್ಥೆಯವರು ಪ್ರಚುರಪಡಿಸುತ್ತಿದ್ದ ಕೆಲವು ಹೊತ್ತಿಗೆಗಳಿಗೆ ಅವರು ಮೇಲು ಹೊದಿಕೆ, ಮುಂತಾದುವುಗಳನ್ನು ಸಂಯೋಜಿಸುವಂತಾಯಿತು. ಅಂತೆಯೇ ಅವುಗಳಲ್ಲಿ ತಮ್ಮ ಮೂಲಭೂತ ಕಲ್ಪನೆಗಳನ್ನು ಹೊರ ತಂದು ಎಲ್ಲರ ಮೆಚ್ಚುಗೆ ಪಡೆಯುವಂತಾದರು.

ಅವರು ಅಧಿಕಾರಿಯಾಗಿದ್ದ ಲಲಿತ ಕಲಾ ಸಂಘದೊಂದಿಗೆ ಅವರ ಸಂಪರ್ಕವೂ ಬೆಳೆಯುತ್ತಾ ಹೋಯಿತು. ಆಕಾಶವಾಣಿಯವರು ಸಂಸ್ಥೆಯ ಸದಸ್ಯರಿಂದ ನಾಟಕ ಗಳನ್ನು ಅಪೇಕ್ಷೆ ಪಟ್ಟಾಗ ಸಂಸ್ಥೆಗೆ ಅವರು ನಾಟಕಕಾರರೂ ಆದರು. ಸಂಸ್ಥೆಯ ಒಳಗೇ ಆಗಲಿ ಅಥವಾ ಹೊರಗೇ ಆಗಲಿ ಅವರ ಸಾಹಿತ್ಯ ಕೃಷಿ ಅವಿರತವಾಗಿ ಬೆಳೆಯುತ್ತ ಬಂದಿದ್ದರೂ ಸಹ ಶ್ರೀಯುತರ ಮನಸ್ಸಿನ ಮೂಲೆಯಲ್ಲೆಲ್ಲೋ ಒಂದು ಕಡೆ ಅವರಿಗೆ ತಾವು ಕನ್ನಡ ಸಾಹಿತ್ಯವನ್ನು ಸಾಂಪ್ರದಾಯಿಕವಾಗಿ ಅಭ್ಯಸಿಸಿಲ್ಲ ವೆಂಬ ಒಂದು ಕೊರಗು ಇದ್ದಿರಬೇಕು. ಆದರೂ ಅವರ ದೃಢ ನಿಶ್ಚಯದ ಮುಂದೆ ಈ ಕೊರಗು ಬಹಳ ದಿನ ಉಳಿಯಲಿಲ್ಲ. ಪ್ರವೃತ್ತಿಯಾಗಿ ಬರವಣಿಗೆಯ ಹೆಚ್ಚುವಿಕೆ ಯಾಗುತ್ತಿದ್ದ ಕಾಲದಲ್ಲೆ ಅವರು ಕನ್ನಡ ಸಾಹಿತ್ಯವನ್ನು ಶಾಸ್ತ್ರೀಯವಾಗಿ ಅಭ್ಯಸಿಸ ಲಾರಂಭಿಸಿದರು. 1983 ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಕನ್ನಡ ಸಾಹಿತ್ಯದಲ್ಲಿ ಎಂ. ಎ. ಪಡೆದರು.

ಸುಮಾರು 10-15 ವರ್ಷಗಳಿಂದೀಚೆಗೆ ಎಲ್ಲ ಸಂಸ್ಥೆಗಳಲ್ಲೂ ನವಂಬರ್ ತಿಂಗಳಿನಲ್ಲಿ ಕರ್ನಾಟಕ ರಾಜ್ಯೋತ್ಸವವನ್ನು ಆಚರಿಸುವುದು ಒಂದು ಸಂಪ್ರದಾಯವೇ ಆಗಿದೆ. ರಾಜ್ಯೋತ್ಸವ ಸಮಾರಂಭದ ಸದಸ್ಯರಾಗಿ, ಲಲಿತ ಕಲಾ ಸಂಘದ ಉಪಾಧ್ಯಕ್ಷರಾಗಿ ಹಾಗೂ ಸಂಸ್ಥೆಯ ಮುಖ್ಯ ವಿಭಾಗದ ಒಬ್ಬ ಅಧಿಕಾರಿಯಾಗಿ ಇದರ ಸಂಪೂರ್ಣ ಹೊಣೆಯೂ ಇವರಿಗೇ ವಹಿಸಲ್ಪಟ್ಟಿತು. ಸಮಾರಂಭಕ್ಕೆ ಸಾಹಿತಿ ಮಿತ್ರರನ್ನು ಆಹ್ವಾನಿಸುವುದರಿಂದ ಹಿಡಿದು ಅದರ ಸಂಪೂರ್ಣ ನಿರ್ವಹಣೆಯನ್ನು ತಾವೇ ಸ್ವಂತವಾಗಿ ವಹಿಸಿಕೊಂಡ ರಾಯರ ಮುಖ್ಯ ಕೊಡುಗೆಯೆಂದರೆ ಸಮಾರಂಭದ ಮುಖ್ಯ ಅತಿಥಿಗಳಿಗೆ ನೀಡುತ್ತಿದ್ದ ಕಿರುಕಾಣಿಕೆಯನ್ನು ಅತ್ಯುತ್ತಮ ವಾಗಿ ವಿನ್ಯಾಸಿಸಿದ್ದುದು. ಕಲಾತ್ಮಕವಾಗಿ ಪ್ರಸ್ತುತಪಡಿಸಿದ ಈ ಕಿರುಕಾಣಿಕೆಯನ್ನು ಎಲ್ಲರ ಮನಸ್ಸನ್ನು ತನ್ಮಯಗೊಳಿಸುವಂತೆ ರೂಪಿಸುವುದರಲ್ಲಿ ಅವರು ಬಹಳಷ್ಟು ಯಶಸ್ವಿಯಾದರು.

ಶ್ರೀನಿವಾಸರಾವ್ ಮುಗ್ಧವೆನ್ನಿಸುವಷ್ಟು ಸರಳ ವ್ಯಕ್ತಿ. ಎಂತಹ ಅಪ್ರಿಯ ಸಂದರ್ಭದಲ್ಲೂ ಪ್ರಸನ್ನತೆಯನ್ನು ಕಳೆದುಕೊಳ್ಳದಿರುವ ಸುಸಂಸ್ಕೃತ ಸ್ವಭಾವ ಬೇರೊಬ್ಬರ ಉತ್ತಮ ಗುಣಗಳನ್ನು ಗುರುತಿಸಿ ಗೌರವಿಸುವ ಸಂಪ್ರದಾಯ, ಪರರ ವೇದನೆಯನ್ನು ಅರಿಯುವ ಸಹೃದಯತೆ ಅವರ ಬಗ್ಗೆ ಸಹೋದ್ಯೋಗಿಗಳಿಗೆ ಆಕರ್ಷಣೆಯಾಗುವಂತೆ ಮಾಡುತ್ತದೆ. ಸಾಹಿತ್ಯದಲ್ಲಿ ಪಡೆದ ಗೌರವಗಳ ಹಮ್ಮನ್ನು ವೃತ್ತಿಯಲ್ಲಿ ಬೆರೆಸದೆ, ವೃತ್ತಿಯಲ್ಲಿ ವರ್ಚಸ್ಸಿನಿಂದ ಮೆರೆದಾಗ ಅದನ್ನು ಸಾಹಿತ್ಯಕ್ಕೆ ಬೆರೆಸದೆ ಎರಡನ್ನೂ ಬೇರೆ ಬೇರೆ ಪ್ರಕಾರಗಳಾಗಿ ಗುರ್ತಿಸಿ ಎರಡಕ್ಕೂ ಸಮಾನ ಗಮನ ಗೌರವಗಳನ್ನಿತ್ತುದು ಅವರ ಹಿರಿಮೆಯೇ ಸರಿ. ಈಗತಾನೇ 60ಕ್ಕೆ ಕಾಲಿಟ್ಟಿರುವ ಅವರು ವೃತ್ತಿ ಸೇವೆಗೆ ಶ್ರೀಕಾರವನ್ನು ಹಾಡಿ ಎರಡು ವರುಷ ಗಳಾಯಿತು. ಆದರೆ ಅವರ ಸಾಹಿತ್ಯ ಸೇವೆ ದಿನ ದಿನಕ್ಕೂ ವೃದ್ಧಿಯಾಗುತ್ತಿರುವುದು ಸಂತೋಷದ ವಿಷಯವೇ ಸರಿ. ಕನ್ನಡ ಸಾಹಿತ್ಯಕ್ಕೆ ಅವರ ಸೇವೆ ಇನ್ನೂ ಅನೇಕ ದಶಕಗಳು ಲಭಿಸಲಿ ಎಂದು ಹಾರೈಸುವೆ.



# ಏಕಾಂಗ ಸಾಹಸಿ ಸಾಹಿತಿ

—ವಸಂತಕುಮಾರ್ ಪೆರ್ಲ

ಶ್ರೀ ಎಸ್. ವಿ. ಶ್ರೀನಿವಾಸರಾಯರು ಏಕಾಂಗ ಸಾಹಸಿಗಳು. ಬಾಹ್ಯವಾಗಿ ಸೌಮ್ಯ ಸ್ವಭಾವದವರಂತೆ ಕಂಡರೂ ಹಠವಾದಿಗಳು. ಹಿಡಿದ ಕೆಲಸವನ್ನು ಬಿಡದೆ ಸಾಧಿಸುವ ಛಲಗಾರರು. ಅವರನ್ನು ಕಳೆದ ಹತ್ತು ವರ್ಷಗಳಿಂದ ನಾನು ನಿಕಟವಾಗಿ ಬಲ್ಲೆ ಮತ್ತು ಅವರ ಸಾಹಿತ್ಯವನ್ನು ಸವಿಯುವ ಅವಕಾಶವೂ ಸಿಕ್ಕಿದೆ. ಅಂತರ್ಮುಖಿಗಳಂತೆ ಕಾಣುವ ಅವರಲ್ಲಿ ಮಾತು ಕಡಿಮೆ ಎಂದು ಮೊದಲ ನೋಟಕ್ಕೆ ಸುಲಭವಾಗಿ ನಿರ್ಧರಿಸಿಬಿಡಬಹುದು. ಆದರೆ ಒಮ್ಮೆ ಪರಿಚಿತರಾದರೆಂದರೆ ಅವರ ಅನುಭವದ ಆಳ ಮತ್ತು ತಿಳಿವಳಿಕೆಯ ವಿಸ್ತಾರ ಗೊತ್ತಾಗಿ ಆಶ್ಚರ್ಯವಾಗುತ್ತದೆ. ಹೀಗೆ ಅವರ ನಿಕಟ ವಲಯಕ್ಕೆ ಸೇರಿದವರಲ್ಲಿ ನಾನೂ ಒಬ್ಬ.

ಅವರು ವೃತ್ತಿಯಲ್ಲಿ ವಿಜ್ಞಾನಿಯಾದರೂ ಪ್ರವೃತ್ತಿಯಲ್ಲಿ ಸಾಹಿತಿಗಳು. 'ಋಷಿ ವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ ಜಸವು ಜನ ಜೀವನಕೆ' ಎಂಬ ಮಾತನ್ನು ಅಕ್ಷರಶಃ ಅನುಷ್ಠಾನಕ್ಕೆ ತರುತ್ತಿರುವವರು. ಕತೆ-ಕಾದಂಬರಿಗಳನ್ನು ಬರೆಯುವುದು ಅವರ ಪ್ರಿಯವಾದ ಹವ್ಯಾಸ. ಮಕ್ಕಳ ಕತೆಗಳನ್ನು ರಂಜನೀಯವಾಗಿ ಬರೆಯುವುದರಲ್ಲಿ ಅವರು ಸಿದ್ಧಹಸ್ತರು. ಮಕ್ಕಳ ಮನಸ್ಸನ್ನು ಅರ್ಥ ಮಾಡಿಕೊಂಡು, ಅವರ ಆಸಕ್ತಿಯನ್ನು ಮತ್ತು ಅಭಿರುಚಿಯನ್ನು ಬೆಳೆಸಿಕೊಂಡು ಹೋಗುವಂತೆ ಅವರು ನಿರೂಪಿಸುತ್ತಾರೆ.

ಅವರದು ಸುಲಲಿತವಾದ ಸುಂದರ ಶೈಲಿ, ಚಿಕ್ಕ ಚಿಕ್ಕ ವಾಕ್ಯಗಳು ಅವರ ಬರವಣಿಗೆಯ ವಿಶೇಷತೆ. ಸಿದ್ಧಕಟ್ಟೆಯ ಟಿ. ಚಂದ್ರರಾಜ ಸೆಟ್ಟಿಯವರ ಬಗ್ಗೆ ಶ್ರೀನಿವಾಸರಾಯರು ಹೀಗೆ ಆರಂಭಿಸುತ್ತಾರೆ. 'ಬಾಗಿದ ತೆಳು ಶರೀರ, ಬತ್ತಿದ ಕೆನ್ನೆ, ಕನ್ನಡಕದ ಹಿಂದೆ ಗುಳಿಯಲ್ಲಿ ಮಿಂಚುತ್ತಿರುವ ಕಣ್ಣುಗಳು, ಹೆಗಲಲ್ಲಿ ಪುಸ್ತಕದ ಚೀಲ, ಜುಬ್ಬಾ, ಪಂಚೆ ಉಡುಗೆ !

'ಈ ವಿವರಣೆಯ ವ್ಯಕ್ತಿಯೇ ಟಿ. ಚಂದ್ರರಾಜ ಸೆಟ್ಟಿ. ಈ ವ್ಯಕ್ತಿಯೇ ಕನ್ನಡ ಬರಹಗಾರರ ಬಳಗದ ಸಂಸ್ಥಾಪಕ ಹಾಗೂ ಪ್ರವರ್ತಕ ಸಂಚಾಲಕ. ಇಷ್ಟು ಹೇಳಿದರೆ ಚಂದ್ರರಾಜ ಸೆಟ್ಟಿಯವರ ಪರಿಚಯ ಆದಂತೆ.'

'ಗುಳಿಯಲ್ಲಿ ಮಿಂಚುತ್ತಿರುವ ಕಣ್ಣಗಳು', ಹೌದು ! ಸಿದ್ಧಕಟ್ಟೆಯ ಟಿ. ಚಂದ್ರರಾಜ ಸೆಟ್ಟರನ್ನು ನಾನು ಬಲ್ಲೆ. (1908-1980). ನನ್ನ ಪ್ರಥಮ ಕಥಾ ಸಂಕಲನ (ಪ್ರಥಮ ಕೃತಿ ಕೂಡ) 'ಹತ್ತರೊಡನೊಂದು' ಅನ್ನು 1979 ರಲ್ಲಿ ಬಂಟ್ವಾಳದಲ್ಲಿ ಸಮಾರಂಭವೊಂದರಲ್ಲಿ ಬಿಡುಗಡೆ ಮಾಡಿದವರು ಟಿ. ಚಂದ್ರರಾಜ ಸೆಟ್ಟಿಯವರು. ಮೂರೇ ಪದಗಳಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾಯರು ವ್ಯಕ್ತಿಯೊಬ್ಬನನ್ನು ಪರಿಚಯಿಸುವ ವಿಧಾನ ಪರಿಣಾಮಕಾರಿಯಾದುದು ಮಕ್ಕಳಿಗೂ ಹಿಡಿಸುವಂಥದ್ದು.

1985 ರಲ್ಲಿ 'ಪ್ರಜಾಮತ' ವಾರಪತ್ರಿಕೆಯಲ್ಲಿ ಅವರು ಮಕ್ಕಳ ಸಾಹಿತ್ಯವನ್ನು ಬರೆದ ಸಾಹಿತಿಗಳನ್ನು ಕಿರಿಯರಿಗೆ ಪರಿಚಯ ಮಾಡಿಕೊಡುವ "ಮಕ್ಕಳೇ, ಇವರನ್ನು ನೀವು ಬಲ್ಲಿರಾ ?" ಎಂಬ ಲೇಖನ ಮಾಲೆಯೊಂದನ್ನು ಆರಂಭಿಸಿದರು. ಅದು 1985 ರ ಡಿಸೆಂಬರ್ 15 ರಿಂದ 1986 ರ ನವೆಂಬರ್ 16 ರ ಸಂಚಿಕೆಯ ವರೆಗೆ ಮುಂದುವರೆಯಿತು. ಆಗ ನಾನು 'ಪ್ರಜಾಪ್ರಭುತ್ವ' ವಾರಪತ್ರಿಕೆಯಲ್ಲಿ ವರದಿಗಾರ ಮತ್ತು ಉಪಸಂಪಾದಕನಾಗಿ ಕೆಲಸ ಮಾಡುತ್ತಿದ್ದೆ. ಹಾಗಾಗಿ ಬಹುತೇಕ ಸಾಹಿತಿ, ಬರಹಗಾರರು, ಕಲಾವಿದರು, ರಾಜಕೀಯಸ್ಥರು, ಅಧಿಕಾರಸ್ಥರ ನಿಕಟ ಸಂಪರ್ಕ ಮತ್ತು ಪರಿಚಯ ಏರ್ಪಟ್ಟಿತು. ಆ ವೇಳೆಗಾಗಲೇ ನಾನು ಶ್ರೀ ಎಸ್. ವಿ. ಶ್ರೀನಿವಾಸರಾಯರ ಸ್ನೇಹವಲಯದೊಳಗೆ ಬಂದುಬಿಟ್ಟಿದ್ದೆ. ಬೆಂಗಳೂರಿನ ಶ್ರೀನಗರದಲ್ಲಿ ನಡೆದ ಸಾಹಿತ್ಯ ಸಮ್ಮೇಳನವೊಂದರಲ್ಲಿ ಭಾಗವಹಿಸುವ ಅವಕಾಶವು ನನಗೆ ಅವರಿಂದಾಗಿಯೇ ಲಭಿಸಿತು.

ಅವರು ಆರಂಭಿಸಿದ್ದ ಲೇಖನ ಮಾಲೆಗೆ ದಕ್ಷಿಣ ಕನ್ನಡ ಜಿಲ್ಲೆಗೆ ಸಂಬಂಧಿಸಿದಂತೆ ಹಲವಾರು ಮಾಹಿತಿಗಳನ್ನು ಅವರು ನನ್ನಿಂದ ಅಪೇಕ್ಷಿಸಿದರು. ಅವುಗಳನ್ನು ಸಂತೋಷದಿಂದಲೇ ನಾನು ಅವರಿಗೆ ಒದಗಿಸಿದೆ. ಐರೋಡಿ ಶಿವರಾಮಯ್ಯ, ಜಿ. ಎನ್. ಲಕ್ಷ್ಮಣ ಪೈ, ಬಿ. ಶಂಕರಭಟ್ಟ, ಪಳಕಳ ಸೀತಾರಾಮ ಭಟ್ಟ, ಟಿ. ಚಂದ್ರರಾಜ ಸೆಟ್ಟಿ, ಸಿದ್ದಕಟ್ಟೆ–ಹೀಗೆ ಹಲವಾರು ಮಹನೀಯರ ಬಗೆಗೆ ಅಷ್ಟಿಷ್ಟು ಮಾಹಿತಿಗಳನ್ನು ಅವರಿಗೆ ಒದಗಿಸಿದೆ.

ಆ ಬಳಿಕ ಅದು ಪುಸ್ತಕ ರೂಪದಲ್ಲಿ ಪ್ರಕಟವಾಯಿತು. ಅದಕ್ಕಾಗಿ ಶ್ರೀನಿವಾಸರಾಯರು ಕ್ಷೇತ್ರ ಕಾರ್ಯ ಮಾಡಬೇಕಾಗಿ ಬಂತು. ನಿಸ್ಸಂದೇಹವಾಗಿ ಆ ಕ್ಷೇತ್ರದಲ್ಲಿ ಅದೊಂದು ಅಪೂರ್ವ ಪುಸ್ತಕ. ಮುನ್ನುಡಿ ಬರೆದ ಹಿರಿಯ ಸಾಹಿತಿ ಡಾ॥ ವಿ. ಕೃ. ಗೋಕಾಕರು ಹೀಗೆ ಹೇಳಿದ್ದಾರೆ–"ಶ್ರೀಮಾನ್ ಎಸ್. ವಿ. ಶ್ರೀನಿವಾಸರಾಯರು ಇನ್ನೂ ಮೀಸಲಾಗಿ ಉಳಿದುಕೊಂಡಿದ್ದ 'ಮಕ್ಕಳ ಸಾಹಿತಿ' ಗಳ ವಿಷಯ

ವನ್ನು ಎತ್ತಿಕೊಂಡು ಕನ್ನಡದ ಮಕ್ಕಳ ಸಾಹಿತಿಗಳನ್ನು ಕುರಿತು ತುಂಬ ಪರಿಶ್ರಮ ಪಟ್ಟು ಮಾಹಿತಿ ಸಂಗ್ರಹಿಸಿ ಸಂಕ್ಷೇಪವಾಗಿ ಒಂದು ಪುಸ್ತಕವನ್ನು ಬರೆದಿದ್ದಾರೆ. ವಿಷಯವೂ ಹೊಸತು." ವಿಷಯ ಹೊಸದಾದ ಮಾತ್ರಕ್ಕೆ ದೋಷರಹಿತವಾಗಿರ ಬೇಕೆಂದೇನೂ ಇಲ್ಲ, ಅದು ರಾಯರಿಗೆ ಗೊತ್ತಿದೆ. ವರ್ಷಪೂರ್ತಿ ಕಷ್ಟಪಟ್ಟು ವಿಸಯ ಸಂಗ್ರಹಿಸಿ ಲೇಖನಗಳನ್ನು ಬರೆದಿದ್ದರೂ ಬಹಳಷ್ಟು ಕೆಲಸ ಮಾಡಿದ್ದರೂ ವಿಷಯ ದಿಂದಲೇ ಹೀಗೆ ಹೇಳುತ್ತಾರೆ- 'ಈ ಲೇಖನ ಮಾಲೆ ಸಂಪೂರ್ಣವಾಗಿ ಶಿಶುಸಾಹಿತ್ಯ ರಚನಕಾರರನ್ನೆಲ್ಲ ಒಳಗೊಂಡಿದೆ ಎಂದು ಹೇಳುವ ಎದೆಗಾರಿಕೆ ನನಗಿಲ್ಲ. ಹಲವು ಪ್ರಮುಖರು ಬಿಟ್ಟು ಹೋಗಿರಬಹುದು, ಬಿಟ್ಟು ಹೋಗಿದ್ದಾರೆ. ಲೇಖನದಲ್ಲಿ ಕೂಡ ಕೆಲವು ಪ್ರಮುಖ ವಿಷಯಗಳು, ಪ್ರಸಿದ್ಧ ಕೃತಿಗಳ ಉಲ್ಲೇಖ ನಾನು ಮಾಡದೆ ಬಿಟ್ಟಿರಬಹುದು. ಈ ಅಸಫಲತೆಗೆ ನಾನೇ ಸಂಪೂರ್ಣ ಹೊಣೆ.

ಶ್ರೀನಿವಾಸರಾಯರು ನಿತ್ಯ ಬದುಕಿನಲ್ಲಿ ತುಂಬ ಶಿಸ್ತು ಉಳ್ಳವರು. ಅವರ ಮನೆಯ ಒಪ್ಪ ಓರಣವೇ ಅದಕ್ಕೆ ಸಾಕ್ಷಿ. ಅವರ ಆತಿಥ್ಯವನ್ನು ಹಲವು ಬಾರಿ ನಾನು ಉಂಡಿದ್ದೇನೆ. ಅವರು ಮತ್ತು ಅವರ ಶ್ರೀಮತಿ ಅನುಸೂಯರಾವ್ ಅತಿಥಿ ಅಭ್ಯಾಗತರನ್ನು ಸತ್ಕರಿಸುವ ರೀತಿ ಅನುಕರಣೀಯ.

ಕಾವ್ಯಕ್ಷೇತ್ರದಲ್ಲಿ ಶ್ರೀನಿವಾಸರಾಯರು ದುಡಿಯದೇ ಇದ್ದರೂ ಕಾವ್ಯದ ಬಗ್ಗೆ ಪ್ರೀತಿ-ಒಲವು ಇಟ್ಟುಕೊಂಡಿದ್ದಾರೆ. ಒಳ್ಳೆಯ ಕಾವ್ಯವನ್ನು ಗುರುತಿಸಿ ಅವರು ಆಸ್ವಾದಿಸಬಲ್ಲರು ಮತ್ತು ವಿಮರ್ಶಿಸಬಲ್ಲರು. 1984 ರಲ್ಲಿ ನನ್ನ ಪ್ರಥಮ ಕವನ ಸಂಕಲನ 'ಮಾತಿನಾಚೆಯ ಮೌನ' ಬೆಂಗಳೂರಿನ ನ್ಯಾಶನಲ್ ಕಾಲೇಜು ಸಭಾಂಗಣ ದಲ್ಲಿ ಬಿಡುಗಡೆ ಆದಾಗ ನನ್ನ ವಿನಂತಿಯ ಮೇರೆಗೆ ರಾಯರು ಬಂದಿದ್ದರು. ಅನಂತರ ಪುಸ್ತಕವನ್ನು ಕೊಂಡು ಓದಿ ಕವನಗಳನ್ನು ವಿಮರ್ಶಿಸಿದ್ದರು.

ಶ್ರೀನಿವಾಸರಾಯರು ಒಳ್ಳೆಯ ಮಿತ್ರರು. ವಿಷಯವನ್ನುನಾಜೂಕಾಗಿ ಇತರರಿಗೆ ಮನವರಿಕೆಯಾಗುವಂತೆ ಮಂಡಿಸುವ ಸಾಮರ್ಥ್ಯ ಉಳ್ಳವರು. ಅವರು ಸಾಹಿತ್ಯ ಪರಿಷತ್ತಿನ ಗೌರವ ಕೋಶಾಧ್ಯಕ್ಷರಾಗಿ ಕೆಲಸ ಮಾಡತೊಡಗಿದಾಗ ತುಂಬ ಸಂತೋಷ ಪಟ್ಟಿದ್ದೇನೆ. ಅವರ ಸೇವಾ ಮನೋಭಾವಕ್ಕೆ ಬೇರೆ ಸಾಕ್ಷಿ ಬೇಕೇ ?



# ಸಹಪಾಠಿ

—ಡಾ|| ಎಚ್. ಎಸ್. ಗೋಪಾಲರಾವ್

೧೯೮೩ರ ಜನವರಿ ತಿಂಗಳು ಎಂದು ನೆನಪು. ಮೂವತ್ತೈದು ವರ್ಷ ದಾಟಿದ್ದ ನಾನು ಮೈಸೂರು ವಿಶ್ವವಿದ್ಯಾನಿಲಯದ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ಮುಕ್ತ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಯಾಗಿ ಕನ್ನಡ ಎಂ.ಎ., ಮೊದಲ ವರ್ಷದ ಸಂಪರ್ಕ ತರಬೇತಿ ಶಿಬಿರದಲ್ಲಿ ಹಾಜರಾಗಿದ್ದೆ. ಸುಮಾರು ೩೦೦ಕ್ಕೂ ಹೆಚ್ಚು ೨೫ ರಿಂದ ೬೫ ವರ್ಷಗಳ ವಯೋಮಾನದ ಎಲ್ಲ ವರ್ಗಗಳ ವಿದ್ಯಾರ್ಥಿಗಳ ನಡುವೆ ನನ್ನ ಪರಿಚಿತ ಮುಖಗಳನ್ನು ಹುಡುಕುತ್ತಿದ್ದೆ, ಸುಮಾರು ೧೭ ವರ್ಷಗಳ ನಂತರ ಕಾಲೇಜು ವಿದ್ಯಾಭ್ಯಾಸ. ಬಿಡುವಿಲ್ಲದ ಯಾಂತ್ರಿಕ ವೃತ್ತಿ ಜೀವನದಿಂದ ದಿಢೀರನೆ ೧೫ ದಿನಗಳ ಕಾಲ ಬಿಡುಗಡೆ ; ಮರೆತು ಹೋದಂತೆಯೇ ಆಗಿದ್ದ ಕ್ರಮಬದ್ಧ ವಿದ್ಯಾರ್ಥಿ ಜೀವನಕ್ಕೆ ಹೊಂದಿಕೆ ; ಏನೋ ಮುಜುಗರ ; ಆತಂಕ. ಅದನ್ನು ಅದುಮಿಡಲು, ಹೊಸ ವಾತಾವರಣಕ್ಕೆ ಹೊಂದಿಕೊಳ್ಳುವ ಪ್ರಯತ್ನಕ್ಕೆ ಪರಿಚಿತರ ಪರಸ್ಪರ ಆಲಂಬನ ಸಹಕಾರಿ ಎಂದು ಹುಡುಕಾಟ. ಅಂತಹ ಸಮಯದಲ್ಲಿ ನನ್ನ ಸ್ಥಿತಿಯಲ್ಲೇ ಇದ್ದು ಎದುರಾದವರು ಗೆಳೆಯ ಶ್ರೀ ಎಸ್. ರಾಮಸ್ವಾಮಿ ಅವರು. 'ಕಾದಂಬರಿ' ಮಾಸಪತ್ರಿಕೆಯ ಸಂಪಾದಕರಾಗಿ ಪರಿಚಿತ ರಾಗಿದ್ದ ಶ್ರೀ ಎಸ್. ರಾಮಸ್ವಾಮಿ ಅವರು ಖ್ಯಾತ ಚಿತ್ರ ನಿರ್ದೇಶಕ ಶ್ರೀ ಎಂ. ಎಸ್. ಸತ್ಯು ಅವರ ಎಲ್ಲಾ ಕನ್ನಡ ಚಿತ್ರಗಳಿಗೆ ಸಾಹಿತ್ಯ ಒದಗಿಸಿರುವವರು. ಅಲ್ಲದೆ ಅವರ ಸಹಾಯಕರಾಗಿ ಇರುವವರು. ಒಬ್ಬರನ್ನೊಬ್ಬರು ನೋಡಿದ ಮೇಲೆ ಸ್ವಲ್ಪ ಮಟ್ಟಿಗೆ ಮುಜುಗರ ಕಡಿಮೆಯಾಯಿತು. ಅಂತಹ ಸಮಯದಲ್ಲೇ ನಮ್ಮ ಜೊತೆಗೆ ಸೇರಿದವರು ಶ್ರೀ ಎಸ್. ವಿ. ಶ್ರೀನಿವಾಸರಾಯರು. ಆ ವೇಳೆಗಾಗಲೇ ಅವರ ಬಗ್ಗೆ ಕೇಳಿದ್ದೆ. ಅವರ ಕೆಲವು ಕಥೆಗಳು ಮತ್ತು ಕಾದಂಬರಿಗಳನ್ನು ಓದಿದ್ದೆ. ಮುಖತಃ ಪರಿಚಯ ಮಾತ್ರ ಆಗಿರಲಿಲ್ಲ. ಅವರೂ ನನ್ನಂತೆಯೇ ವೃತ್ತಿ ಮತ್ತು ಪ್ರವೃತ್ತಿಗಳಲ್ಲಿ ಭಿನ್ನರು ಎಂದು ತಿಳಿದಿದ್ದೆ, ೧೯೭೨-೭೩ ರವರೆಗೆ ನಾನೂ ಕಥೆ, ಕಾದಂಬರಿ, ನಾಟಕ ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದವನು. ಹೀಗಾಗಿ ಸಮಾನ ವ್ಯಸನಿಗಳಾದ ನಾನು, ಎಸ್. ರಾಮಸ್ವಾಮಿ ಮತ್ತು ಎಸ್. ವಿ. ಶ್ರೀನಿವಾಸ ರಾಯರು ಸಂಪರ್ಕ ತರಬೇತಿ ಶಿಬಿರದಲ್ಲಿ ಪರಸ್ಪರ ಹೆಚ್ಚು ಪರಿಚಿತರಾಗಿ ಸ್ನೇಹಿತ ರಾದೆವು.

ಆ ವೇಳೆಗಾಗಲೇ ಶ್ರೀನಿವಾಸರಾಯರು ಕಾದಂಬರಿಕಾರರಾಗಿ ಒಳ್ಳೆಯ ಹೆಸರು ಮಾಡಿದ್ದರು. ಹೀಗಾಗಿ ಹಲವಾರು ಹಿರಿಯ ಸಾಹಿತಿಗಳ, ವಿಮರ್ಶಕರ ಪರಿಚಯವೂ ಅವರಿಗಿತ್ತು. ಆದ್ದರಿಂದ ತರಗತಿಗಳ ನಂತರ ಅವರು ಅಂತಹ ಪರಿಚಿತರ ಭೇಟಿಗಾಗಿ ಧಾವಿಸುತ್ತಿದ್ದರು. ಅಂತಹ ಧಾವಂತದಲ್ಲೂ ಪರಿಚಿತರ ಭೇಟಿಗಾಗಿ, ಮಾತಿಗಾಗಿ ಬಿಡುವು ಮಾಡಿಕೊಳ್ಳುತ್ತಿದ್ದ ಅವರ ಬಗೆಗೆ ನಾನು ಆಶ್ಚರ್ಯ ಪಡುತ್ತಿದ್ದೆ. ಆದರೆ ಎಂದೂ ತಾವು ದೊಡ್ಡ ದೊಡ್ಡ ವಿದ್ವಾಂಸರು ಮತ್ತು ವಿಮರ್ಶಕರನ್ನು ಕಂಡದ್ದನ್ನು ದೊಡ್ಡ ವಿಷಯವೆಂಬಂತೆ ಹೇಳಿಕೊಳ್ಳುತ್ತಲೇ ಇರಲಿಲ್ಲ.

ಪ್ರಾಮಾಣಿಕ ವಿದ್ಯಾರ್ಥಿಯಂತೆ, ಯಾವ ತರಗತಿಗಳಿಗೂ ತಪ್ಪಿಸಿಕೊಳ್ಳದೆ ಹಾಜರಾಗುತ್ತಿದ್ದ ಶ್ರೀನಿವಾಸರಾಯರು ನಂತರದ ದಿನಗಳಲ್ಲಿ ಹತ್ತಿರದವರಾದರು. ತರಗತಿಗಳ ನಂತರ ನಮ್ಮ ಪರಿಚಯದ ಉಪನ್ಯಾಸಕರನ್ನು ಕಂಡು ಮಾತನಾಡಿಸಲು ನಾವು ಉತ್ಸುಕರಾಗಿದ್ದರೆ, ಶ್ರೀನಿವಾಸರಾಯರು ಅಲ್ಲೂ ನಿರ್ಲಿಪ್ತತೆ ಸಾಧಿಸಿದ್ದರು. ಅವರಲ್ಲಿ ನಾನು ಗುರುತಿಸಿರುವ ಬಹು ಮುಖ್ಯವಾದ ಎರಡು ಗುಣಗಳೆಂದರೆ ನಿರ್ಲಿಪ್ತತೆ ಮತ್ತು ಮಹತ್ವಾಕಾಂಕ್ಷೆ. ಇವೆರಡೂ ಪರಸ್ಪರ ಹೊಂದದ ಗುಣಗಳಾದರೂ, ಶ್ರೀನಿವಾಸರಾಯರಲ್ಲಿ ಒಗ್ಗೂಡಿವೆ. ಏನನ್ನಾದರೂ ಒಳ್ಳೆಯದನ್ನು ಸಾಧಿಸಬೇಕೆಂಬ ಅವರ ಮಹತ್ವಾಕಾಂಕ್ಷೆಯ ಕಾರಣದಿಂದಲೇ "ಮಕ್ಕಳೇ, ಇವರನ್ನು ನೀವು ಬಲ್ಲಿರಾ ?" ಮತ್ತು "ಕನ್ನಡ ಸಾಹಿತಿ ದರ್ಶನ" ಕೃತಿಗಳು ಸಿದ್ಧವಾಗಿ ಪ್ರಕಟಗೊಂಡಿವೆ. ಇದಕ್ಕಾಗಿ ಶ್ರೀನಿವಾಸರಾಯರು ಪಟ್ಟಿರುವ ಶ್ರಮ ಸಾಮಾನ್ಯವಾದುದಲ್ಲ. ವಿಷಯ ಸಂಗ್ರಹಣೆಯ ಶ್ರಮ ಸುಲಭವಲ್ಲವೆಂಬುದು ಬಲ್ಲವರಿಗೆಲ್ಲಾ ತಿಳಿದದ್ದೇ ; ಅಂತಹ ಸುಲಭವಲ್ಲದ ಕೆಲಸಗಳನ್ನೂ ಮಾಡಲು ವೃತ್ತಿನಿರತ ಸಾಹಿತಿಯಲ್ಲದವರಿಗೆ ಮಹತ್ವಾಕಾಂಕ್ಷೆಯೊಂದೇ ಪ್ರೇರಕ ಮತ್ತು ಸಾಧಕ. ಅಷ್ಟೆಲ್ಲಾ ಸಾಧನೆಗಳ ನಂತರವೂ ಶ್ರೀನಿವಾಸರಾಯರು ಈವರೆಗೆ ಸಾಧಿಸಿರುವುದೇನೂ ಅಲ್ಲವೆಂಬಂತೆ ಮುಂದಿನ ಕೆಲಸಕ್ಕೆ ಸಿದ್ಧರಾಗುತ್ತಾರೆ. ತಮ್ಮ ಸಾಧನೆಗಳ ಬಗೆಗೆ ಅವರಿಗೆ ಅಹಂಕಾರವಿಲ್ಲ ; ಗರ್ವವಿಲ್ಲ. ಓದುಗರಿಗೆ ಉಪಯುಕ್ತವಾದದ್ದನ್ನು, ಅವರು ಓದಿ ಮೆಚ್ಚುವಂತಹುದನ್ನು ಕೊಟ್ಟ ಧನ್ಯಭಾವವನ್ನಷ್ಟೇ ನಾವು ಅವರಲ್ಲಿ ಕಾಣುವಂತಹುದು. ಓದುಗರು ಮೆಚ್ಚುವಂತಹುದನ್ನು ಎಂಬ ಮಾತನ್ನು ಎಚ್ಚರಿಕೆಯಿಂದ ಬಳಸಬೇಕಾದ ಪರಿಸ್ಥಿತಿ ಇದೆ. ನಮ್ಮ ಬಹುತೇಕ ವಿಮರ್ಶಕರು ಓದುಗ ಮತ್ತು ಮೆಚ್ಚುವಿಕೆಯನ್ನು ಜನಪ್ರಿಯ ಎಂದು ತಾವು ನಿರ್ಧರಿಸುವ ಸಾಹಿತ್ಯ (ವಿಶೇಷವಾಗಿ ಕಾದಂಬರಿಗಳು) ಮತ್ತು ಅದರ ಓದುಗರಿಗೆ ಮಾತ್ರ ಅನ್ವಯಿಸುತ್ತಾರೆ. ಆ ನಿಟ್ಟಿನಲ್ಲಿ ನಾನು ಆ ಪದಗಳ ಬಳಕೆ ಮಾಡಿಲ್ಲ. ಶ್ರೀನಿವಾಸರಾಯರು ಒಳ್ಳೆಯ ಕಾದಂಬರಿಕಾರರಷ್ಟೇ ಹೊರತು, ಈಗಿನ ವಿಮರ್ಶಕರು (ಮೌಲ್ಯಮಾಪನ

ಮಾಡುವ) ಛೇಡಿಸುವ ಜನಪ್ರಿಯ ಕಾದಂಬರಿಕಾರರಲ್ಲವೆಂಬುದು ನನ್ನ ಅಭಿಪ್ರಾಯ. ಹಾಗೇನಾದರೂ ಆಗಿದ್ದರೆ ಅವರು ವರ್ಷಕ್ಕೆ ನಾಲ್ಕಾರು ಕಾದಂಬರಿಗಳನ್ನಾದರೂ ಬರೆಯಬೇಕಾಗಿತ್ತು. ಅವರಿಗೆ ಪ್ರಕಾಶಕ-ವ್ಯಾಪಾರಿಗಳು ಬಿಡುವು ಕೊಡುತ್ತಿರಲಿಲ್ಲ. ಆದರೆ ಹಾಗಾಗಿಲ್ಲ. ಹಾಗಾಗಿದ್ದಿದ್ದರೆ 'ಮಕ್ಕಳೇ, ಇವರನ್ನು ನೀವು ಬಲ್ಲಿರಾ ?' ಮತ್ತು 'ಕನ್ನಡ ಸಾಹಿತಿ ದರ್ಶನ'ದಂತಹ ಕೃತಿಗಳು ಸಿದ್ಧವಾಗುತ್ತಿರಲಿಲ್ಲ.

ಕಥೆ, ಕಾದಂಬರಿ, ನಾಟಕ/ರೂಪಕ, ಪ್ರವಾಸ ಗ್ರಂಥ/ಜೀವನ ಚರಿತ್ರೆ–ಹೀಗೆ ಗದ್ಯ ಸಾಹಿತ್ಯದ ಬಹುತೇಕ ಪ್ರಕಾರಗಳಲ್ಲಿ ಶ್ರೀನಿವಾಸರಾಯರ ಕೃಷಿ ನಡೆದಿದೆ. ಅದು ಮಕ್ಕಳಿಗೆ ಮತ್ತು ದೊಡ್ಡವರಿಗೆ ಇಬ್ಬರಿಗೂ ಸಲ್ಲುವಂತಹ ಕೃಷಿಯೂ ಆಗಿರುವುದು ವಿಶೇಷ.

ಶ್ರೀನಿವಾಸರಾಯರ ಕಥೆ, ಕಾದಂಬರಿಗಳು ಸಾಮಾನ್ಯವಾಗಿ ಭಾರತೀಯ ಮಧ್ಯಮ ವರ್ಗದ ಜೀವನವನ್ನು ಯಥಾವತ್ತಾಗಿ ಚಿತ್ರಿಸಿವೆ. ಯಾವುದೇ ಉತ್ಪ್ರೇಕ್ಷೆ, ಭ್ರಮೆಗಳಿಲ್ಲದ ಬದುಕನ್ನು ಅವರ ಕಥೆ, ಕಾದಂಬರಿಗಳಲ್ಲಿ ಕಾಣಬಹುದು. 'ಗೊಂಚಲು' ಕಥಾಸಂಕಲನದಲ್ಲಿ ಕೆಳ ಮಧ್ಯಮ ವರ್ಗದ ಕುಟುಂಬವೊಂದು ತಾವು ಕಷ್ಟಪಟ್ಟು ಪಡೆದ ನಿವೇಶನವೊಂದನ್ನು ಉಳಿಸಿಕೊಳ್ಳಲು ಮತ್ತು ಅಲ್ಲಿ ಮನೆ ಕಟ್ಟಲು ಪಡುವ ಶ್ರಮವನ್ನು ತುಂಬಾ ಸಹಜವಾಗಿ ಚಿತ್ರಿಸಿರುವ ಶ್ರೀನಿವಾಸ ರಾಯರು ಬದುಕು ಮತ್ತು ಸಾಹಿತ್ಯಗಳಿಗಿರುವ ಅನ್ಯೋನ್ಯ ಸಂಬಂಧವನ್ನು ಚೆನ್ನಾಗಿ ಗುರುತಿಸಿದ್ದಾರೆ.

ದುರ್ವಿನೀತನಿಂದ ಈಚಿನ ಸಾಹಿತಿಗಳವರೆಗೆ ಅನೇಕ ವ್ಯಕ್ತಿಗಳ ಪರಿಚಯ ಮಾಡಿ ಕೊಟ್ಟಿರುವ ಶ್ರೀನಿವಾಸರಾಯರು ಈಚೆಗೆ 'ಪ್ರೌಢಪ್ರತಾಪ ವೀರರಾಜೇಂದ್ರ' ಕೃತಿಯ ಮೂಲಕ ಐತಿಹಾಸಿಕ ಕಾದಂಬರಿಕಾರರ ಸಾಲಿಗೂ ಸೇರಿದ್ದಾರೆ. ಆ ಕೃತಿಯ ರಚನೆಯಲ್ಲೂ ಶ್ರೀನಿವಾಸರಾಯರ ವಿಶಿಷ್ಟತೆ ಎದ್ದು ಕಾಣುತ್ತದೆ. ಈವರೆಗೆ ಕೊಡಗಿನ ಇತಿಹಾಸದ ಬಗೆಗೆ ಪ್ರಕಟವಾಗಿರುವ ಬಹುತೇಕ ಆಕರ ಗ್ರಂಥಗಳನ್ನು ಓದಿ, ವಿಷಯ ಸಂಗ್ರಹಿಸಿ ಕಾದಂಬರಿಯ ರಚನೆ ಮಾಡಿದ್ದಾರೆ. ಕೊಡವ ಭಾಷೆ ಯನ್ನು ಸಾಧ್ಯವಿರುವೆಡೆಯಲ್ಲಿ ಬಳಕೆ ಮಾಡಿ ವಸ್ತು ಮತ್ತು ಕಥೆಗೆ ತಕ್ಕ ವಾತಾವರಣ ವನ್ನು ನಿರ್ಮಿಸಿದ್ದಾರೆ. ಹೀಗಾಗಿ ನಾವು ಕಾದಂಬರಿಯನ್ನು ಓದುವಾಗ ಕೊಡಗಿನಲ್ಲಿ ವೀರರಾಜೇಂದ್ರನ ಜೊತೆ ಜೊತೆಗೇ ಇದ್ದಂತೆ ಅನುಭವವಾಗುತ್ತದೆ. ಅದು ಈ ಕಾದಂಬರಿಯ ಧನಾತ್ಮಕ ಅಂಶಗಳಲ್ಲೊಂದು. ಹಿತವಾದ ಮತ್ತು ಮಿತವಾದ ಭಾಷೆ ; ನೇರ ನಿರೂಪಣೆ, ಸಮರ್ಥ ಪಾತ್ರ ಚಿತ್ರಣ ; ಭ್ರಮೆ, ಉತ್ಪ್ರೇಕ್ಷೆಗಳಿಂದ ದೂರವಾದ ಸಹಜ ಬದುಕಿನ ಯಥಾವತ್ ಚಿತ್ರಣ, ಇತಿಹಾಸದ ಸ್ಪಷ್ಟ ಕಲ್ಪನೆ—

ಇವೆಲ್ಲವುಗಳ ಮೈಗೂಡುವಿಕೆಯಿಂದ 'ಪ್ರೌಢ ಪ್ರತಾಪ ವೀರರಾಜೇಂದ್ರ' ಒಂದು ಉತ್ತಮ ಐತಿಹಾಸಿಕ ಕಾದಂಬರಿಯಾಗಿದೆ.

ಹದಿನಾರಕ್ಕೂ ಹೆಚ್ಚು ಕಾದಂಬರಿಗಳು, ಐದು ಕಥಾ ಸಂಕಲನಗಳು, ಹನ್ನೊಂದು ಮಕ್ಕಳ ಪುಸ್ತಕಗಳು, ಇಪ್ಪತ್ತೊಂದಕ್ಕೂ ಹೆಚ್ಚು ರೇಡಿಯೋ ರೂಪಕಗಳು ಮತ್ತು ನಾಟಕಗಳು ಮತ್ತು ಎರಡು ವಿಶಿಷ್ಟ ಗ್ರಂಥಗಳನ್ನು ಹೊರ ತಂದಿರುವ ಶ್ರೀನಿವಾಸರಾಯರು ಇಷ್ಟೆಲ್ಲಾ ಸಾಧನೆಗಳ ನಡುವೆ ಸ್ನೇಹಜೀವಿ ; ಇಷ್ಟು ಸಾಧಿಸಿದ್ದರೂ ಮತ್ತಷ್ಟನ್ನು ಸಾಧಿಸಬೇಕೆಂಬ ಮಹತ್ವಾಕಾಂಕ್ಷೆಯ ಸಾಹಸಿ. ಇಂತಹ ಸಾಹಸಿಗಳು ಯಶ ಗಳಿಸುವುದು ಆಶ್ಚರ್ಯವೇನಲ್ಲ ; ಅದು ಅವರ ಶ್ರಮಕ್ಕೆ ದೊರಕುವ ಸತ್ಫಲ.



# ಸ್ನೇಹ ಜೀವಿ

—ಎಚ್. ಎಸ್. ಸೂರ್ಯನಾರಾಯಣ

ತಮ್ಮ ಸಾಹಿತ್ಯ ಕೃತಿಗಳಿಂದಷ್ಟೇ ಪರಿಚಿತರಾಗಿದ್ದ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರನ್ನು ನಾನು ಮೊದಲ ಬಾರಿಗೆ ಕಂಡದ್ದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿಯೆ. ಅದೂ ಸಹ–ಪರಿಷತ್ತು ತನ್ನ ಇತಿಹಾಸದಲ್ಲಿ ಪ್ರಥಮ ಬಾರಿಗೆ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿರುವ ಕಾರ್ಯ ಸಮಿತಿ ಸದಸ್ಯರುಗಳ ಮತ್ತು ತಾಲ್ಲೂಕು ಘಟಕಗಳ ಅಧ್ಯಕ್ಷರುಗಳ ಒಂದು ಸಮಾಲೋಚನಾ ಸಭೆಯನ್ನು ೧೯೮೯ರ ಸೆಪ್ಟೆಂಬರ್ ೩೦ ರಂದು ಏರ್ಪಡಿಸಿದ್ದ ಸಂದರ್ಭದಲ್ಲಿ. ಆಗ ನಾನು ಕಡೂರು ತಾಲ್ಲೂಕು ಘಟಕದ ಅಧ್ಯಕ್ಷನಾಗಿದ್ದೆ.

ಸಮಾವೇಶದಲ್ಲಿ 'ಅಮೃತ ನಿಧಿ'ಗೆ ಕಾಣಿಕೆ ಕೋರಿ ಮನವಿ ಮಾಡಿದ ಅಧ್ಯಕ್ಷರು, ಸ್ಥಳದಲ್ಲೇ ತಮ್ಮ ಯಥಾನುಶಕ್ತಿ ಕಾಣಿಕೆ ನೀಡಬಹುದೆಂದು ಕರೆ ಇತ್ತರು. ಕೂಡಲೇ ಎಸ್.ವಿ.ಶ್ರೀ. ಅವರು 'ಹುಂಡಿ ಡಬ್ಬ'ವನ್ನೂ ತರಿಸಿ ಸಭಾಸದರ ಮುಂದೆ ಹಿಡಿಯುವ ಏರ್ಪಾಟು ಮಾಡಿದರಲ್ಲದೆ, 'ಹುಂಡಿ' ಒಂದು ಸುತ್ತು ಬಂದ ತಕ್ಷಣ, ಅದನ್ನು ತರೆದು ಎಲ್ಲರೆದುರಿಗೇ ಎಣಿಕೆ ಮಾಡಿ ಎಷ್ಟು ಸಂಪಾದನೆಯಾಗಿದೆಯೆಂಬುದನ್ನು ಗುರುತು ಮಾಡಿ, ಮೊತ್ತವನ್ನು ಚೀಟಿಯಲ್ಲಿ ಬರೆದು ಅಧ್ಯಕ್ಷರಿಗೆ ಕೊಟ್ಟು ಆಗಲೇ ಪ್ರಕಟಿಸುವಂತೆ ಮಾಡಿದರು.

ಅವರ ಸಮೀಪವೇ ಇದ್ದ ನನಗೆ 'ಎಸ್‌ವಿಶ್ರೀ' ಅವರ ಮೌನಕಾಯಕ ಹಾಗೂ ಕಾರ್ಯಕ್ಷಮತೆಗಳನ್ನು ಕಂಡು ಅಚ್ಚರಿಯೊಂದಿಗೆ, ಮೆಚ್ಚುಗೆಯ ಭಾವನೆಯೂ ಮೂಡಿ ಬಂತು. ಇನ್ನೂ ನನ್ನ ವಿಶೇಷ ಗಮನ ಸೆಳೆದ ಅಂಶವೆಂದರೆ, ಅವರು ಜಮಾ ಬಂದ ಹಣದ ಲೆಕ್ಕಾಚಾರವೆಲ್ಲವನ್ನೂ ಸಾಮಾನ್ಯವಾಗಿ ನಾವೆಲ್ಲ ಮಾಡುವಂತೆ ರೋಮನ್ ಅಂಕೆಗಳಲ್ಲಿ ಬರೆಯುವಂತೆ ಮಾಡದೆ, ಕನ್ನಡದ ಅಂಕೆಗಳಲ್ಲೆ ಬರೆದು ಕೊಂಡರು.

ಈ ಕನ್ನಡ ಭಕ್ತಿ, ಅಭಿಮಾನ ಹಾಗೂ ಎಲ್ಲ ಸ್ತರಗಳಲ್ಲೂ ತಮ್ಮ ನಿಲುವು ಕನ್ನಡದ್ದೇ ಆಗಿರಬೇಕೆಂಬ ಮನೋನಿಶ್ಚಯಗಳು ಅವರ ಬಗೆಗೆ ಗೌರವ, ವಿಶ್ವಾಸ

ಗಳನ್ನು ಮೂಡಿಸಿದವು. ಅನಂತರ ನಾನು ೧೯೯೦ ರ ನವೆಂಬರ್ ೭ ರಿಂದ ಚಿಕ್ಕಮಗಳೂರು 'ಕಸಾಪ' ಜಿಲ್ಲಾಧ್ಯಕ್ಷನಾಗಿ ನೇಮಕಗೊಂಡ ಮೇಲೆ ಶ್ರೀನಿವಾಸ ರಾಯರನ್ನು ಸಮೀಪದಿಂದ ಕಾಣುವ, ಅರಿಯುವ ಸಂದರ್ಭಗಳು ಒದಗಿ ಬಂದವು.

ಪರಿಷತ್ತಿನ ಏಳೆಂಟು ಕಾರ್ಯಸಮಿತಿ–ಸಭೆಗಳಲ್ಲಿ, ಎರಡು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ (ಮೈಸೂರು ಮತ್ತು ದಾವಣಗೆರೆ) ಹಾಗೂ ಬೆಂಗಳೂರಿನಲ್ಲಿ ನಡೆದ ಅಮೃತೋತ್ಸವದಲ್ಲಿ ನಾನು ಭಾಗವಹಿಸಿದ್ದಾಗ ಶ್ರೀನಿವಾಸ ರಾಯರ ಕ್ರಿಯಾನಿಷ್ಠೆಯನ್ನು ಗಮನಿಸಿದೆ. ಯಾರಿಂದಲೂ ಪ್ರಶಂಸೆ, ಪ್ರಚಾರ ಗಳನ್ನು ಬಯಸದೆ, ತಮ್ಮ ಪಾಲಿನ ಹೊಣೆಯನ್ನು, ವಹಿಸಲ್ಪಟ್ಟ ಕರ್ತವ್ಯಗಳನ್ನು ತದೇಕ ನಿಷ್ಠೆಯಿಂದ ಮಾಡುತ್ತಿದ್ದುದು ಗಮನಾರ್ಹವೆನಿಸಿತು. ಬಾಯಿ, ಬಡಾಯಿ ಗಳನ್ನಷ್ಟೇ ತಮ್ಮ ಮೂಲ ಬಂಡವಾಳವನ್ನಾಗಿ ಹೂಡಿ, ಸಮಾಜ ಸೇವೆ, ಸಾಹಿತ್ಯ ಸೇವೆ ಇತ್ಯಾದಿ ಕ್ಷೇತ್ರಗಳಲ್ಲಿ ಸ್ವಯಂ ಘೋಷಿತ ನಾಯಕಮಣಿಗಳಂತೆ ಕ್ಯಾಮೆರಾ, ವಿಡಿಯೋ, ಟಿವಿ, ಮುಂತಾದ ಪ್ರಚಾರ ಸಾಧಕಗಳ ಮುಂದೆ ಹಿಂದಿನಿಂದ ನುಗ್ಗಿ ಬಂದು, ತಾವು ಏನನ್ನೂ ಮಾಡಿರದಿದ್ದರೂ, ಎಲ್ಲವನ್ನೂ ತಾವೇ ಮಾಡಿದುದೆಂದು ಕಾಣದವರ ಮನದಲ್ಲಿ ಮೂಡುವಂತೆ 'ಅಭಿನಯಿಸುವ', 'ಅವಕಾಶವಾದಿ'ಗಳ ಗುಂಪಿನಿಂದ ಎಸ್. ವಿ. ಶ್ರೀನಿವಾಸರಾವ್ ತುಂಬ ದೂರ. ಈ ಪ್ರವೃತ್ತಿಯೇ ಇವರು ಎಲೆ ಮರೆಯಲ್ಲಿರುವ ಹೂವಿನಂತೆ ಇರಲು ಕಾರಣವೆನಿಸಿದೆ.

ಸಾಮಾನ್ಯವಾಗಿ ಬರಹಗಾರರು ತಮ್ಮನ್ನು ಹಿರಿಯ ಲೇಖಕರ ಸಾಲಿನಲ್ಲಿ ಗುರುತಿಸಿಕೊಳ್ಳಲು-ಅರ್ಹತೆ ಇರಲಿ, ಇಲ್ಲದಿರಲಿ-ಅಪೇಕ್ಷಿಸುವುದು ಸುಳ್ಳಲ್ಲ. ನಲವತ್ತರಷ್ಟು ದೊಡ್ಡ ಸಂಖ್ಯೆಯ ಕೃತಿಗಳನ್ನು ಕನ್ನಡಕ್ಕೆ ಅರ್ಪಿಸಿದ್ದರೂ ರಾಯರು ಈ ಚಪಲದಿಂದ ದೂರವೆಂದು ಗಮನಿಸಬಹುದು.

ಮಕ್ಕಳ ಸಾಹಿತ್ಯ ಲೋಕದಲ್ಲಿ ಶ್ರೀನಿವಾಸರಾಯರು ಹೆಚ್ಚು ಪ್ರಿಯರೆಂಬುದು ನನಗೆ ಅರಿವಿರುವ ಸಂಗತಿ. ಬಾಲರಿಗಾಗಿ ರಂಜನೀಯ ಸಾಹಿತ್ಯ ರಚಿಸಿರುವ, ಈಗಲೂ ಬರೆಯುತ್ತಿರುವ, ಅವರ ಕಾದಂಬರಿಗಳು 'ಬಾಲ ಮಂಗಳ'ದಂಥ ಮಕ್ಕಳ ಪತ್ರಿಕೆ ಹಾಗೂ ಅನೇಕ ನಿಯತ ಕಾಲಿಕಗಳಲ್ಲಿ ಪ್ರಕಟವಾಗುತ್ತಿವೆ. ಪ್ರಾಥಮಿಕ ಶಾಲಾ ಮಕ್ಕಳು 'ಎಸ್‌ವಿಶ್ರೀ'ಯವರ ಕೃತಿಯ ಧಾರಾವಾಹಿ ಕಂತು ಗಳನ್ನು ಪತ್ರಿಕೆ ಮನೆಗೆ ಬಂದ ಕೂಡಲೇ ಪುಟ ತೆರೆದು ದೊಡ್ಡ ಧ್ವನಿಯಲ್ಲಿ ಓದು ವುದನ್ನು ನಮ್ಮ ಮನೆಯಲ್ಲೇ ನಾನು ಕಂಡಿದ್ದೇನೆ. ಮಕ್ಕಳು ಈ ಸಾಹಿತ್ಯವನ್ನು

ವಿಮರ್ಶಿಸುವುದಿಲ್ಲ, ಓದಿ ಹರ್ಷಿಸುತ್ತಾರೆ. ಜೊತೆಗೆ ಪುಸ್ತಕ ಓದುವ ಕಲೆಯನ್ನೂ ರೂಢಿಸಿಕೊಳ್ಳುತ್ತಾರೆ, ಓದುಗಾರಿಕೆ ಪ್ರಚೋದನೆಗೆ ಇವರ ಕಾಣಿಕೆ ಗಣನೀಯ.

ತಮ್ಮ ವೃತ್ತಿ ಜೀವನದಲ್ಲಿ (ರಕ್ಷಣಾ ಇಲಾಖೆಯಲ್ಲಿ ವೈಜ್ಞಾನಿಕ ವಿಷಯಕ ಅಧಿಕಾರಿಯಾಗಿ) ಇಂಗ್ಲಿಷ್ ಭಾಷೆಯೇ ಪ್ರಮುಖ ಹಾಗೂ ಪ್ರಧಾನ ವ್ಯವಹಾರದ ಮಾಧ್ಯಮವಾಗಿದ್ದರೂ, ಮಾತೃಭಾಷೆಯ ಮೇಲಿನ ಪ್ರಭುತ್ವವನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವುದಕ್ಕಾಗಿ ಕನ್ನಡಿಗರ ಕೃತಜ್ಞತೆ ಹಾಗೂ ಅಭಿನಂದನೆಗಳು ಎಸ್‌ವಿಶ್ರೀ ಅವರಿಗೆ ಸಲ್ಲಬೇಕು. 'ಇಂಗ್ಲಿಷ್, ಹಿಂದಿಗಳಿಲ್ಲದೆ ತಮಗೆ ಮೋಕ್ಷವಿಲ್ಲ' ಎಂದು ಭ್ರಮಾಲೋಕವಾಸಿಗಳಾಗಿರುವ ಕನ್ನಡನಾಡಿನ 'ಪರಭಾಷಾ ದಾಸ'ರುಗಳು ಇವರನ್ನು ನೋಡಿ ಕಲಿಯಬೇಕಾಗಿದೆ. ಕನ್ನಡನಾಡಿನಲ್ಲಿ ಇತರ ಭಾಷೆಗಳು ಅತಿಥಿ, ಆಹ್ವಾನಿತರಂತಿರಬೇಕೇ ಹೊರತು, ಮನೆಯ ಯಜಮಾನನಿಗಿಂತ ದೊಡ್ಡವರಾಗ ಬಾರದು.

ಸ್ವಭಾಷಾಭಿಮಾನಕ್ಕೆ ಮಾದರಿಯಾಗಬಲ್ಲ ಶ್ರೀನಿವಾಸರಾಯರು ತಮ್ಮ ಸುಸ್ವಭಾವ, ಸರಳತೆ, ಸಜ್ಜನಿಕೆ, ಸ್ನೇಹಪರ ಗುಣವಿಶೇಷಗಳಿಂದ ಆದರ್ಶ ಕನ್ನಡಿಗ ರಾಗಿದ್ದಾರೆ. ಅವರಿಗೆ ಸದಾಕಾಲ ಶುಭವಾಗಲಿ.



# ತಂದೆ-ಮಗ

—ಟಿ. ಎಸ್. ಕೃಷ್ಣಮೂರ್ತಿ

ತುಮಕೂರು ಜಿಲ್ಲೆಯ ಗೂಳೂರು ಹೋಬಳಿಯಲ್ಲಿನ ಒಂದು ಚಿಕ್ಕ ಹಳ್ಳಿ, 'ಚಿಕ್ಕಸಾರಂಗಿ'. ಇದು ತುಮಕೂರು ನಗರಕ್ಕೆ ಸುಮಾರು 7 ಮೈಲಿ ದೂರದಲ್ಲಿದೆ. ತುಮಕೂರು-ಕುಣಿಗಲ್ ರಸ್ತೆಯಲ್ಲಿ ಹೊನ್ನುಡಿಕೆ ಕೈಮರದಿಂದ ಬಲಗಡೆಗೆ ತಿರುಗಿ $1\frac{1}{2}$ ಮೈಲಿ ಪಯಣಿಸಿದರೆ ಈ ಗ್ರಾಮ ಸಿಗುತ್ತದೆ. ಇಲ್ಲಿ ಸಿಕ್ಕಿರುವ ಗಂಗರ ಒಂದು ಶಿಲಾಶಾಸನದಿಂದಾಗಿ ಈ ಗ್ರಾಮಕ್ಕೆ ಚಾರಿತ್ರಿಕ ಮಹತ್ವವೂ ಬಂದಿದೆ. ಕ್ರಿ. ಶ. 903ರ ಈ ಶಾಸನರೀತ್ಯ ಗಂಗರು ಆಗ ರಾಷ್ಟ್ರಕೂಟರ ಸಾಮಂತ ರಾಜರಾಗಿದ್ದರೆಂದು ತಿಳಿದುಬರುತ್ತದೆ.

ಜಗತ್ಪ್ರಸಿದ್ಧ ದೊಡ್ಡ ಗಣೇಶನ ಗೂಳೂರು ಚಿಕ್ಕಸಾರಂಗಿಯಿಂದ 3 ಮೈಲಿ (ತುಮಕೂರು-ಕುಣಿಗಲ್ ಹೆದ್ದಾರಿಯಲ್ಲಿ) ದೂರದಲ್ಲಿದ್ದರೆ ಪ್ರಸಿದ್ಧ ಹೊಯ್ಸಳ ದೇವಾಲಯ ಚೆನ್ನಕೇಶವನ 'ಕೈದಾಳ' 2 ಮೈಲಿ ಅಂತರದಲ್ಲೇ ಇದೆ. ಕೈ ಕಳೆದು ಕೊಂಡಿದ್ದ ಪ್ರಸಿದ್ಧ ಶಿಲ್ಪಿ ಜಕಣಾಚಾರಿಗೆ ಕೈ ಮೂಡಿ ಬಂದ ಪವಿತ್ರ ಸ್ಥಳವೆಂದು ಪ್ರಖ್ಯಾತವಾಗಿದೆ.

ಚಿಕ್ಕಸಾರಂಗಿ ಒಂದು ಸಾಮಾನ್ಯ ಹಳ್ಳಿ. ಜನಸಂಖ್ಯೆ ಸುಮಾರು 400 ಮಾತ್ರ. ನೀರಾವರಿಗೆ ಆಸರೆ ಒಂದು ಪುಟ್ಟ ಕೆರೆ. ರಾಗಿಯೇ ಮುಖ್ಯ ಕೃಷಿ. ಒಕ್ಕಲಿಗರು ಹಾಗೂ ಹರಿಜನರೇ ಹೆಚ್ಚಿರುವ ಈ ಊರಿನಲ್ಲಿದ್ದುದು ಮೂರೇ ಮೂರು ಬ್ರಾಹ್ಮಣ ಕುಟುಂಬ. ಒಂದು ಆ ಊರಿನ ಶಾನುಭೋಗರದು, ಎರಡನೆಯದು ಶಾನುಭೋಗರ ತಂಗಿಯ ಕುಟುಂಬ. ಮೂರನೆಯದು ಸ್ಕೂಲ್ ಮಾಸ್ತರದು. ಶಾನುಭೋಗರ ಕುಟುಂಬ ನಾಲ್ಕು ತಲೆಮಾರಿನಿಂದ ಚಿಕ್ಕಸಾರಂಗಿಯಲ್ಲಿದೆ. ಶೀನಪ್ಪ ಆ ವಂಶದ ಇತ್ತೀಚಿನ ಪ್ರಮುಖರು. ಇವರಿಗೆ 3 ಜನ ಗಂಡುಮಕ್ಕಳು, ಇಬ್ಬರು ಹೆಣ್ಣು ಮಕ್ಕಳು. ಹಿರಿಯ ಮಗನ ಹೆಸರು ವೆಂಕಟರಾಯ, ಎರಡನೆಯ ಮಗ ವೆಂಕಟ ರಾಮಯ್ಯ. 3ನೇ ಮಗ ವೆಂಕಟರಮಣಯ್ಯ, ಹೆಣ್ಣು ಮಕ್ಕಳು ನರಸಮ್ಮ ಮತ್ತು ಜಾನಕಮ್ಮ. ಹಿರಿಯ ಮಗ ವೆಂಕಟರಾಯ ಮದುವೆಯಾದ ಕೆಲದಿನಗಳಲ್ಲೇ ಮರಣ ಹೊಂದಿದುದರಿಂದ ಶಾನುಭೋಗಿಕೆ ಹಾಗೂ ಸಂಸಾರದ ಜವಾಬ್ದಾರಿ ವೆಂಕಟ

ರಾಮಯ್ಯನವರ ಹೆಗಲಿಗೇರಿತು. ಅವರು ಬಹಳ ಧೈರ್ಯವಂತರು. ವ್ಯವಹಾರದಲ್ಲಿ ಕುಶಲರು, ಚಾಣಾಕ್ಷ ಬುದ್ಧಿಯುಳ್ಳವರು. ಹೀಗಾಗಿ ಬಹುಬೇಗ ಸಂಸಾರದಲ್ಲಿ ಆರ್ಥಿಕ ಪ್ರಗತಿ ಸಾಧಿಸಿದರು. ಲೇವಾದೇವಿ ರೂಢಿಸಿದರು.

ಹಳ್ಳಿಯ ಜನರನ್ನು ಕಂಡರೆ ಇವರಿಗೆ ಬಹಳ ಅಕ್ಕರೆ. ಪ್ರೀತಿ ವಾತ್ಸಲ್ಯದಿಂದ ನಡೆಸಿಕೊಳ್ಳುತ್ತಿದ್ದರು. ಅದಷ್ಟೂ ಸಹಾಯ ಮಾಡುತ್ತಿದ್ದರು. ಬಡವರಿಗೆ ಪ್ರತಿ ವರ್ಷವೂ ರಾಗಿ ಭತ್ತದ ಕಡ ಹಾಕುತ್ತಿದ್ದರು. (ಸಾಲವಾಗಿ ನೀಡುತ್ತಿದ್ದರು). ಆದರೆ ವೆಂಕಟ ರಾಮಯ್ಯನವರದು ಸ್ವಲ್ಪ ಮುಂಗೋಪ ಪ್ರವೃತ್ತಿ. ಜನರ ಕೆಟ್ಟ ಬುದ್ಧಿ, ಕುಟಿಲತೆ ಇದಕ್ಕೆ ಇನ್ನೂ ಒಂದು ಕಾರಣ ಅವರು ಇತ್ತೀಚೆಗೆ ಕೊಂಡಿದ್ದ ಏಳು ನಳಿಗೆಯ ಪಿಸ್ತೂಲು. ಮೋಸ-ವಂಚನೆ ಕಂಡರಾಗುತ್ತಿರಲಿಲ್ಲ. ಇವನ್ನು ಕಂಡಾಗಲೆಲ್ಲಾ ಅಂತಹವರನ್ನು ಬೈದು, ಬಡಿದು ಬುದ್ಧಿ ಕಲಿಸುತ್ತಿದ್ದರು. ಅದಕ್ಕೇ ಹಳ್ಳಿಯ ಜನ ಇವರನ್ನು "ಬೆಂಕಿರಾಮಯ್ಯ" ಅನ್ನುತ್ತಿದ್ದರು. ಹೆಂಗಸರು ಮಕ್ಕಳು ಇವರ ಎದುರಿಗೆ ನಿಲ್ಲಲು ಹೆದರುತ್ತಿದ್ದರಂತೆ.

ಇವರು ಶಾನುಭೋಗರಾಗಿದ್ದು ಸುತ್ತಮುತ್ತಲ ಹಳ್ಳಿಗಳಿಗೂ ಹಾಗೂ ತುಮಕೂರಿಗೆ ಆಗಾಗ್ಗೆ ಹೋಗಬೇಕಾಗುತ್ತಿದ್ದುದರಿಂದ ಒಂದು ಅರಬ್ಬಿ ಕುದುರೆ ಯನ್ನು ಇಟ್ಟುಕೊಂಡಿದ್ದರು. ಅದಕ್ಕೆ ಹುರಳಿ ಬೇಯಿಸಿಹಾಕಲು, ಮೇಯಿಸಲು, ಮೈ ತಿಕ್ಕಲೆಂದೇ ಇಬ್ಬರು ಆಳನ್ನು ನೇಮಿಸಿದ್ದರು. ಅವರೇ ಗೋಪಾಲಿ, ನರಸಿಂಹ. ಕುದುರೆ ಈ ಮನೆ ಬಿಟ್ಟು ಹೋದಮೇಲೂ ಬಹಳ ವರ್ಷ ಹೆಮ್ಮೆಯ ಆಳಾಗಿದ್ದು ದನ್ನು ನಾನು ಕಂಡಿದ್ದೆ. ಈ ಕುದುರೆಯನ್ನು ಎಷ್ಟೋ ಬಾರಿ ಅಮಲ್ದಾರರು ಜಮಾಬಂದಿಗೆ ಹೋಗಿ ಬರಲು ಎರವಲು ಪಡೆಯುತ್ತಿದ್ದರಂತೆ.

ನಾನು ಈ ಕುಟುಂಬಕ್ಕೆ ಹೇಗೆ ಸಂಬಂಧವೆಂದರೆ, ವೆಂಕಟರಾಮಯ್ಯನವರ ಪತ್ನಿ ಪುಟ್ಟಚ್ಚಮ್ಮನ (ತೌರು ಮನೆ ಹೆಸರು ವೆಂಕಟಲಕ್ಷ್ಮಮ್ಮ) ತಮ್ಮನ ಹೆಂಡತಿ ಪದ್ಮಾವತಮ್ಮ ನನ್ನ ಅಕ್ಕ. ನಮ್ಮ ಪೂರ್ವಿಕರು ಇದ್ದುದು ತುಮಕೂರು ಜಿಲ್ಲೆಯ ಕಳ್ಳಂಬೆಳ್ಳದಲ್ಲಿ. ನನ್ನ ಅಕ್ಕನ ಮದುವೆಯಾದ ನಂತರ ಈ ಕುಟುಂಬದವರು ಸಾರಂಗಿಗೆ ಬಂದು ಅಳಿಯನ ಮನೆಯ ಎದುರಿಗೇ ವಾಸಿಸತೊಡಗಿದ್ದರು. ಹತ್ತಿರದ ತರೂರಿನಲ್ಲಿ (ಈಗಿನ ನಾಗವಲ್ಲಿ) ಕೊಂಚ ಜಮೀನು ಸಹ ಹೊಂದಿದ್ದರು.

ತರೂರಿನ ಸುಬ್ಬರಾಯರು ಹಾಗೂ ಬಾಣಾವರದ ಮೀಸೆ ರಾಮಣ್ಣ ವೆಂಕಟ ರಾಮಯ್ಯನವರ ಆಪ್ತ ಸಲಹೆಗಾರರಾಗಿದ್ದರು.

ವೆಂಕಟರಾಮಯ್ಯನವರಿಗೆ ನಾಟಕವೆಂದರೆ ಬಹಳ ಆಸಕ್ತಿ. ಒಮ್ಮೆ ಮಧುಗಿರಿ ಯಲ್ಲಿ ಮಲ್ಲಪ್ಪನವರ ಕಂಪನಿ ನಡೆಯುತ್ತಿದ್ದಾಗ ಅಲ್ಲಿ ಗೌರವ ಸ್ಥಾನ ದೊರೆಯಲಿಲ್ಲ

ವೆಂದು ಕೋಪದಿಂದ ಆ ಕಂಪನಿಯನ್ನೇ ಕೊಂಡು ಹಲವು ವರ್ಷ ನಡೆಸಿದ ಛಲ ಇವರದು.

ವೆಂಕಟರಾಮಯ್ಯ ಮತ್ತು ಪುಟ್ಟಚ್ಚಮ್ಮನವರಿಗೆ ಮದುವೆಯಾಗಿ ಹಲವು ವರ್ಷಗಳೇ ಸಂದಿದ್ದರೂ ಸಂತಾನ ಭಾಗ್ಯ ಲಭಿಸಿಲ್ಲದ್ದರಿಂದ ಅವರು ಭಾವ ಮೈದುನನ (ಅಂದರೆ ಪುಟ್ಟಚ್ಚಮ್ಮನವರ ತಮ್ಮ 'ಗುಂಡಪ್ಪ'ನ) ಎರಡನೆ ಮಗು 'ಗುರು'ವನ್ನು ಹತ್ತು ತಿಂಗಳಾಗಿದ್ದಾಗಲೇ ಶಾಸ್ತ್ರೋಕ್ತವಾಗಿ ದತ್ತು ತೆಗೆದುಕೊಂಡು ಮಗುವಿಗೆ 'ಶ್ರೀನಿವಾಸ' ಎಂದು ಹೆಸರಿಟ್ಟರು. ಆ ಅದ್ದೂರಿಯ ಸಮಾರಂಭದ ನೆನಪು ಇನ್ನೂ ನನ್ನ ಮನಸದಲ್ಲಿ ಹಚ್ಚ ಹಸುರಾಗೇ ಇದೆ.

ದತ್ತು ಮಗ ಶ್ರೀನಿವಾಸ ಮತ್ತು ಅವನ ಅಣ್ಣ ಕಿಟ್ಟು (ಕೃಷ್ಣಮೂರ್ತಿ) ಇವರ ವಿದ್ಯಾಭ್ಯಾಸಕ್ಕೆಂದೇ ತುಮಕೂರಿನ ಅಗ್ರಹಾರದಲ್ಲಿ ಭಾರಿ ಮನೆಯೊಂದನ್ನು ಕೊಂಡು ಪತ್ನಿ ಸಮೇತ ಇರತೊಡಗಿದರು. ಆದರೆ ದುರ್ವಿಧಿ ಇದಾದ ಮೂರು ವರ್ಷಕ್ಕೇ ಇವರನ್ನು ಕೊಂಡೊಯ್ದಿತು. ಆಗ ಶ್ರೀನಿವಾಸನಿಗೆ ಕೇವಲ ಮೂರು ವರ್ಷ. ಕಿಟ್ಟುವಿಗೆ ಏಳು ವರ್ಷ. ಹಿರಿಯ ಅಕ್ಕ ಕಾಂತಮ್ಮನಿಗೆ 9 ವರ್ಷ. ಈ ಮಕ್ಕಳ ನಿರ್ವಹಣೆಯ ಭಾರವನ್ನು ಪುಟ್ಟಚ್ಚಮ್ಮ ಹೊರಲು ಮುಂದಾದರು. ಶಾನುಭೋಗಿಕೆ ಹಾಗೂ ಬೇಸಾಯದ ಜವಾಬ್ದಾರಿಯನ್ನು ವೆಂಕಟರಮಣಯ್ಯ ನಿರ್ವಹಿಸತೊಡಗಿದರು.

ಪುಟ್ಟಚ್ಚಮ್ಮ ತುಮಕೂರಿನಲ್ಲಿದ್ದುಕೊಂಡು ಮಕ್ಕಳ ಓದನ್ನು ನೋಡಿಕೊಳ್ಳುತ್ತಿದ್ದಾಗ ಶ್ರೀ ಕೆ. ಎಸ್. ಜೋಯಿಸ್ ಎಂಬುವರು ಆ ಮನೆಯಲ್ಲಿ ಒಂದು ರೂಮನ್ನು ಬಾಡಿಗೆಗೆ ಪಡೆದು ವಾಸಿಸತೊಡಗಿದರು. ಇವರೇ ಕಿಟ್ಟು. ಗುರು (ಶ್ರೀನಿವಾಸ)ಗೆ ಮನೆಯ ಗುರುಗಳಾದರು. ಇಬ್ಬರಿಗೂ SSLC ಆಗುವ ತನಕ ಇವರೇ ಪಾಠ ಹೇಳಿಕೊಡುತ್ತಿದ್ದರು. ಇವರು ಆ ಮನೆಯವರೊಡನೆ ಎಷ್ಟು ಹೊಂದಿಕೊಂಡುಹೋದರೆಂದರೆ ಇವರೇ ಮುಂದೆಲ್ಲಾ ಮನೆಗೆ ಸಲಹಾಗಾರರಾಗಿದ್ದುದಲ್ಲದೆ ಶುಭಾಕಾಂಕ್ಷಿಗಳಾಗಿ ಸಾಯುವ ತನಕ (1986) ಮನೆಯ ಹಿರಿಯರಂತೆ ಜವಾಬ್ದಾರಿ ನಿರ್ವಹಿಸುತ್ತಿದ್ದರು. ಮನೆಯವರಿಗೆಲ್ಲ ಇವರನ್ನು ಕಂಡರೆ ತುಂಬಾ ಗೌರವ. ಪೂಜ್ಯ ಭಾವನೆ.

ವೆಂಕಟರಮಣಯ್ಯನವರು ಎರಡು ಮದುವೆ ಆದರೂ ಸಂತಾನ ಭಾಗ್ಯ ಲಭಿಸಲಿಲ್ಲ. ಆದರೆ ಇವರೂ ಸಹ ಅಣ್ಣನ ದತ್ತು ಮಗನನ್ನೇ ತಮ್ಮ ಮಗನಿಗಿಂತಲೂ ಹೆಚ್ಚು ವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದರು. ಹುಡುಗರು ಹಳ್ಳಿಗೆ ಬಂದಾಗಲೆಲ್ಲ

ತಪ್ಪು ಹಾಸಿಗೆಯಲ್ಲೇ ಮಲಗಿಸಿಕೊಂಡು ನಲ್ಮೆಯಿಂದ ಮೈದಡವುತ್ತಿದ್ದುದು ನನ್ನ ಕಣ್ಣಮುಂದೆ ಕಟ್ಟಿದಂತಿದೆ. ಇನ್ನೊಮ್ಮೆ ತುಮಕೂರಿನಲ್ಲಿ ಗುರು (ಶ್ರೀನಿವಾಸ) ಎಲೆಕ್ಟ್ರಿಕ್ ಬೆಲ್ ಮಾಡುತ್ತೇನೆಂದು ಹೋಗಿ ಷಾಕ್ ಹೊಡೆಸಿಕೊಂಡಾಗ ಇವರು ಮತ್ತು ಪುಟ್ಟಚ್ಚಮ್ಮ ಪಟ್ಟ ಕಳವಳ, ಕಾತರ, ವ್ಯಾಕುಲತೆಯ ದೃಶ್ಯ, ಪ್ರೀತಿ, ವಾತ್ಸಲ್ಯಕ್ಕೆ ಜ್ವಲಂತ ನಿದರ್ಶನಗಳು.

ದತ್ತು ತಾಯಿಯ ಪ್ರೀತಿ, ವಾತ್ಸಲ್ಯ, ಚಿಕ್ಕಪ್ಪನ ಉದಾತ್ತ, ಆದರಣೀಯ ಆದರ್ಶ, ಗುರುವಿನ (ಶ್ರೀನಿವಾಸನ) ವ್ಯಕ್ತಿತ್ವ ರೂಪಿಸುವಲ್ಲಿ ಸಾರ್ಥಕವಾಗಿವೆ.

ಕಿಟ್ಟುವಿನ ವಿವಾಹ ಆದ ಒಂದೇ ತಿಂಗಳಲ್ಲಿ ವೆಂಕಟರಮಣಯ್ಯನವರು ಮರಣ ಹೊಂದಿದಾಗ ಸಂಸಾರಕ್ಕೇ ಭಾರಿ ಆಘಾತವಾಯಿತು. ಆದರೆ ಪುಟ್ಟಚ್ಚಮ್ಮನವರು ಆಗ ತೋರಿದ ಧೈರ್ಯ, ಸ್ಥೈರ್ಯ, ದಿಟ್ಟತನ ಶ್ಲಾಘನೀಯ. ಕಿಟ್ಟು ಓದನ್ನುಮೊಟಕು ಗೊಳಿಸಲೇಬೇಕಾಯಿತು. ಪುಟ್ಟಚ್ಚಮ್ಮ ಕಿಟ್ಟುವಿನ ಸಂಸಾರವನ್ನು ಚಿಕ್ಕಸಾರಂಗಿಗೆ ಕರೆದೊಯ್ದು ವ್ಯವಹಾರ ನಿರ್ವಹಿಸಲು ಬೆಂಬಲವಾಗಿ ನಿಂತರು. 1952ರ ತನಕ ಸಂಸಾರಕ್ಕೆ ಊರಗೋಲಾಗಿದ್ದು ಮರಣಿಸಿದರು. ಶೀನಪ್ಪನವರ ವಂಶದ ಕೊನೆಯ ಹಿರಿಯ ಜೀವವೂ ನಂದಿಹೋಯಿತು.

ಈಗ ಶೀನಪ್ಪನವರ ವಂಶದ ಕುಡಿಯಾಗಿದ್ದವರು ಶ್ರೀನಿವಾಸರಾವ್‌ರವರು, ಇವರಿಗೆ ನನ್ನ ಮಗಳು ಅನುಸೂಯಳನ್ನು ಕೊಟ್ಟು ವಿವಾಹವಾಗಿದೆ.

ಧೈರ್ಯ, ಸ್ಥೈರ್ಯ ಮತ್ತು ಬುದ್ಧಿಮತ್ತತೆಯಿಂದ ಪ್ರವರ್ಧಮಾನಕ್ಕೆ ಬಂದು, ಅಪಾರ ಜನರ ಪ್ರೀತಿ, ವಾತ್ಸಲ್ಯ ಗಳಿಗೆ ಚಿಕ್ಕಸಾರಂಗಿಯ ಚರಿತ್ರೆಯಲ್ಲಿ ಒಂದು ಸ್ಮರಣೀಯ ಸ್ಥಾನಗಳಿಸಿದ್ದ ಬೆಂಕಿ ರಾಮಯ್ಯ ಇಂದು 'ಸವಿನೆನಪು'.

ಬೆಂಕಿರಾಮಯ್ಯನವರ ದತ್ತು ಮಗ ಶ್ರೀನಿವಾಸ ಬೆಂಕಿಯಲ್ಲ, ಮೃದು ಬೆಣ್ಣೆ, ಮಹಾಸಾಧು, ಸಹೃದಯಿ, ಮೇಧಾವಿ ಅಧಿಕಾರಿ. ಆದರ್ಶವಾದಿ ಸಾಹಿತಿ. ರಕ್ಷಣಾ ಇಲಾಖೆಯಲ್ಲಿ ಅಧಿಕಾರಿಯಾಗಿದ್ದು ಈಗ ನಿವೃತ್ತರಾಗಿದ್ದಾರೆ. ನನ್ನ ಅಳಿಯನಿಗೆ ಹಾಗೂ ಕುಟುಂಬದ ಸರ್ವರಿಗೂ ನನ್ನ ಹಾರ್ದಿಕ ಶುಭಾಶಯಗಳು.





# ನನ್ನವರು

—ಶ್ರೀಮತಿ ಅನುಸೂಯಾ ರಾವ್

ನಾನು ಹುಟ್ಟಿ ಬೆಳೆದದ್ದು ಬೆಂಗಳೂರಿನಲ್ಲಿ. ನಮ್ಮ ತಂದೆ, ತಾಯಿಗೆ ನಾವು ನಾಲ್ಕು ಜನ ಮಕ್ಕಳು. ಅಣ್ಣ–ದಿವಂಗತ ನರಸಿಂಹಮೂರ್ತಿ, ತಮ್ಮಂದಿರು–ಜಗನ್ನಾಥ ಮತ್ತು ಸುಧೀಂದ್ರ ; ತಂಗಿ ಉಷಾ. ಇವರೆಲ್ಲರೂ ಇದ್ದದ್ದು ಬೆಂಗಳೂರಿನಲ್ಲಿಯೇ. ತುಮಕೂರಿನ ಹತ್ತಿರ ಚಿಕ್ಕಸಾರಂಗಿ ನನ್ನ ಸೋದರತ್ತೆ ಮನೆ. ಇಬ್ಬರು ಗಂಡು ಮಕ್ಕಳು, ಒಬ್ಬಳು ಹೆಣ್ಣು ಮಗಳು ನನ್ನ ಅತ್ತೆಗೆ. ಮಾವನ ಅಕ್ಕ-ಭಾವ ಸಾರಂಗಿಗೇ ದೊಡ್ಡ ಜಮೀನುದಾರರು. ಮಕ್ಕಳಿಲ್ಲದ ಕಾರಣ ತಮ್ಮನ ಎರಡನೇ ಮಗ(ಗುರು)ನನ್ನು ದತ್ತು ತೆಗೆದುಕೊಂಡಿದ್ದರು. (10 ತಿಂಗಳ ಮಗುವನ್ನು ದತ್ತು ತೆಗೆದುಕೊಂಡ ಸಮಾರಂಭ ಬಹಳ ವಿಜೃಂಭಣೆಯಿಂದ ನೆರವೇರಿಸಿದ್ದರೆಂದು ನಮ್ಮ ತಾಯಿ ಹೇಳುತ್ತಿರುತ್ತಾರೆ). ದತ್ತು ಸ್ವೀಕಾರದ ನಂತರ 'ಗುರು'ವಿನ ಹೆಸರು 'ಶ್ರೀನಿವಾಸ' ಎಂದು ಬದಲಾಯಿತು. ಅಕ್ಕ-ತಮ್ಮನ ಸಂಸಾರ ಎರಡೂ ಸೇರಿ ಒಟ್ಟಿಗೆ ದೊಡ್ಡ ಕುಟುಂಬ. ಸಾರಂಗಿ ವೆಂಕಟರಾಮಯ್ಯನವರೆಂದರೆ ಸುತ್ತಲ ಹತ್ತು ಹಳ್ಳಿಯಲ್ಲಿ ಬಹಳ ಪ್ರಸಿದ್ಧರಾಗಿದ್ದರು. ತುಮಕೂರಿನಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕಾಗಿಯೇ ದೊಡ್ಡ ಮನೆ 'ಸ್ವರಾಜ್ಯ ಭವನ' ಕೊಂಡಿದ್ದರು. ಅತ್ತೆಯ ಇಬ್ಬರು ಗಂಡುಮಕ್ಕಳು ಅಲ್ಲಿ ಓದುತ್ತಿದ್ದರು.

ಹಳ್ಳಿಯಲ್ಲಿ ಏನಾದರೂ ಸಮಾರಂಭ ನಡೆದಾಗ ನನ್ನ ತಂದೆಯವರ ಜೊತೆ ಚಿಕ್ಕ ಸಾರಂಗಿಗೆ ಕೆಲವೊಮ್ಮೆ ನಾನು ಹೋಗುತ್ತಿದ್ದೆ. ಅಲ್ಲಿಂದ ಬೆಂಗಳೂರಿಗೆ ಹಿಂತಿರುಗುವಾಗ ತುಮಕೂರಿನ ಮನೆಯಲ್ಲಿ ತಂಗುತ್ತಿದ್ದೆವು. ನಮ್ಮ ತಂದೆ ಸ್ನೇಹಿತರನ್ನು ಅರಸಿ ಹೊರಟರೆ ನಾನು ಆ ಮನೆಯಲ್ಲಿದ್ದ ಮರದ ಶೆಲ್ಫಿನಲ್ಲಿ ಸಿಕ್ಕಿಸಿದ್ದ ಸಣ್ಣ ಕಥೆಗಳು, ಕವನಗಳನ್ನು ಓದುತ್ತಲಿದ್ದೆ. ಅದು ನನ್ನ ಅತ್ತೆಯ ಎರಡನೆಯ ಮಗ (ಗುರು) ಬರೆದದ್ದೆಂದು ನನಗೇನೋ ಒಂದು ತಿಳಿಯಲಾರದ ಹೆಮ್ಮೆ ಹಾಗೂ ಆತ್ಮೀಯ ಭಾವನೆ ಚಿಗುರುತ್ತಿತ್ತು. ಹೈಸ್ಕೂಲಿನಲ್ಲಿರುವಾಗಲೇ ಒಳ್ಳೆಯ ಕತೆಗಾರ ಎಂದು ಹೆಸರು ಗಳಿಸಿ ಅನೇಕ ಬಹುಮಾನಗಳನ್ನು ಪಡೆದಿದ್ದರು. ಹಿಂದಿ ರಾಷ್ಟ್ರಭಾಷಾ ವಿಶಾರದ ಉತ್ತೀರ್ಣರಾಗಿದ್ದರು.

ಒಮ್ಮೆ ನಾನು ತುಮಕೂರಿಗೆ ಹೋಗಿದ್ದಾಗ ಕಾಲೇಜಿನ ಕಥಾ ಸ್ಪರ್ಧೆಯಲ್ಲಿ ಎರಡನೇ ಬಹುಮಾನ ಬಂದು ಸ್ನೇಹಿತರಿಗೆ ಸಿಹಿ ಕೊಡಿಸಿ ನನಗೂ ತಂದು

ಕೊಟ್ಟಿದ್ದರು. ನನ್ನ ಅಣ್ಣ ನರಸಿಂಹ ಮೂರ್ತಿ ಅವರ ಅನೇಕ ಕಥೆಗಳನ್ನು ತುಮಕೂರಿನಿಂದ ಬೆಂಗಳೂರಿಗೆ ತರಿಸಿಕೊಂಡು ಅನೇಕ ಪತ್ರಿಕೆಗಳಲ್ಲಿ ಪ್ರಕಟಿಸಲು ಕಾರಣನಾದ. (ಆಗ ಈಗಿನಷ್ಟು ಪತ್ರಿಕೆಗಳಿರಲಿಲ್ಲ).

ಅತ್ತೆಯ ದೊಡ್ಡ ಮಗನ (ಕಿಟ್ಟು) ಮದುವೆ ಕೆ.ಜಿ.ಎಫ್.ನಲ್ಲಿ ನಡೆಯಿತು. ಬೆಂಗಳೂರಿನಿಂದ ನಾವೆಲ್ಲಾ ಹೋಗಿದ್ದೆವು. ಅಲ್ಲಿ ಸೇರಿದ ಅತ್ತೆಯ ಮಕ್ಕಳ ಸ್ನೇಹಿತರು ಚಟುವಟಿಕೆಯಿಂದ ಓಡಾಡುತ್ತಿದ್ದ ನನ್ನ ಹೆಸರನ್ನು 'ಗುರು'ವಿನೊಡನೆ ಸೇರಿಸಿ 'ಮಿಸೆಸ್ ಗುರು' ಎಂದು ನನ್ನನ್ನು ಚುಡಾಯಿಸುತ್ತಿದ್ದರೆ ಹುಸಿಕೋಪದ ಜೊತೆಗೆ ಒಳಗೆ ಸಂತಸ ಪಡುತ್ತಿದ್ದೆ. ಹೀಗೆ ಮನದೊಳಗೆ ಕಟ್ಟುತ್ತಿದ್ದ ಕನಸು ಹಿರಿಯರ ಮಾತುಕತೆಯಿಂದ 13 ಮೇ 1956ರಲ್ಲಿ ನನಸಾಯಿತು. ನಮ್ಮ ತಂದೆಯವರಿಗೆ ಬ್ಯಾಂಕ್ ಕೆಲಸದಿಂದ ಬೆಂಗಳೂರಿನಿಂದ ಮೈಸೂರಿಗೆ ವರ್ಗವಾಗಿ ನಾವು ಅಲ್ಲಿ ಇದ್ದೆವು. ತುಮಕೂರಿನಲ್ಲಿ ಬಿ.ಎಸ್.ಸಿ. ಪೂರೈಸಿ ಬೆಂಗಳೂರಿನಲ್ಲಿರುವ ಅವರ ಅಕ್ಕನ ಮನೆಯಲ್ಲಿದ್ದು ಇವರು ಎ.ಎಂ.ಐ.ಇ. ಓದುತ್ತಿದ್ದರು. ನಮ್ಮ ಮದುವೆ ನಿಷ್ಕರ್ಷೆಯಾಗಿ ಒಂದು ವರ್ಷದ ನಂತರ ನಡೆದುದರಿಂದ ಆಗ ಅವರು ಆ ಒಂದು ವರ್ಷದಲ್ಲಿ ನನಗೆ ಬರೆದ ಪತ್ರಗಳನ್ನು ಪ್ರಕಟಿಸಿದ್ದರೆ ಒಂದು ಉತ್ತಮ ಕವನ ಸಂಕಲನವಾಗುತ್ತಿತ್ತು. ಅವರ ಸಾಹಿತ್ಯಕ್ಕೆ ಪ್ರೋತ್ಸಾಹವಿತ್ತಂತೆ ನಮ್ಮ ಮದುವೆಗೂ ನಮ್ಮಣ್ಣನ ಒತ್ತಾಸೆ ಬಹಳವಿತ್ತು.

ಬಾಲ್ಯದಿಂದಲೂ ನನಗೆ ಹಾಡಿನ ಜೊತೆಗೆ ಕಥೆ ಪುಸ್ತಕಗಳೆಂದರೆ ಬಹಳ ಇಷ್ಟ. ದಿನಕ್ಕೆ ಒಂದು ಕಾದಂಬರಿಯನ್ನಾದರೂ ಓದಬೇಕೆಂಬ ಹಠ. ಆ ಸಾಹಿತ್ಯಾಸಕ್ತಿ ಮುಂದುವರಿಯಿತು.

ನಮ್ಮ ಮದುವೆಯಾದ ಎರಡು ವರ್ಷಕ್ಕೆ ಹೆಣ್ಣುಮಗು (18–6–58) ಜನಿಸಿತು. ಮುದ್ದಾದ ಮಗುವಿಗೆ ಇವರ ಕಲ್ಪನೆಯಂತೆ 'ಕಲ್ಪನ' ಎಂದು ಹೆಸರಿಟ್ಟೆವು. ಮುದ್ದುಮಗು ಕಲ್ಪನಳ ನಗುವನ್ನು ನೋಡಿ ಸಂತೋಷ ಪಡುವ ವೇಳೆಗೆ ಇವರಿಗೆ ಅಕಸ್ಮಾತ್ತಾಗಿ ಕಾಣಿಸಿಕೊಂಡ ಜ್ವರ ಟೈಫಾಯಿಡ್ ಆಗಿ ಶ್ವಾಸಕೋಶದ ಹುಣ್ಣಿನ ಕಾಯಿಲೆ ಪ್ಲೂರಸಿಗೆ ತಿರುಗಿ ಆಸ್ಪತ್ರೆಯಲ್ಲಿ ಸುಮಾರು 2 ತಿಂಗಳಿರುವಂಥ ಪರಿಸ್ಥಿತಿ ಜೀವನದಲ್ಲಿ ಒದಗಿತು. ಸಣ್ಣ ವಯಸು. ಚಿಕ್ಕ ಮಗು. ಜನರ ಚುಚ್ಚು ಮಾತು. ಸಾಂತ್ವನದ ನುಡಿ ಯಾವುದೂ ನನಗೆ ಅರ್ಥವಾಗುತ್ತಿರಲಿಲ್ಲ. ಮುಂದಿನ ಭವಿಷ್ಯದ ಯೋಚನೆ! ಇವರು ಕೆಲಸಕ್ಕೆ ಸೇರಿದ ಹೊಸದು! ಆ ಅನಾರೋಗ್ಯದಲ್ಲೂ ಕಷ್ಟ, ಸುಖ ಎರಡರಲ್ಲೂ ಸಮಭಾಗಿಗಳಾಗಿ ಸ್ಥೈರ್ಯದಿಂದ ಎದುರಿಸುವ ಜೀವನ ಪಾಠವನ್ನು ಕಲಿಸಿದರು. ಆ ಒಂದು ವರ್ಷ

ನಾವು ಪಟ್ಟ ಕಷ್ಟದಿಂದ ಮುಂದಿನ ಜೀವನ ಸುಲಲಿತವಾಗಿ ಸುಖವಾಗಿ ನಡೆದರೂ ಕಷ್ಟ ಬಂದಾಗ ಕುಗ್ಗದೆ, ಸುಖ ಬಂದಾಗ ಹಿಗ್ಗದಂತೆ ಜೀವನಪಾಠ ಇವರಿಂದ ಕಲಿತೆ. 'ಕನ್ಯಾದಾನ' 'ಹಸಿರು ಮಂಟಪ' 'ಮಣ್ಣಿನ ಮಗ' ಕಾದಂಬರಿಗಳು ಪ್ರಕಟವಾದವು. ಅನೇಕ ಸಣ್ಣ ಕತೆಗಳು ಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತಿದ್ದವು. ಮಗಳಿಗೆ ಐದು ವರ್ಷವಾದಾಗ ಗಂಡು ಮಗು ಜನನ. ಅರುಣೋದಯದಲ್ಲಿ ಜನಿಸಿದುದರಿಂದ 'ಅರುಣ'ನೆಂದು ಹೆಸರಿಟ್ಟೆವು. ಆಗ ಇವರಿಗೆ ಬೆಂಗಳೂರಿನಿಂದ ಬೊಂಬಾಯಿಗೆ ವರ್ಗವಾಯಿತು.

ಬೊಂಬಾಯಿಯಲ್ಲಿ ಏಳು ವರ್ಷ ಇದ್ದೆವು. ಅಲ್ಲಿಯ ಏಳು ವರ್ಷಗಳು ಸಣ್ಣಪುಟ್ಟ ಪ್ರವಾಸಗಳ ಜೊತೆಗೆ ಅಲ್ಲಿಯ ಬಿಜಿ ಜೀವನದಿಂದ, ಜೀವನದ ವೈವಿಧ್ಯತೆಯ ಅಪಾರ ಅನುಭವ ನಮಗೆ ಒದಗಿತು. ಅಲ್ಲಿ ರಷ್ಯನ್ ಡಿಪ್ಲೊಮೊ ಓದಿದರು. ಅನೇಕ ಕಾದಂಬರಿಗಳನ್ನು ಬರೆದರು. ರೈಲಿನಲ್ಲಿ ದಿನವೂ ಹೋಗಿ ಬರುವಾಗ ಕತೆಗಳಿಗೆ ವಿಷಯಗಳು ಸಿಕ್ಕಿ ಇವರ ಲೇಖನಿಯ ಮೂಸೆಯಿಂದ ಹೊರಬಂದು ಅನೇಕ ಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತಿದ್ದುವು. ಬೊಂಬಾಯಿನಲ್ಲಿ ಮಿತ್ರ ಟಿ. ಎಸ್. ವೆಂಕಟೇಶ್‌ರವರೊಡನೆ ಮಾತುಂಗ ಕನ್ನಡ ಸಂಘದಲ್ಲೂ, ಸಾಹಿತ್ಯ ಕೂಟದಲ್ಲೂ ಭಾಗವಹಿಸುತ್ತಿದ್ದರು. ಬೊಂಬಾಯಿನ ನಮ್ಮ ರಸಜೀವನದ ಏಳು ವರ್ಷಗಳು ಏಳು ದಿನಗಳಂತೆ ಕಳೆದು ಹೋದುವು.

ಬೆಂಗಳೂರಿಗೆ ಹಿಂತಿರುಗಿ ಬಂದ ವರ್ಷದಲ್ಲಿ ಚಿಕ್ಕ ಮಗಳು 'ಕವಿತ'ಳ ಜನನ. 'ಏಷ್ಯನ್ ಟ್ರಾವಲ್ ಲೈನ್ಸ್'ನ ಮಾಲೀಕರಾದ ಶ್ರೀ ಹೆಚ್. ಎ. ನಾರಾಯಣ್‌ರವರು ಇವರ ಸಾಹಿತ್ಯ ಸೇವೆಗೆ ನೀರೆರೆದು ಮತ್ತಷ್ಟು ವಿಸ್ತಾರಗೊಳ್ಳಲು ಅನುವು ಮಾಡಿ ಕೊಟ್ಟರು.

1974ರಲ್ಲಿ ಹನುಮಂತ ನಗರದಲ್ಲಿ ನಮ್ಮ ಸ್ವಗೃಹವಾಯಿತು. ನನಗೂ ಸಾಹಿತ್ಯಾಸಕ್ತಿ ಇರುವುದರಿಂದ ಅವರ ಸಾಹಿತ್ಯ ಸೇವೆ ನನಗೆಂದೂ ಬೇಸರ ಉಂಟು ಮಾಡಿಲ್ಲ. ಗೆಳತಿ 'ನಿರುಪಮಾ' ಜೊತೆಯಲ್ಲಿ ಪ್ರಾರಂಭಿಸಿದ 'ಮಕ್ಕಳ ಸಾಹಿತ್ಯ ಪರಿಷತ್ತು' ಹನುಮಂತನಗರದ 'ಬನಶಂಕರಿ ಸಾಂಸ್ಕೃತಿಕ ಸಂಘ'ದ ಯಾವುದೇ ಕಾರ್ಯಕ್ರಮಕ್ಕೂ ಜೊತೆಯಲ್ಲೇ ಓಡಾಡುತ್ತೇವೆ. ಗೆಳತಿ ಗಾಯಿತ್ರಿಮೂರ್ತಿಯವರು ಹೇಳುತ್ತಿರುತ್ತಾರೆ. "ನೀವು ದಂಪತಿಗಳು ಒಟ್ಟಿಗ ಓಡಾಡುವುದನ್ನು ನೋಡಿದರೆ ಬಹಳ ಸಂತೋಷವಾಗುತ್ತೆ" ಎಂದು.

1980ರಲ್ಲಿ ಮಗಳು ಕಲ್ಪನಳ (ಬಿ.ಎಸ್.ಸಿ. ಓದಿದ ನಂತರ) ಮದುವೆ ಯಾಯಿತು. ದೇವರ ಕೃಪೆಯಿಂದ ಸುಗುಣಿಯೂ, ದೈವಭಕ್ತರೂ ಆದ ಒಳ್ಳೆಯ ಅಳಿಯ ದೊರೆತಿರುವುದು ನಮ್ಮ ಸುದೈವ.

ಮಾತು ಕಮ್ಮಿ, ಮೃದು ಹೃದಯ, ಸೂಕ್ಷ್ಮ ಸ್ವಭಾವದವರಾದ ನನ್ನ ಪತಿಯನ್ನು ಅನುಸರಿಸುವುದು ಒಮ್ಮೊಮ್ಮೆ ಕಷ್ಟವೆನಿಸಿದರೂ ಅವರ ಸಾಹಿತ್ಯಾಭಿಮಾನಿಗಳಲ್ಲಿ, ಓದುಗರಲ್ಲಿ ನಾನು ಮೊದಲಿಗಳೆಂಬ ಹೆಮ್ಮೆ ನನಗಿದೆ.

ಎಷ್ಟೋ ವೇಳೆ ಬರೆಯುತ್ತಿದ್ದವರು ಅರ್ಧರಾತ್ರಿಯಲ್ಲಿ ಎಬ್ಬಿಸಿ ಬರೆದುದನ್ನು ಓದಲು ಕೊಡುತ್ತಾರೆ. ನಿದ್ದೆಯನ್ನು ಹೊಡೆದೋಡಿಸಿ ಓದಿ ಅಭಿಪ್ರಾಯ ತಿಳಿಸಿದಾಗ ನನ್ನ ಮನಸ್ಸಿಗೂ ಹೆಮ್ಮೆಯ ಜೊತೆಗೆ ಸಂತಸವಾಗುತ್ತದೆ.

ನಾನು ನಾಟಕ, ಲೇಖನಗಳು ಯಾವುದೇ ಬರೆಯಲಿ ಮೊದಲ ಓದುಗರು ಅವರೇ. ಅದನ್ನು ತಾಳ್ಮೆಯಿಂದ ಓದಿ ತಪ್ಪು ತಿದ್ದಿ, ನನ್ನ ಕಿರು ಸಾಹಿತ್ಯ ಸೇವೆಗೆ ನೀರೆರೆದು ಪ್ರೋತ್ಸಾಹಿಸುತ್ತಾರೆ. ನನ್ನವರಿಗೆ ಪ್ರವಾಸದಲ್ಲಿ ಬಹಳ ಆಸಕ್ತಿ. ಒಮ್ಮೆ ಪ್ರವಾಸ ಹೋಗಿ ಬಂದರೆ ಅನೇಕ ಕತೆ ಕಾದಂಬರಿಗಳಿಗಾಗುವಷ್ಟು ವಿಷಯ ಸಿಗುವುದರ ಜೊತೆಗೆ ಜ್ಞಾನಾರ್ಜನೆಯೂ ಆಗುವುದರಿಂದ ನಾವು ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ, ಅಲ್ಲದೆ ನೇಪಾಳ, ಅಂಡಮಾನ್ ಪ್ರವಾಸಗಳನ್ನು ಮಾಡಲು ಅವಕಾಶ ದೊರೆಯಿತು. ಶಿಸ್ತಿನ ಸ್ವಭಾವದ ಅವರು ಅರ್ಧರಾತ್ರಿಯಾದರೂ ಹಿಡಿದ ಕೆಲಸ ಪೂರೈಸದೆ ನಿದ್ದೆ ಮಾಡುವುದಿಲ್ಲ. ಕಾದಂಬರಿಗಳನ್ನು ಬರೆಯುವಾಗ ರಾತ್ರಿ 11 ಘಂಟೆಯಿಂದ ಬೆಳಗಿನ 4 ಘಂಟೆಯವರೆಗೂ ಬರೆದು ಬೆಳಗ್ಗೆ 7–30 ಕ್ಕೆ ಉತ್ಸಾಹದಿಂದ ಆಫೀಸಿಗೆ ಹೋಗುತ್ತಿದ್ದುದುಂಟು. ಮಧ್ಯೆ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುವುದಿಲ್ಲವೆಂದು ಸಣ್ಣ ಜಗಳ ಆಗುತ್ತಿರುವುದುಂಟು. ಆದರೂ ಕಾಯಕವೇ ಕೈಲಾಸವೆಂದು ನಂಬಿರುವ ಅವರಿಗೆ ಸೋಮಾರಿತನವೆಂಬುದು ಹತ್ತಿರವೂ ಸುಳಿಯುವುದಿಲ್ಲ.

ಆಫೀಸಿನ ಕೆಲಸದಲ್ಲೂ ಅನೇಕ ಅವಿಷ್ಕಾರಗಳನ್ನು ಮಾಡಿ ಪ್ರಶಸ್ತಿಗಳನ್ನು ಪಡೆದು ಹೆಸರು ಮಾಡಿದ್ದಾರೆ.

ಈಗ ರಿಟೈರ್ಡ್ ಆಗಿ ಕೆಲ ವರ್ಷಗಳೇ ಕಳೆದಿದ್ದರೂ ಮಕ್ಕಳ ಸಾಹಿತ್ಯ ಪರಿಷತ್ತು ಮತ್ತು ಪ್ರಕಾಶಕರ ಸಂಘ, ಬನಶಂಕರಿ ಸಾಂಸ್ಕೃತಿಕ ಸಂಘದ ಕೆಲಸದ ಜೊತೆಗೆ ಮನೆಯಲ್ಲೂ ಏನಾದರು ಬರೆಯುತ್ತಿರುತ್ತಾರೆ.ತೋಟಗಾರಿಕೆಯೂ ಅವರಿಗೆ ಇಷ್ಟವಾದ ಹವ್ಯಾಸ.

ಮಗನಿಗೆ ಒಳ್ಳೆಯ ಕೆಲಸವಾಗಿದೆ. ಚಿಕ್ಕ ಮಗಳು ಕವಿತಾ *B.Sc.* ಆದ ಮೇಲೆ ಇಬ್ಬರೂ ಮಕ್ಕಳ ಮದುವೆಮಾಡಿ ನಮ್ಮ ಜವಾಬ್ದಾರಿ ಪೂರೈಸಿದ ನೆಮ್ಮದಿ ನಮಗೆ ದೊರಕಿದೆ. ಒಳ್ಳೆಯ ಸೊಸೆ, ಒಳ್ಳೆಯ ಅಳಿಯಂದಿರು ಸಿಕ್ಕಿರುವುದು ನಮ್ಮ ಸುಕೃತ.

ಸಾಹಿತ್ಯದಲ್ಲೂ ರಾಜಕೀಯ ಮಾಡಿದರೆ ಹೆಸರು ಮಾಡಬಹುದೆಂಬ ನೀತಿ ಗೊತ್ತಿದ್ದರೂ ಪ್ರತಿಭೆಗೆ ಎಂದಿಗೂ ಪುರಸ್ಕಾರವಿದೆ ಎಂಬ ಅಚಲ ನಂಬಿಕೆಯುಳ್ಳ ಇವರಿಗೂ, ರಾಜಕೀಯಕ್ಕೂ ಬಹಳ ದೂರ.

ಬಂಧುಗಳು, ಸುಸಂಸ್ಕೃತ ಸ್ನೇಹಿತರು ನಮ್ಮಲ್ಲಿ ಬಹಳ ವಿಶ್ವಾಸವಿಟ್ಟಿರುವುದು ನಮಗೆ ಹೆಮ್ಮೆಯ ವಿಷಯ.

ವೃತ್ತಿಯಿಂದ ನಿವೃತ್ತರಾದರೂ, ಪ್ರವೃತ್ತಿಯಲ್ಲಿ ನಿವೃತ್ತರಾಗದಂತೆ ಇನ್ನೂ ಹೆಚ್ಚಿನ ಯಶಸ್ಸು ಗಳಿಸಲಿ ಎಂಬುದೇ ನಾನು ಭಗವಂತನಲ್ಲಿ ಬೇಡುವುದು.



# ಪ್ರೀತಿಯ ಅಣ್ಣ

—ಕವಿತಾ ವೇಣುಗೋಪಾಲ್

ನಾನು ನನ್ನ ತಂದೆ ಶ್ರೀ ಎಸ್. ವಿ. ಶ್ರೀನಿವಾಸರಾಯರ ಕಡೆಯ ಪುತ್ರಿ. ನಾವು ನಮ್ಮ ತಂದೆಯನ್ನು ಪ್ರೀತಿಯಿಂದ 'ಅಣ್ಣಾ' ಎಂದು ಕರೆಯುತ್ತೇವೆ.

ನಮ್ಮ ತಂದೆ ಸ್ವಭಾವತಃ ಬಹಳ ಶಾಂತ ಸ್ವಭಾವದವರು ಹಾಗೂ ಮಿತಭಾಷಿ. ಆದರೆ ಒಮ್ಮೊಮ್ಮೆ ಅವರಿಗೆ ಬಹಳ ಕೋಪ ಬರುವುದನ್ನು ಕಂಡಿದ್ದೇನೆ. ಶಿಸ್ತಿನ ಸ್ವಭಾವದವರಾದ ಅವರಿಗೆ ನಮ್ಮಲ್ಲಿ ಅಶಿಸ್ತನ್ನು ಕಂಡಾಗ ಬಹಳ ಕೋಪ ಬರುತ್ತದೆ ಎಂದು ನಮ್ಮಮ್ಮ ನನಗೆ ಬೈಯುತ್ತಿದ್ದರು.

ಅವರಿಗೆ ಸೋಮಾರಿತನವೆಂದರೆ ಆಗುವುದಿಲ್ಲ. *CIL* ನಲ್ಲಿ ಸೈಂಟಿಫಿಕ್ ಆಫೀಸರ್ ಆಗಿ ಕೆಲಸ ಮಾಡುತ್ತಿದ್ದ ಅವರು ಆಫೀಸಿನಿಂದ ಬಂದ ತಕ್ಷಣ ಸಾಹಿತಿಯಾಗಿ ಪರಿವರ್ತನೆಗೊಳ್ಳುತ್ತಿದ್ದರು. ಸ್ವಲ್ಪವೂ ವಿಶ್ರಾಂತಿ ಇಲ್ಲದೆ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗುತ್ತಿದ್ದರು. ಅವರು ಸರ್ಕಾರಿ ಹುದ್ದೆಯಲ್ಲಿದ್ದಾಗ ರಾತ್ರಿ 1 ಘಂಟೆ ಅಥವಾ 2 ಘಂಟೆ ವರೆಗೆ ಬರೆಯುತ್ತಾ ಕುಳಿತಿರುತ್ತಿದ್ದರು. ಆಗ ನಾನು ಕೂಡ ಅವರ ಜೊತೆ ಎದ್ದು ಓದಿಕೊಳ್ಳುತ್ತಿದ್ದೆ. ಆಗಾಗ ನಾನು ಓದುತ್ತಿದ್ದೇನೆಯೊ ಇಲ್ಲವೊ ಎಂದು ಬಂದು ನೋಡುತ್ತಿದ್ದರು. ನಾನು ತೂಕಡಿಸುತ್ತಿದ್ದಾಗ ದೀಪ ಆರಿಸಿ ಹೋಗುತ್ತಿದ್ದರು. ತಕ್ಷಣವೇ ನನಗೆ ಎಚ್ಚರವಾಗಿ ಹೊಸ ಉತ್ಸಾಹದಿಂದ ಓದುತ್ತಾ ಕುಳಿತುಕೊಳ್ಳುತ್ತಿದ್ದೆ.

ನಮ್ಮ ತಂದೆ ನಮಗೆ ಓದು, ಕ್ರೀಡೆ, ಸಂಗೀತ, ಕುಶಲ ಕಲೆ, ಸಾಹಿತ್ಯ ಎಲ್ಲದರಲ್ಲೂ ಪ್ರೋತ್ಸಾಹ ನೀಡುತ್ತಿದ್ದರು. ತಮ್ಮ ಸ್ನೇಹಿತರ ಮಕ್ಕಳ ಬುದ್ಧಿವಂತಿಕೆಗಳನ್ನು ಹೊಗಳಿ ನಮಗೆ ಉತ್ತೇಜನ ಕೊಡುತ್ತಿದ್ದರು. ನಮ್ಮ ತಂದೆ ಹಾಗೂ ತಾಯಿ ಭಾಗವಹಿಸುತ್ತಿದ್ದ ಸಾಂಘಿಕ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ನಮಗೂ ಅವಕಾಶ ಕಲ್ಪಿಸಿ ಪ್ರೋತ್ಸಾಹಿಸುತ್ತಿದ್ದರು. ಈ ಪ್ರೋತ್ಸಾಹದಿಂದಲೇ ನಮ್ಮ ಅಕ್ಕ *NCC* ಸೇರಿದ್ದುದು. ಕಾಲೇಜಿನ ನಾಟಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದುದು. ನನ್ನ ಅಣ್ಣ ಒಳ್ಳೆಯ ಕ್ರಿಕೆಟ್ ಆಟಗಾರನಾಗಿ ರೂಪುಗೊಂಡಿರುವುದು, ಒಳ್ಳೆಯ ಮೃದಂಗವಾದಕನಾಗಿರುವುದು. ಹಾಗೂ ನಮ್ಮ ತಾಯಿ ಸಹ ಸಾಹಿತ್ಯಕೃಷಿಯಲ್ಲಿ ತೊಡಗಿರುವುದು. ನಮ್ಮ ತಾಯಿಯೇ ನಮ್ಮ ತಂದೆಯ ಎಲ್ಲ ಕೃತಿಗಳ

ಪ್ರಥಮ್ವ್ಯಓದುಗಳು ಹಾಗು ವಿಮರ್ಶಕಳು. ಅವರು *AMIE* ಓದಿದ್ದರಿಂದ ಅವರಿಗೆ **science**ನ ಬಗ್ಗೆ ಬಹಳ ಜ್ಞಾನವಿದೆ. ಆದ್ದರಿಂದ ಬಹಳ ಸಲ ನಮಗೆ ಅರ್ಥವಾಗದಿದ್ದನ್ನು ನಾವು ಅವರ ಹತ್ತಿರ ಕೇಳುತ್ತಿದ್ದೆವು. ಆದರೆ ಪಾಠ ಹೇಳಿಕೊಡಿರೆಂದು ಅವರ ಬಳಿ ಹೋದಾಗ ಅವರು ಹಿಂದಿನ ಪಾಠಗಳನ್ನೆಲ್ಲಾ ಕೇಳುತ್ತಿದ್ದರು.ಆದ್ದರಿಂದ ನಾವು ಹೆದರಿ ಅವರ ಬಳಿ ಪಾಠ ಹೇಳಿಸಿಕೊಳ್ಳಲು ಹೋಗಲೇ ಅಂಜುತ್ತಿದ್ದೆವು.

ನನಗೆ ತಿಳಿದ ಹಾಗೆ ನಮ್ಮ ತಂದೆ ಬಹಳ ವಿಶಾಲ ಹೃದಯಿಗಳು. ನಮಗೆ ಮನೆಯಲ್ಲಿ ಪೂರ್ಣ ಸ್ವಾತಂತ್ರ್ಯವನ್ನು ನೀಡಿದ್ದರು. ಬಾಳಿನ ಗೊತ್ತುಗುರಿಗಳನ್ನು ನಾವೇ ನಿರ್ಧರಿಸಬೇಕು ಎಂಬುದೇ ಅವರ ಆಶಯ. ಓದಿ ಸೇರಿದ ಮನೆಗೂ, ದೇಶಕ್ಕೂ ಒಳ್ಳೆ ಹೆಸರು ತರಬೇಕೆಂದು ಹೇಳುತ್ತಿರುತ್ತಾರೆ.

ಅವರಿಗೆ ಸೋಮಾರಿತನವೆಂದರೆ ಆಗುವುದಿಲ್ಲ. ಆದ್ದರಿಂದ ಭಿಕ್ಷುಕರನ್ನು ಕಂಡರೆ ಕಡು ಕೋಪ. ಭಿಕ್ಷುಕ ಮಕ್ಕಳಿಗೆ ನಾವು ಏನಾದರೂ ಕೊಟ್ಟರೆ "ಅವರನ್ನು ಇಡೀ ಜೀವಮಾನ ಭಿಕ್ಷುಕರಾಗೇ ಇರಲು ಪ್ರೋತ್ಸಾಹಿಸುತ್ತೀರಿ ಎಂದು" ಬೈಯ್ಯುತ್ತಿರುತ್ತಾರೆ. ಅನ್ಯಾಯ ಅನೀತಿಗಳನ್ನು ಸಹಿಸರು. ಭಿಕ್ಷುಕರಿಗೆ ನೀಡುವ ಪ್ರೋತ್ಸಾಹವನ್ನು ಬಡ ವಿದ್ಯಾರ್ಥಿಗಳಿಗೆ ನೀಡಿ ಎಂದು ಹೇಳುತ್ತಿರುತ್ತಾರೆ. ನಮ್ಮ ತಂದೆ ಈ ವಯಸ್ಸಿನಲ್ಲೂ ದಿನವೂ ವ್ಯಾಯಾಮ ಮಾಡುತ್ತಾರೆ. ಬೆಳಗ್ಗೆ 5 ಘಂಟೆಗೆ ಎದ್ದು 'ವಾಕಿಂಗ್' ಹೋಗಿ ಬರುತ್ತಾರೆ. ತೋಟಗಾರಿಕೆಯಲ್ಲಿ ಅವರಿಗೆ ಅತೀವ ಆಸಕ್ತಿ. ಈ ಗಿಡಗಳಿಗಾಗಿ ಒಂದೆರಡು ಗಂಟೆ ವ್ಯಯಿಸುತ್ತಾರೆ. ಮನೆಯಲ್ಲಿ ಇದ್ದಷ್ಟು ಕಾಲವೂ ಒಂದಲ್ಲ ಒಂದು ಕೆಲಸ ಹುಡುಕಿಕೊಂಡು ಮಾಡುತ್ತಿರುತ್ತಾರೆ. ಇಲ್ಲವೆ ಓದುತ್ತಿರುತ್ತಾರೆ. ಅಥವಾ ಬರೆಯುತ್ತಿರುತ್ತಾರೆ.

ಅವರಿಗೆ ಯಾವ ಕೆಟ್ಟ ಅಭ್ಯಾಸಗಳೂ ಇಲ್ಲ. ಅವರು ದುಶ್ಚಟಗಳನ್ನು ದ್ವೇಷಿಸುತ್ತಾರೆ. ಒಟ್ಟಿನಲ್ಲಿ ಹೇಳುವುದಾದರೆ ನಮ್ಮ ತಂದೆ ನಮಗಂತೂ ಒಳ್ಳೆಯ ಆದರ್ಶ ವ್ಯಕ್ತಿ. ಇಂಥವರ ಮಗಳೆಂದು ಹೇಳಿಕೊಳ್ಳಲು ನಾನು ನಿಜವಾಗಲೂ ಹೆಮ್ಮೆ ಪಡುತ್ತೇನೆ.

# ಸಂಘ ಸಂಸ್ಥೆಗಳಲ್ಲಿ ಶ್ರೀ ಶ್ರೀನಿವಾಸರಾವ್

—ಜಗನ್ನಾಥ ಹೇಮಾದ್ರಿ

ಉಪಯುಕ್ತ ಕಾರ್ಯಗಳನ್ನು ನಿರಂತರವಾಗಿ ಮಾಡುತ್ತಿರುವವರಿಗೆ ನಾವು ಕೊಡುವ ಉಪಮೆ 'ಜೇನು ಹೂ ಸಂಗ್ರಹಿಸುತ್ತಿರುವಂತೆ' ಅವರ ಕೆಲಸ ಎಂದು. ಅಂತಹ "ಜೇನಿನ ಕಾರ್ಯ"ದಲ್ಲಿ ನಿರತರಾಗಿರುವವರು ಶ್ರೀ ಎಸ್. ವಿ. ಶ್ರೀನಿವಾಸ ರಾವ್ ಅವರು. ಈ ಗುಣ ಅವರಿಗೆ ಹುಟ್ಟಿನಿಂದಲೇ ಬಂದಿರುವಂತಿದೆ. ಬಾಲ್ಯ ದಿಂದಲೇ ಓದಿನ ಜೊತೆಗೆ ಇತರ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡು ನಿರಂತರ ಚಟುವಟಿಕೆಗಳಲ್ಲಿದ್ದುದೇ ಇದಕ್ಕೆ ಸಾಕ್ಷಿ.

1947-48ನೇ ಇಸವಿ. ತುಮಕೂರಿನ ಆರ್ಯನ್ ಹೈಸ್ಕೂಲಿನಲ್ಲಿ ಇವರು ಓದುತ್ತಿದ್ದಾಗ ಆ ವಿದ್ಯಾಸಂಸ್ಥೆಯಲ್ಲಿ "ಕನ್ನಡ ಸಂಘ" ಸ್ಥಾಪಿಸಿದರು. ಅನೇಕ ಪ್ರತಿಭಾವಂತ ಸಹಪಾಠಿಗಳಿಗೆ ಪಠ್ಯೇತರ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಅವಕಾಶ ಕಲ್ಪಿಸಿದರು. ಅಲ್ಲಿ ಓದುತ್ತಿದ್ದಷ್ಟೂ ಕಾಲ ಇವರೇ ಸಂಘದ ಕಾರ್ಯಗಳನ್ನು ಸಮರ್ಥವಾಗಿ ನಿರ್ವಹಿಸಿ ಸೈ ಎನ್ನಿಸಿಕೊಂಡರು.

ಉತ್ತರ ಕರ್ನಾಟಕ ಮೊದಲು ಹಿಂದಿ, ಉರ್ದು ಹಾಗೂ ಮರಾಠಿ ವಲಯ ದೊಳಗಿದ್ದುದರಿಂದ ಆ ಭಾಗದಲ್ಲಿ ಹಿಂದಿ ಭಾಷೆ ಈಗಲೂ ಸಾಕಷ್ಟು ಪ್ರಚಲಿತ ದಲ್ಲಿದೆ. ಆದರೆ ದಕ್ಷಿಣ ಕರ್ನಾಟಕದಲ್ಲಿ ಹಿಂದಿ ಭಾಷೆಗೆ ಅಷ್ಟು ಪ್ರಾಬಲ್ಯವಿಲ್ಲ. ಅಂತಹುದರಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರಂತಹ ಈ ಭಾಗದ ಕೆಲವು ಮಂದಿ ಹಿಂದಿಯನ್ನು ಇಷ್ಟಪಟ್ಟು ಕಲಿತರು. ಅದರಿಂದ ಮುಂದೆ ಅವರಿಗೆ ನೆರವೂ ಆಯಿತು. ತುಮಕೂರಿನ ಪ್ರಥಮದರ್ಜೆ ಕಾಲೇಜಿನಲ್ಲಿ ಓದು ಮುಂದುವರಿಸಿದರೂ ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಹಿಂದಿಯ ಬಗೆಗೆ ಸಾಕಷ್ಟು ಪರಿಶ್ರಮ ಹೊಂದಿದ್ದ ಇವರು 1951 ರಿಂದ 1953ರ ಅವಧಿಯಲ್ಲೆ ಕಾಲೇಜಿನ ಹಿಂದಿ ಅಸೋಸಿಯೇಷನ್ ಕಾರ್ಯದರ್ಶಿಯೂ ಆದರು. ಜೊತೆಗೆ ಅದೇ ಕಾಲೇಜಿನ ಕನ್ನಡ ಸಂಘದೊಡನೆಯೂ ನಿಕಟ ಸಂಪರ್ಕವಿರಿಸಿಕೊಂಡು ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತ ಬಂದರು. ಮುಂದೆ ಬೆಂಗಳೂರಿಗೆ ಬಂದು ನೆಲಸಿದ ನಂತರ ಮಲ್ಲೇಶ್ವರಂ ಬಡಾವಣೆಯಲ್ಲಿ ಮಿತ್ರವೃಂದ

ಸಂಸ್ಥೆಯನ್ನು 1960ರಲ್ಲಿ ಸ್ಥಾಪಿಸಿದರು. ಅನೇಕ ಸಾಹಿತ್ಯಿಕ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿದರು. 1986ರ ವರೆಗೂ ಈ ಸಂಸ್ಥೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ತಾವು ಉದ್ಯೋಗದಲ್ಲಿದ್ದ "ಸಿ.ಐ.ಎಲ್."ನ ಫೈನ್ ಆರ್ಟ್ಸ್ ಕ್ಲಬ್‌ನ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ರಕ್ಷಣಾ ಇಲಾಖೆಯ ಈ ಸಂಘದಲ್ಲಿ ಇವರು 1978 ರಿಂದ 1989 ರವರೆಗೆ ಮಹತ್ವದ ಪಾತ್ರ ನಿರ್ವಹಿಸಿದರು. ನಾಟಕ, ಲಘುಸಂಗೀತ, ನೃತ್ಯ ಇತ್ಯಾದಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಯಶಸ್ವಿಯಾಗಿ ಪ್ರದರ್ಶಿಸಿದರು. ಆಕಾಶವಾಣಿ, ದೂರದರ್ಶನದ ಮೂಲಕ ಫೈನ್ ಆರ್ಟ್ಸ್ ಕ್ಲಬ್‌ನ ಕಾರ್ಯಕ್ರಮಗಳು ಪ್ರಸಾರವಾಗಲು ಮುಂಚೂಣಿಯಲ್ಲಿ ನಿಂತು ದುಡಿದರು. ಸಂಸ್ಥೆಯಲ್ಲಿ ಗ್ರಂಥಭಂಡಾರ ಸ್ಥಾಪಿಸಿದ ಕೀರ್ತಿ ಇವರದಾಗಿದೆ.

1962 ರಿಂದ 1969ರ ವರೆಗೆ ಮುಂಬಯಿಯಲ್ಲಿದ್ದ ಕಾಲದಲ್ಲಿ ಮಾತುಂಗ ಕನ್ನಡ ಸಂಘ, ಭಾಂಡುಪ್ ಕನ್ನಡ ಸಂಘ, ಮಾಹಿಮ್ ಕನ್ನಡ ಸಂಘ, ಮಾತುಂಗದ ಮೈಸೂರು ಅಸೋಸಿಯೇಷನ್‌ಗಳೊಡನೆ ನಿಕಟ ಸಂಪರ್ಕ ಇರಿಸಿಕೊಂಡಿದ್ದರು. ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಿದ್ದರು.

ತಾವು ಉದ್ಯೋಗದಲ್ಲಿದ್ದ ರಕ್ಷಣಾ ಇಲಾಖೆಯ ನೌಕರರ ಸಂಘದಲ್ಲಿ (ಸಿ.ಐ.ಎಲ್. ಎನ್.ಜಿ.ಓಸ್ ಅಸೋಸಿಯೇಷನ್) 6 ವರ್ಷ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. 1979 ರಿಂದ 1989ರ ವರಗೆ ಸಿ.ಐ.ಎಲ್. ಆಫೀಸರ್ಸ್ ಅಸೋಸಿಯೇಷನ್ನಿನ ಜೆ.ಸಿ.ಎಂ. ಹಾಗೂ ಎಂ.ಸಿ.ಎಂ. ಕಮಿಟಿಗಳಲ್ಲಿ ಸದಸ್ಯರಾಗಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸಿದರು.

ಶ್ರೀ ಎಸ್. ವಿ. ಶ್ರೀನಿವಾಸರಾಯರ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂಘಟಿಸುವ ಮಹಾತ್ವಾಕಾಂಕ್ಷೆಯ ನಿಸ್ಪೃಹ ಕಾರ್ಯ, ಅವರು ನೆಲೆ ನಿಂತಲ್ಲೆಲ್ಲಾ ಮುಂದುವರಿಯಿತು. ಬೆಂಗಳೂರಿನ ಬನಶಂಕರಿ 1ನೇ ಹಂತ ಬಡಾವಣೆಯಲ್ಲಿ ಅವರ ನಿವಾಸ. "ಬನಶಂಕರಿ ಸಾಂಸ್ಕೃತಿಕ ಸಂಘ"ದ ಸದಸ್ಯರಾಗಿ, ಕಾರ್ಯದರ್ಶಿಯಾಗಿ, ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ ಶ್ರೀನಿವಾಸರಾಯರು ಪ್ರಸ್ತುತ (1994) ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಪ್ರಾರಂಭದಿಂದಲೂ ಮಕ್ಕಳ ಸಾಹಿತ್ಯದ ಬಗೆಗೆ, ಸಾಂಸ್ಕೃತಿಕ ಚಟುವಟಿಕೆಗಳ ಬಗ್ಗೆ ಚಿಂತಿಸುತ್ತ, ಆ ಕ್ಷೇತ್ರದಲ್ಲಿ ಸಾಕಷ್ಟು ಕೃಷಿ ಮಾಡಿರುವ ಶ್ರೀನಿವಾಸರಾಯರಿಗೆ

ಇದಕ್ಕೆ ಒಂದು ಸೂಕ್ತ ವೇದಿಕೆ ನಿರ್ಮಿಸಿದರೆ ಹೆಚ್ಚು ಉಪಯುಕ್ತ ಕಾರ್ಯಗಳನ್ನು ಮಾಡಬಹುದೆಂಬ ಯೋಚನೆ ಹೊಳೆದಿರಬೇಕು. ಅದರ ಫಲವೇ 1984 ರಲ್ಲಿ ಸ್ಥಾಪನೆಗೊಂಡ "ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತು". ಸ್ಥಾಪಕ ಕಾರ್ಯದರ್ಶಿಯಾಗಿ ಮಕ್ಕಳ ಸಾಹಿತ್ಯ ಪರಿಷತ್ತಿನ ಹತ್ತು ಹಲವು ಯೋಜನೆಗಳಲ್ಲಿ, ಕಾರ್ಯಕ್ರಮಗಳಲ್ಲಿ ಅವಿರತವಾಗಿ ಶ್ರಮಿಸುತ್ತಿದ್ದಾರೆ. ಕಮ್ಮಟಗಳು, ವಿಚಾರ ಸಂಕಿರಣಗಳು, ಸಮ್ಮೇಳನಗಳು, ಪುಸ್ತಕ ಪ್ರಕಟಣೆಗಳು, ಅನ್ಯಭಾಷಾ ಮಕ್ಕಳ ಸಾಹಿತ್ಯ ಸಮ್ಮೇಳನಗಳು, ಸ್ಪರ್ಧೆಗಳು. ಹೀಗೆ ವೈವಿಧ್ಯಮಯ ಚಟುವಟಿಕೆಗಳನ್ನು ನಡೆಸುತ್ತಿದ್ದಾರೆ. ಇವುಗಳ ಹಿನ್ನೆಲೆಯಲ್ಲಿ ಶ್ರೀನಿವಾಸರಾಯರ ಕತೃತ್ವಶಕ್ತಿ ಎದ್ದುಕಾಣುತ್ತದೆ (ಶ್ರೀಮತಿ ನಿರುಪಮಾ ಇದರ ಅಧ್ಯಕ್ಷೆ.)

ಕನ್ನಡ ಪುಸ್ತಕ ಪ್ರಕಾಶನದ ಸಮಸ್ಯೆಗಳನ್ನು ಚರ್ಚಿಸಿ, ಅವುಗಳಿಗೆ ಪರಿಹಾರ ರೂಪಿಸಿ, ಆ ದಿಸೆಯಲ್ಲಿ ಕಾರ್ಯಪ್ರವೃತ್ತವಾಗುವ ಸದುದ್ದೇಶದಿಂದ ಸ್ಥಾಪಿತಗೊಂಡಿರುವ ಸಂಸ್ಥೆ, "ಕರ್ನಾಟಕ ಪ್ರಕಾಶಕರ ಸಂಘ". ಶ್ರೀನಿವಾಸರಾಯರು 1986 ರಿಂದ ಈ ಸಂಘದಲ್ಲಿ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಪುಸ್ತಕ ಪ್ರದರ್ಶನ-ಮಾರಾಟ, ಲೇಖಕ-ಪ್ರಕಾಶಕರ ಕುಂದು ಕೊರತೆಗಳು, ಸಮಸ್ಯೆಗಳು ಇವುಗಳ ಬಗೆಗೆ ಚರ್ಚಾಗೋಷ್ಠಿ, ವಿಚಾರ ಸಂಕಿರಣ ಮುಂತಾದವುಗಳನ್ನು ಏರ್ಪಡಿಸಿ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಶ್ರೀ ಎಸ್. ವಿ. ಶ್ರೀನಿವಾಸರಾಯರ ಪ್ರಾಮಾಣಿಕತೆ, ನಿಸ್ಪೃಹ ದುಡಿಮೆಗೆ ಅರಿಸಿಕೊಂಡುಬಂದ ಇನ್ನೊಂದು ಸೇವಾಹುದ್ದೆ. ಕನ್ನಡಿಗರ ನುಡಿ ದೇಗುಲವಾದ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕೋಶಾಧ್ಯಕ್ಷ ಸ್ಥಾನ. 1989 ರಿಂದ 1992ರ ವರೆಗಿನ ಈ ಅವಧಿ ಅವರ ಸಹನೆ ಹಾಗೂ ಕಠಿಣ ಶ್ರಮಕ್ಕೆ ಸವಾಲಾಗಿತ್ತು. ಪ್ರತಿ ತಿಂಗಳು ನೌಕರರ ವೇತನಕ್ಕೂ ಕಷ್ಟಪಡಬೇಕಾದ ಪರಿಷತ್ತಿನ ಶೋಚನೀಯ, ಆರ್ಥಿಕ ಪರಿಸ್ಥಿತಿಯಲ್ಲಿಯೂ ಅವರು ಎಲ್ಲಿಯೂ ಒಂದಿನಿತೂ ಕೊಂಕು ಬಾರದಂತೆ ಚಾಕಚಕ್ಯತೆಯಿಂದ ನಿಭಾಯಿಸಿದ ರೀತಿ ಅನುಕರಣೀಯ.

ಶ್ರೀ ಎಸ್. ವಿ. ಶ್ರೀನಿವಾಸರಾಯರದು ದಯಾರ್ದ್ರ ಹೃದಯ. ನಿರ್ಮಲ ಮನಸ್ಸು. ನಿಸ್ಪೃಹ ಕೈಂಕರ್ಯದಾಕಾಂಕ್ಷೆ. ಇವೇ ಅವರ ಆರೋಗ್ಯಕರ ಮೈ-ಮನಸ್ಸುಗಳ ದ್ಯೋತಕ, ಶ್ರೀಯುತರಿಂದ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕನ್ನಡ ಸಾರಸ್ವತ, ಸಾಂಸ್ಕೃತಿಕ ಲೋಕಕ್ಕೆ ಸೇವೆ ಸಲ್ಲಲಿ ಎಂಬುದು ಅವರ ಅಭಿಮಾನಿಗಳೆಲ್ಲರ ಆಸೆ. ಅಂತೆಯೇ ಪ್ರಾರ್ಥನೆ ಕೂಡ.



# ಧರ್ಮರಾಯ

—ನ. ಚಕ್ರಪಾಣಿ

'ಏನ್ ಅಜ್ಜಿ ಆರೋಗ್ಯಾನ ?' 'ಬಿದ್ದ್ಹೋಗೋಮರ ಹೆಂಗಿದ್ರೇನ. ಬೆಳಿಯೊ ಮೊಗ ನೀ ಚೆಂದ್ಹಾಗಿದ್ದೀಯಪಾ ?' ಅಂದಳು. ತುಂಬುಜೀವನ ನಡೆಸಿರೊ ವ್ಯಕ್ತಿತ್ವದ ಮಾಗಿ ಹಣ್ಣಾದ ಮಾತದು.

ಆ ಎತ್ತರಕ್ಕೆ ಬೆಳೆದಿದ್ದ ಮತ್ತೊಬ್ಬ ವ್ಯಕ್ತಿಯನ್ನು ನಾನು ಕಂಡದ್ದು, ಸಾಹಿತ್ಯ ಪರಿಷತ್ತಿನಲ್ಲಿ. ಪರಿಷತ್ತಿನ ಗೌರವ ಕೋಶಾಧ್ಯಕ್ಷ ಎಸ್. ವಿ. ಶ್ರೀನಿವಾಸರಾಯರಲ್ಲಿ ಮೃದು ಮಾತಿನ ಸಣ್ಣಕ್ಷರದ, ದೊಡ್ಡ ಮನಸ್ಸಿನ ವ್ಯಕ್ತಿ.

ಮೇಷ್ಟ್ರು ಹೇಳ್ತಾ ಇದ್ರು, ನಿನ್ನ ಮುಖಾನ ಓದಬಲ್ಲೆ ನಾನು ಅಂತ, ಹಾಗೇನಾದ್ರು ನೀವು ಶ್ರೀನಿವಾಸರ ಮುಖವನ್ನು ಕೇವಲ ಮುಖಲಕ್ಷಣದಿಂದ ಓದಿದರೆ ಬೇಸ್ತುಬಿದ್ದ ಹಾಗೇನೆ, ಕಾರಣ ಹೃದಯ ಸಂಪತ್ತಿಗೂ, ಮುಖಭಾವಕ್ಕೂ ಅರ್ಥಾತ್ ಸಂಬಂಧವಿಲ್ಲ.

ಹುಬ್ಬು ಗಂಟ್ಹಾಕಿದ ರೀತಿ,ಕನ್ನಡಕ ಬೇರೆ ಇರುವುದರಿಂದ ಇನ್ನೂ ಸೀರಿಯಸ್ ಆಗಿ ಕಾಣುತ್ತಾರೆ. ಆದರೆ ಅವರನ್ನು ಹತ್ತಾರುಬಾರಿ ಸಂದರ್ಶಿಸಿದರೆ ತಿಳಿಯುತ್ತೆ. ನಾವೇನಾದರೂ ಅವರನ್ನು ಹತ್ತಾರುಸಲ ಸಂಪರ್ಕಿಸದೇ ಇದ್ದರೆ ನಮಗೆ ನಾವೇ ವಂಚನೆ ಮಾಡಿಕೊಂಡ ಹಾಗೆ ಆಗುತ್ತೆ ಅಷ್ಟೆ.

ಮೊದಲದಿನ ಒಂದು ರೀತಿ ಕಂಡ ವ್ಯಕ್ತಿ ತನ್ನ ಒಂದೊಂದೇ ಒಳ್ಳೆತನವನ್ನು ಬಹಿರಂಗ ಪಡಿಸುತ್ತಾ ಹೋದಾಗ, ಆ ವ್ಯಕ್ತಿ ಏನೆಲ್ಲ ಎತ್ತರಕ್ಕೆ ಬೆಳೆಯಬಹುದೊ ಅಷ್ಟೆಲ್ಲ ಎತ್ತರಕ್ಕೆ ಬೆಳೆಯುವುದಕ್ಕೆ ಸದಾ ಹೋರಾಟ ನಡೆಸುವ ಚಿತ್ರ ಕಣ್ಣಿಗೆ ಕಾಣುತ್ತೆ.

ಪರಿಷತ್ತಿಗೆ ಪ್ರೊ : ಜಿ. ಎಸ್. ಸಿದ್ಧಲಿಂಗಯ್ಯನವರು ಅಧ್ಯಕ್ಷರಾದಾಗ ಶ್ರೀ ಎಸ್. ವಿ ಶ್ರೀನಿವಾಸರಾಯರು ಕೋಶಾಧ್ಯಕ್ಷರು. ಒಬ್ಬರದು ತರಗೆಲೆ ಕೋಪ, ನಿಗಿನಿಗಿ ಉರಿದು ಕೂಡಲೇ ತಣ್ಣಗಾಗುವರು ಒಬ್ಬರು. ಮತ್ತೊಬ್ಬರದು ಅಷ್ಟೇ ಸಮಾಧಾನ ನಿಧಾನಸ್ಥ ಮನೋಭಾವದ ವ್ಯಕ್ತಿತ್ವ.

ಲೆಕ್ಕ ಪತ್ರಗಳ ವಿಭಾಗ ಎಂದರೆ ಒಂದು ರೀತಿಯ ಭಯ ತರುವ ವಿಭಾಗ ವಾಗಿದ್ದುದು ಶ್ರೀನಿವಾಸರಾಯರು ಬಂದಮೇಲೆ ಎಂಥ ಪರಿವರ್ತನೆ ಗೊತ್ತೆ ? ಯಾವ ವಿಭಾಗದಲ್ಲಿ ಕೆಲಸಕ್ಕೆ ತಡೆ ಆದರೂ ಲೆಕ್ಕಪತ್ರ ವಿಭಾಗದಲ್ಲಿ ಕೆಲಸ ಗದ್ದು ಬರಬಹುದಿತ್ತು. ಅಷ್ಟು ಸುಧಾರಣೆ ಆಯಿತು.

ಎಸ್. ವಿ. ಶ್ರೀನಿವಾಸರಾಯರು ಮೂಲತಃ ವಿಜ್ಞಾನದ ವಿದ್ಯಾರ್ಥಿ. ಉದ್ಯೋಗವೂ, ದೇಶದ ರಕ್ಷಣಾ ವಿಭಾಗಕ್ಕೆ ಸೇರಿದ ಸೈನ್ಯಕ್ಕೆ ಸಂಬಂಧಿಸಿದ, ತಂತ್ರಜ್ಞಾನ ಇಲಾಖೆಯಲ್ಲಿ. ಆದು ಹೇಗೊ ಏನೋ ಸಾಹಿತ್ಯ ಕ್ಷೇತ್ರಕ್ಕೆ ತಮ್ಮನ್ನು ತಾವೇ ಸಂಪೂರ್ಣವಾಗಿ ಅರ್ಪಿಸಿಕೊಂಡವರು. ಅವರ ಕನ್ನಡದ ಕಾಳಜಿ, ಅನುಕರಣೀಯ, ಬರವಣಿಗೆಯ ಶೈಲಿ ಅನುಪಮ, ವ್ಯಕ್ತಿತ್ವದ ರೀತಿನೀತಿಯಂತೂ ಅಮೋಘ.

ಸಾಹಿತ್ಯ ಪರಿಷತ್ತು ಕಂಡ ಒಬ್ಬ ಅಪರೂಪದ ಕೋಶಾಧ್ಯಕ್ಷ, ಕೋಶಾಧಿಕಾರಿ. ಅವರು, ಎಂದೂ ಅಧ್ಯಕ್ಷಗಿರಿ ಅಥವಾ ಅಧಿಕಾರಿ ಮನೋಭಾವ ತೋರದ ವ್ಯಕ್ತಿ, ನೌಕರನಿರಲಿ, ಸ್ನೇಹಿತನಿರಲಿ ಒಂದೇ. ಮನುಷ್ಯ ಮನುಷ್ಯನ ನಡುವಣ ಸಂಬಂಧ ಹೇಗಿರಬೇಕೆಂದರೆ ಶ್ರೀನಿವಾಸರಾಯರೊಂದಿಗೆ ಸಂಪರ್ಕ ಇಟ್ಟುಕೊಂಡ ಪ್ರತಿಯೊಬ್ಬ ರಿಗೂ ಅದು ತಿಳಿಯುತ್ತದೆ.

ಸಾಹಿತ್ಯ ಪರಿಷತ್ತು ಆರ್ಥಿಕ ಸಂಕಷ್ಟಕ್ಕೆ ಒಳಗಾಗಿದ್ದ ದಿನಗಳವು. ಆದರೆ ಅವರ ಕಾಲದಲ್ಲಿ ಒಂದು ದಿನವೂ ಒಬ್ಬರಿಗೂ ಹಣಕಾಸಿನ ಮುಗ್ಗಟ್ಟು ಕಾಣಲೇ ಇಲ್ಲ. 'ಪರಿಷತ್ತಿನ ನೌಕರರಿಗೆ ವೈದ್ಯಕೀಯ ನೆರವು ಇದೆಯೆ? ನಿವೃತ್ತಿ ವೇತನ ಇದೆಯೇ ? ಮುದಿತನ್ನಾದಾಗ ಆಸರೆಇಲ್ಲದಂತೆ ಆಗುವ ಈ ಕನ್ನಡಿಗರಿಗೆ ಕನ್ನಡ ಸಾಹಿತ್ಯ ಪರಿಷತ್ತು ಏನೆಲ್ಲ ಮಾಡ್ತಾಇದೆ. ನಮಗೆ ಸರ್ಕಾರ ಎಲ್ಲ ಸೌಲಭ್ಯಕೊಟ್ಟಿದೆ. ನಾವು ನಮ್ಮ ಇಳೀ ವಯಸ್ಸಿನಲ್ಲಿ ಈ ಸಾಹಿತ್ಯ ಸಂಸ್ಕೃತಿ ಸಂಸ್ಥೆಗೆ ಬಂದು ಜೀವಾನುಭವದಿಂದ ಇಷ್ಟೂ ಅರ್ಥಮಾಡಿಕೊಳ್ಳದಿದ್ದರೆ ಹೇಗೆ ?' ಎನ್ನುತ್ತಿದ್ದರು. ಒಮ್ಮೆ ನಮ್ಮ ಬಿ.ಎಂ.ಶ್ರೀ. ಅಚ್ಚುಕೂಟದ ಒಬ್ಬ ಸಿಬ್ಬಂದಿ, ವಿಪರೀತ ಗಾಳಿ, ಮಳೆಗೆ ಒಳಗಾಗಿ ತಾನು ವಾಸ ವಾಗಿದ್ದ ಗುಡಿಸಲು ಹಾಳಾಗಿತ್ತು ಅಂತ, ಶ್ರೀನಿವಾಸರಾಯರನ್ನು ಬಂದು ಸಾಲ ಕೋರಿದ. 'ನೋಡಿಸಾರ್, ಹಿಂದೆ ತೆಗೆದುಕೊಂಡ ಸಾಲ ತೀರಸೋಕೆ ಆಗಿಲ್ಲ.ಆದರು ನಾವು ಬದುಕಬೇಕಾದರೆ ಮತ್ತೆ ಸಾಲ ಕೊಡಲೇಬೇಕ್‌ಸಾರ್.ಇನ್ನು ನನಗೆ ಸರ್ವೀಸ್ ಇದೆ. ಸಂಬಳದಲ್ಲಿ ಹಿಡಕೊಳ್ಳಿ ಸರ್' ಅಂದ. 'ನೋಡಿ ಚಕ್ರಪಾಣಿ, ಇವನಿಗೆ ಒಂದು ಅಪ್ಲಿಕೇಷನ್ ಬರೆದುಕೊಡಿ. ವಿಶೇಷ ಸಾಲ ಮಂಜೂರು ಮಾಡಿಸೋಣ ಅಂದ್ರು' ಬರೆದುಕೊಟ್ಟೆ. ಅವರೇ ಹೋದಿ ಮಂಜೂರ್‌ಮಾಡ್ಸಿ ರಜಾನೂ ಕೊಡ್ಸಿದ್ರು. ಆಗ್ಲಿಂದ ಪರಿಷತ್ತಿನ ಸಿಬ್ಬಂದಿ ಅವರಿಗೆ ಧರ್ಮರಾಯ, ಧರ್ಮರಾಯ ಅಂತ ನಾಮಕರಣ ಮಾಡ್ತು.

ಸಿಬ್ಬಂದಿಗೆ ಸಹಾಯ ಮಾಡಿದ್ರು ಅಂತಲ್ಲ. ಅದೊಂದು ಉದಾಹರಣೆ ಮಾತ್ರ. ಯಾವುದೇ ಸಂದರ್ಭ ಆದ್ರೂ ಅವರದು ಒಂದೇ ನಿಲವು. ವ್ಯಕ್ತಿ ತನ್ನ ಕೈನಡೆಯು ವಾಗ ಇತರರಿಗೆ ಅದಷ್ಟು ಸಹಾಯ ಮಾಡುವುದು. ಸಿಬ್ಬಂದಿ ಅಕಸ್ಮಾತ್ ತಪ್ಪು ಮಾಡಿದಾಗಲೂ ಬೈಯುವ ಮಾರ್ಗಕ್ಕಿಂತ ಇನ್ನೂ ಹೆಚ್ಚಿನ ಪರಿಣಾಮ ಬೀರಬಲ್ಲ ತಿಳಿವಳಿಕೆ ನೀಡುವ ದಿಸೆಯಲ್ಲಿ ಬುದ್ಧಿ ಹೇಳಿ ಕೆಲಸ ಮಾಡಿಸುತ್ತಿದ್ದ ಅವರಿಗೆ ಪರಿಷತ್ತಿನಲ್ಲಿ ಯಾರೂ, ಅವರ ಬಗೆಗೆ ಎರಡಭಿಪ್ರಾಯ ಇಟ್ಟುಕೊಂಡಿರಲಿಲ್ಲ. ಎಲ್ಲರಿಗೂ ಬೇಕಾದ ವ್ಯಕ್ತಿ. ಪರಿಷತ್ತಿನ ಸಿಬ್ಬಂದಿ ಎಲ್ಲ ಕಾಲಕ್ಕೂ ನೆನೆಯುವ ವ್ಯಕ್ತಿ ಅಂದರೆ ಎಸ್. ವಿ. ಶ್ರೀನಿವಾಸರಾಯರು.

ಸಂಬಂಧಪಟ್ಟ ಪರಿಷತ್ತಿನ ಸಿಬ್ಬಂದಿ ಒಬ್ಬರು ಕಚೇರಿಗೆ ಬಂದಿರಲಿಲ್ಲ, ಮರು–ದಿನವೇ ಸಗಟು ಖರೀದಿಗೆ ಕಡೆಯ ದಿನ. ಏನು ಮಾಡುವುದು ? ಎಲ್ಲರನ್ನೂ ಕರೆದು ಕೊಂಡು ನಾನು ಬಿಲ್ ಮಾಡುತ್ತೇನೆ, ನೀವು ಪುಸ್ತಕಗಳನ್ನು ಕ್ರಮವಾಗಿ ಬಟವಾಡೆ ಮಾಡಲು ವ್ಯವಸ್ಥೆ ಮಾಡಿ ಎಂದು ಹೇಳಿ ಬೆಳಿಗ್ಗೆ ಕುಳಿತವರು ರಾತ್ರಿಯವರೆಗೂ ಕೆಲಸ ಮಾಡಿದರು. ಸಿಬ್ಬಂದಿ ಎಲ್ಲ ಅವರೊಂದಿಗೆ ಶ್ರಮಪಟ್ಟು ದುಡಿದರು. ಒಬ್ಬ ಅಧಿಕಾರಿ ಹೇಗೆ ಕೆಲಸತೆಗೆಯಬಹುದು ಅನ್ನುವುದಕ್ಕೆ ಇದೊಂದು ನಿದರ್ಶನ ಮಾತ್ರ.

ಮನುಷ್ಯನಲ್ಲಿ ಮಣ್ಣಿನಂಶವಿದೆ ಬೆಳೆಯಿಲ್ಲ, ಬೆಂಕಿಯಿದೆ ಬೆಳಕಿಲ್ಲ. ನೀರಿದೆ ತಂಪಿಲ್ಲ, ಗಾಳಿಯಿದೆ ಬದುಕಿಲ್ಲ, ಆಕಾಶವಿದೆ ಮುಕ್ತಿ ಇಲ್ಲ ಆಗಬಾರದು.ಪಂಚಭೂತಗಳಿಂದಾದ ಮನುಷ್ಯ ಬೆಳೆಯಬೇಕು, ಬೆಳಕಾಗಬೇಕು, ತಂಪೀಯಬೇಕು, ಉಸಿರಾಗಬೇಕು, ಬಿಗುವಿನ ಸಂದರ್ಭದಲ್ಲಿ ಬಿಡುಗಡೆಯನ್ನು ನೀಡಬೇಕು ಎಂಬ ತತ್ತ್ವ ಸಿದ್ಧಾಂತವನ್ನು ತಮಗರಿವಿಲ್ಲದೆಯೇ ತನ್ನದಾಗಿಸಿಕೊಂಡಿದ್ದ ಧೀಮಂತ, ಸರಳ ವಿನಯಶೀಲ ವ್ಯಕ್ತಿ.



# ಸಂಪನ್ನ ಸಾಹಿತಿ

—ಪ್ರೊ॥ ಅರಳುಮಲ್ಲಿಗೆ ಪಾರ್ಥಸಾರಥಿ

ಎಸ್. ವಿ. ಶ್ರೀನಿವಾಸರಾವ್, ಕನ್ನಡ ಸಾಹಿತ್ಯ ಲೋಕದಲ್ಲಿ ವಿಶಿಷ್ಟವಾದ, ವೈವಿಧ್ಯಮಯ ಕೃತಿಕುಸುಮಗಳನ್ನು ಪಲ್ಲವಿಸಿರುವ ವ್ಯಕ್ತಿತ್ವ. ಪಂಪನಿಂದ ಆಧುನಿಕ ಸಾಹಿತ್ಯ ಸಮುದಾಯದವರೆಗೆ ಕನ್ನಡ ಸಾಹಿತಿಗಳ ಭವ್ಯ ಐತಿಹಾಸಿಕ ಮೆರವಣಿಗೆ ಯನ್ನೇ ಶ್ರೀಯುತರು ತಮ್ಮ 'ಕನ್ನಡ ಸಾಹಿತಿ ದರ್ಶನ' ದಲ್ಲಿ ಮಾಡಿಸಿ ನಾಡಿಗೆ ನಾಡೇ ಮೆಚ್ಚುವಂತೆ ಅಪೂರ್ವ ಸಾಹಿತ್ಯಿಕ ಸೇವೆ ಸಲ್ಲಿಸಿದ್ದಾರೆ. ಶಿಶು ಸಾಹಿತ್ಯದಲ್ಲಿ ಶ್ರೀನಿವಾಸರಾಯರ ಸೇವೆ ಅನುಪಮ. ಇಪ್ಪತ್ತೈದಕ್ಕೂ ಹೆಚ್ಚು ಕಾದಂಬರಿಗಳು ಶ್ರೀಯುತರ ಲೇಖನಿಯಿಂದ ಮೂಡಿ ಬಂದಿದ್ದು, ಕರ್ನಾಟಕದ ಜನಪ್ರಿಯ ಪತ್ರಿಕೆ ಗಳಲ್ಲಿ ಧಾರಾವಾಹಿಯಾಗಿ ಪ್ರಸರಣಗೊಂಡು ಲಕ್ಷ ಲಕ್ಷ ಓದುಗರ ಪ್ರಶಂಸೆಗೆ ಪಾತ್ರವಾಗಿವೆ.

ಕನ್ನಡ ಸಾಹಿತ್ಯ ಪರಿಷತ್ತು, ಮಕ್ಕಳ ಸಾಹಿತ್ಯ ಪರಿಷತ್ತು, ಕರ್ನಾಟಕ ಪ್ರಕಾಶಕರ ಸಂಘ ಮುಂತಾದ ರಾಜ್ಯ ಮಟ್ಟದ ಸಾಹಿತ್ಯ ಸಂಸ್ಥೆಗಳ ಚುಕ್ಕಾಣಿ ಹಿಡಿದು ಸೇವೆ ಸಲ್ಲಿಸಿರುವ ಶ್ರೀ ಎಸ್. ವಿ. ಶ್ರೀನಿವಾಸರಾವ್ ಕನ್ನಡದಲ್ಲಿ ನಾಲ್ಕು ದಶಕಗಳಿಂದಲೂ ನಿರಂತರವಾಗಿ ಸಾಹಿತ್ಯಿಕ-ಸಾಂಸ್ಕೃತಿಕ ಕೊಡುಗೆ ನೀಡುತ್ತಿದ್ದು, ಕೇಂದ್ರ ಸಾಹಿತ್ಯ ಅಕಾಡೆಮಿ, ರಾಜ್ಯ ಸಾಹಿತ್ಯ ಅಕಾಡೆಮಿ, ನ್ಯಾಷನಲ್ ಬುಕ್ ಟ್ರಸ್ಟ್ ಮುಂತಾದ ಸಾಹಿತ್ಯಿಕ ಸಂಸ್ಥೆಗಳು ಶ್ರೀಯುತರ ಅನೇಕ ಕೃತಿಗಳನ್ನು ಪ್ರಕಟಿಸಿವೆ.

ಶ್ರೀನಿವಾಸರಾಯರು ಹುಟ್ಟಿದ್ದು ಸಾಹಿತ್ಯ–ಸಂಸ್ಕೃತಿ–ನಾಟಕಗಳಿಗೆ ಮುಂಚಿ ನಿಂದಲೂ ಹೆಸರಾದ ತುಮಕೂರು ಬಳಿಯ ಗೂಳೂರಿನಿಂದ ಎರಡೂವರೆ ಮೈಲಿ ದೂರದ ಚಿಕ್ಕಸಾರಂಗಿ ಹಳ್ಳಿಯಲ್ಲಿ. ಚಿಕ್ಕಸಾರಂಗಿಯಲ್ಲಿ ಹುಟ್ಟಿದ ರಾಯರನ್ನು ಸಾಹಿತ್ಯ ಲೋಕದ ದೊಡ್ಡ ಸಾರಂಗಿಯ ನಾದ ಆಕರ್ಷಿಸಿದ್ದು ಸಹಜವೇ. ತಂದೆ ಗುಂಡಪ್ಪ, ತಾಯಿ ಪದ್ಮಾವತಮ್ಮ. ಈ ಬಾಲಕ ಶ್ರೀನಿವಾಸನನ್ನು ಶಾನುಭೋಗ ವೆಂಕಟರಾಮಯ್ಯ ಹಾಗೂ ಪುಟ್ಟಚ್ಚಮ್ಮನವರು ದತ್ತು ತೆಗೆದುಕೊಂಡು, ತಮ್ಮ ದತ್ತು ಪುತ್ರನನ್ನಾಗಿ ಬೆಳೆಸಿದರು. ಮುಂದೆ ಓದಿಗಾಗಿ ತುಮಕೂರಿಗೆ ಬಂದು ಬಿ.ಎಸ್.ಸಿ.ಯವರೆಗೂ ತುಮಕೂರಿನಲ್ಲೇ ವ್ಯಾಸಂಗ ಮಾಡಿದರು.

1949 ರಲ್ಲಿ ತುಮಕೂರು ಆರ್ಯನ್ ಹೈಸ್ಕೂಲಿನಲ್ಲಿ ಕನ್ನಡ ಸಂಘ ಪ್ರಾರಂಭವಾಯಿತು. ಆ ಸಂಘದ ಪ್ರಾರಂಭವಾದಾಗ ಸ್ವಾತಂತ್ರ್ಯ ಬಂದು ಎರಡೇ ವರ್ಷವಾಗಿದ್ದರಿಂದ ಇನ್ನೂ ಸ್ವಾತಂತ್ರ್ಯ ಸಮರದ ಸಾಹಿತ್ಯ-ರಾಷ್ಟ್ರೀಯ ಭಾವನೆಯ ಬಿಸಿ ಆರಿರಲಿಲ್ಲ. ಹಿರಿಯ ಸಾಹಿತಿಗಳು ಹಳ್ಳಿಗಾಡಿನ, ಊರೂರುಗಳ ಶಾಲಾ-ಕಾಲೇಜುಗಳ ಸಮಾರಂಭಗಳಿಗೆ ಹೋಗುವ ಪರಿಪಾಠ ಹೆಚ್ಚಿದ್ದ ಕಾಲ. ಆಗ ಆ ಕನ್ನಡ ಸಂಘವು ಸ್ಥಳದಲ್ಲೇ ಬರೆಯುವ ಕನ್ನಡ ಸಣ್ಣ ಕಥಾ ಸ್ಪರ್ಧೆಯನ್ನು ಏರ್ಪಡಿಸಿತ್ತು. ಕನ್ನಡದ ಪ್ರಖ್ಯಾತ ಸಾಹಿತಿ ಗೋಪಾಲಕೃಷ್ಣ ಅಡಿಗರು ಅದೇ ಆರ್ಯನ್ ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದರು.

ಶ್ರೀನಿವಾಸರಾಯರು ಬರೆದ ಮೊಟ್ಟ ಮೊದಲ ಸಣ್ಣ ಕಥೆ, ಆ ಸ್ಥಳದಲ್ಲೇ ಕುಳಿತು ಬರೆದ ಕಥೆ. ಅದರಲ್ಲಿ ಅವರಿಗೆ ಪ್ರಥಮ ಬಹುಮಾನ ಬಂದಿತು. ಗೋಪಾಲ ಕೃಷ್ಣ ಅಡಿಗರು ಕಥೆಯನ್ನೋದಿ ಮುಂದೆ ಒಳ್ಳೆಯ ಸಾಹಿತಿಯಾಗುವೆ ಎಂದು ವಿಶ್ವಾಸದ ಮಾತನಾಡಿ ಬೆನ್ನು ತಟ್ಟಿದರು. ಆನಂತರ, ಕರ್ಮವೀರ ಪತ್ರಿಕೆ, ರಾಜ್ಯದ ಅನೇಕ ಸಂಘ ಸಂಸ್ಥೆಯವರು ಏರ್ಪಡಿಸಿದ ಕಥಾ ಸ್ಪರ್ಧೆಗಳಲ್ಲಿಯ ಸಿಂಹಪಾಲು ಬಹುಮಾನವನ್ನು ಶ್ರೀನಿವಾಸರಾಯರು ಗಳಿಸಿಕೊಂಡರು. ಕಾಲೇಜು ಸೇರುವ ಹೊತ್ತಿಗೇ ಪ್ರಬುದ್ಧ ಕಥೆಗಾರರಾಗಿ ಸಾಕಷ್ಟು ಹೆಸರು ಗಳಿಸಿದ್ದರು. ಶಿವಮೊಗ್ಗಾದ ಕಾಲೇಜು 1953 ರಲ್ಲಿ ಏರ್ಪಡಿಸಿದ ಅಂತರ ಕಾಲೇಜು ಕಥಾ ಸ್ಪರ್ಧೆಯಲ್ಲಿ ರಜತ ಕರಂಡವನ್ನು ಗಳಿಸಿದರು. ಅಂದಿನಿಂದ ಇಂದಿನವರೆಗೆ ಒಟ್ಟು ಒಂದು ನೂರಾ ಐವತ್ತಕ್ಕೂ ಹೆಚ್ಚು ಸಣ್ಣ ಕಥೆಗಳನ್ನು ರಚಿಸಿದ್ದಾರೆ. ಹಾಗೆಯೇ ಮೂರು ಕಥಾಸಂಕಲನಗಳೂ ಸುಪ್ರಸಿದ್ಧವಾಗಿವೆ. ಗಾಳಿ ಮೋಡದ ಗೆಳತಿ,ಕಾಗೆಯ ಗೂಡಿನಲ್ಲಿ ಕೋಗಿಲೆ ಹಾಡಿತು ; ಗೊಂಚಲು, ಈ ಸಂಕಲನಗಳು ಎಲ್ಲ ಸಾಹಿತ್ಯಾಸಕ್ತರನ್ನು ಆಕರ್ಷಿಸಿದವು. ವಿಶ್ವ ಕರ್ನಾಟಕ, ತಾಯಿನಾಡು, ಜಯಂತಿ, ಉಷಾ, ಕತೆಗಾರ, ಜನಪ್ರಗತಿ, ರಾಯಭಾರಿ, ಕಥಾವಳಿ, ಪ್ರಜಾಮತ, ಮುಂತಾದ ಎಲ್ಲ ಪತ್ರಿಕೆಗಳೂ, ರಾಯರ ಸಣ್ಣ ಕಥೆಗಳನ್ನು ನಾ ಮುಂದು, ತಾ ಮುಂದು ಎಂದು ಪ್ರಕಟಿಸುತ್ತಿದ್ದವು. ಕಥಾ ಸಾಹಿತ್ಯದಲ್ಲಿ ಶ್ರೀನಿವಾಸರಾಯರದು ಪಳಗಿದ ಕೈ ಎಂದು ಗುರುತಿಸಿದ ನ್ಯಾಷನಲ್ ಬುಕ್ ಟ್ರಸ್ಟ್ ಸಂಸ್ಥೆಯು ಶ್ರೀಯುತರಿಂದ "ಇಪ್ಪತ್ತೊಂದು ಬಾಂಗ್ಲಾ ಕಥೆಗಳು" ಹಾಗೂ "ಒರಿಯಾ ಕಥೆಗಳು" ಕೃತಿಗಳನ್ನು ಅನುವಾದ ಮಾಡಿಸಿ ಪ್ರಕಟಿಸಿತು.

ಶ್ರೀನಿವಾಸರಾಯರು ಎಸ್.ಎಸ್.ಎಲ್.ಸಿ. ಓದುತ್ತಿರುವಾಗಲೇ 'ರಾಷ್ಟ್ರ ಭಾಷಾ ವಿಶಾರದ' ಹಿಂದೀ ಪರೀಕ್ಷೆಯನ್ನು ಪಾಸು ಮಾಡಿದರು,

ಮದ್ರಾಸಿನ ಹಿಂದಿ ಪ್ರಚಾರ ಸಮಿತಿ ಇವರನ್ನು ಆಹ್ವಾನಿಸಿ ಶಾಲು ಹೊದಿಸಿ ಗೌರವಿಸಿತು.

1956 ರಲ್ಲಿ ಚೀಫ್ ಇನ್ಸ್‌ಪೆಕ್ಟರ್ ಆಫ್ ಎಲೆಕ್ಟ್ರಾನಿಕ್ಸ್ ಇಲಾಖೆಯಲ್ಲಿ ಹುದ್ದೆಗೆ ಸೇರಿದ ಶ್ರೀನಿವಾಸರಾಯರು 1989 ರ ಡಿಸೆಂಬರ್‌ನಲ್ಲಿ ತಮ್ಮ ವೃತ್ತಿ ಜೀವನದಿಂದ ನಿವೃತ್ತಿ ಪಡೆದರು. 34 ವರ್ಷಗಳ ಯಶಸ್ವೀ ಸೇವೆಯನ್ನು ಆ ಸಂಸ್ಥೆಗೆ ನೀಡಿದ ಶ್ರೀನಿವಾಸ್‌ರಾವ್ ಅವರು ಬ್ಯಾಟರಿಯ ಸಂಬಂಧ ಅನೇಕ ಸಂಶೋಧನೆಗಳನ್ನು ಮಾಡಿ, ಸಂಪೂರ್ಣ ಸ್ವದೇಶೀಯೆನಿಸಿದ ಲೇಡ್ ಆಸಿಡ್ ಬ್ಯಾಟರಿಯ ಆವಿಷ್ಕಾರ ಮಾಡಿ, ಆ ಮೂಲಕ ರಾಷ್ಟ್ರಕ್ಕೆ ಅಮೂಲ್ಯವಾಗಿದ್ದ ವಿದೇಶೀ ವಿನಿಮಯವನ್ನು ಉಳಿಸಿದರು. ರಕ್ಷಣಾ ಮಂತ್ರಾಲಯದ ಕಾರ್ಯದರ್ಶಿ ಯವರಿಂದ 1974 ರಲ್ಲೇ ಈ ಸಾಧನೆಗಾಗಿ ವಿಶೇಷ ಪ್ರಶಸ್ತಿ ಹಾಗೂ ಅಭಿನಂದನಾ ಪತ್ರವನ್ನು ಪಡೆದರು. ಅಲ್ಲಿಂದೀಚೆಗೆ ಸೈಂಟಿಫಿಕ್ ಆಫೀಸರ್ ಆಗಿ ಅವರು ನಡೆಸಿದ ಅನೇಕ ಆವಿಷ್ಕಾರಗಳಿಗೆ ಸಂಸ್ಥೆಯ ವರಿಷ್ಠರಿಂದ ಬಹುಮಾನ, ಪ್ರಶಂಸೆ, ಪ್ರಶಸ್ತಿ ಗಳನ್ನು ಗಳಿಸಿದರು.

1976 ರಲ್ಲಿ ಫೀಲ್ಡ್ ಪಬ್ಲಿಸಿಟಿ ನಿರ್ದೇಶನಾಲಯದವರು ಭಾರತದ ಎಲ್ಲ ರಾಜ್ಯಗಳಿಂದಲೂ ಆಯ್ದ ಬರಹಗಾರರನ್ನು ಇಡೀ ದಕ್ಷಿಣ ಭಾರತದ ಸಂದರ್ಶನ ಮಾಡಿಸಿಕೊಂಡು ಬರಲು ಆಹ್ವಾನಿಸಿದ್ದರು. ಆಗ ಕನ್ನಡದಿಂದ ಆಯ್ಕೆಯಾದ ಇಬ್ಬರಲ್ಲಿ ಒಬ್ಬರು ಪ್ರೊ॥ ಎಲ್. ಎಸ್. ಶೇಷಗಿರಿರಾಯರು, ಇನ್ನೊಬ್ಬರು ಶ್ರೀ ಎಸ್. ವಿ. ಶ್ರೀನಿವಾಸರಾಯರು.

ಎಸ್. ವಿ. ಎಸ್. ಸರಕಾರೀ ಇಲಾಖೆಯ ಅಧಿಕಾರಿಯಾಗಿದ್ದರೂ, ಸಾಹಿತ್ಯ ದಲ್ಲಿ ಇಷ್ಟೊಂದು ಶ್ರದ್ಧೆಯಿಂದ ತಮ್ಮನ್ನು ತೊಡಗಿಸಿಕೊಳ್ಳಲು ಅವರಿಗೆ 1954-55 ರಲ್ಲಿ ಶ್ರೀಯುತ ನಿರಂಜನರ ಪ್ರಭಾವದ ಹಿನ್ನೆಲೆ ಬಹಳ ಮಹತ್ವದ್ದು. ಶ್ರೀನಿವಾಸರಾಯರ ಪ್ರಥಮ ಕಾದಂಬರಿ 'ಕನ್ಯಾದಾನ' ವನ್ನು ಸಂಪೂರ್ಣವಾಗಿ ಓದಿದ ನಿರಂಜನರು ಆ ಕೃತಿಯನ್ನು ಮುಕ್ತಕಂಠದಿಂದ ಪ್ರಶಂಸಿಸಿ, ಆಗಲೇ ಒಳ್ಳೆಯ ಮುನ್ನುಡಿಯನ್ನೂ ಆ ಪುಸ್ತಕಕ್ಕೆ ಬರೆದರು. ನಂತರದ ದಿನಗಳಲ್ಲಿ ಶ್ರೀನಿವಾಸರಾವ್ ಹಾಗೂ ನಿರಂಜನರ ಸಾಹಿತ್ಯ ಬಾಂಧವ್ಯ ನಿಕಟವಾಗಿತ್ತು. ನಿರಂಜನರು ಎಸ್.ವಿ.ಎಸ್. ಅವರಲ್ಲಿ ಅಪಾರ ವಿಶ್ವಾಸವನ್ನಿಟ್ಟಿದ್ದರು. ಶ್ರೀಮತಿ ಅನುಪಮಾ ಹಾಗೂ ಶ್ರೀಯುತ ನಿರಂಜನರ ಸಾಹಿತ್ಯ ಜೋಡಿ ಮದುವೆಯಾದಾಗ ಸಜ್ಜನ ರಾವ್ ಕಲ್ಯಾಣ ಮಂಟಪ ದಲ್ಲಿ ಎಸ್. ವಿ. ಶ್ರೀನಿವಾಸರಾವ್. ತಾವು ಬರಿಯ ಅತಿಥಿಗಳಷ್ಟೇ ಆಗಿರದೆ ಬಂದ ಅತಿಥಿಗಳನ್ನು ಸ್ವಾಗತಿಸಿದ್ದರು.

ಸಾಹಿತ್ಯದೊಡನೆ ಕ್ರೀಡೆಯಲ್ಲಿಯೂ ನಿಪುಣರಾಗಿದ್ದ ಶ್ರೀನಿವಾಸರಾವ್ ತಮ್ಮ ಹೈಸ್ಕೂಲು, ಕಾಲೇಜಿನ ದಿನಗಳಲ್ಲಿ ಪ್ರಖ್ಯಾತ ಕ್ರಿಕೆಟ್ ಪಟುವಾದಿದ್ದವರು. ಹೈಸ್ಕೂಲ್ ಕ್ರಿಕೆಟ್ ತಂಡದ ಕ್ಯಾಪ್ಟನ್ ಆಗಿದ್ದ ಎಸ್.ವಿ.ಎಸ್. ಆಡಿದ, ನಾಯಕ ನಾದಿ ಆಡಿಸಿದ ಪಂದ್ಯಗಳಲ್ಲೆಲ್ಲಾ ಜಯ ಅವರಿಗೆ ಕಟ್ಟಿಟ್ಟ ಬುತ್ತಿ.

ಕಾಲೇಜ್ ವ್ಯಾಸಂಗದ ದಿನಗಳಲ್ಲಿ ಕನ್ನಡ, ಹಿಂದಿ, ಇಂಗ್ಲೀಷ್ ಮೂರು ಭಾಷೆಯ ಪುಸ್ತಕಗಳನ್ನೂ ಓದುವ ಹವ್ಯಾಸವನ್ನು ಬೆಳೆಸಿಕೊಂಡಿದ್ದ ಶ್ರೀನಿವಾಸ ರಾವ್ ಕಾಲೇಜಿನ 'ಹಿಂದಿ ಸಂಘ'ದ ಕಾರ್ಯದರ್ಶಿಯೂ ಆಗಿದ್ದವರು. ಬೆಂಗಳೂರಿಗೆ ಬಂದ ಮೇಲೆ ಮಲ್ಲೇಶ್ವರಂ ಬಡಾವಣೆಯಲ್ಲಿ ಸಾಹಿತ್ಯ-ಸಂಸ್ಕೃತಿಯಲ್ಲಿ ಸಮಾನ ಆಸಕ್ತಿಯಿದ್ದ ಗೆಳೆಯರನ್ನೆಲ್ಲಾ ಸಂಘಟಿಸಿ "ಮಿತ್ರ ವೃಂದ" ಎಂಬ ಸಾಂಸ್ಕೃತಿಕ ಸಂಸ್ಥೆಯನ್ನು ಪ್ರಾರಂಭಿಸಿದರು. ಗ್ರಂಥ ಭಂಡಾರ, ಪ್ರವಾಸ, ಕ್ರೀಡಾ ಪಂದ್ಯಗಳು, ಸಾಹಿತ್ಯ-ಸಂಸ್ಕೃತಿ ಉತ್ಸವಗಳು ಮುಂತಾದುವುಗಳನ್ನು ಯುವ ಜನರಲ್ಲಿ ನಿತ್ಯ ಹವ್ಯಾಸವಾಗುವಂತೆ ಪ್ರೇರೇಪಿಸಿದರು.

ಎಸ್. ವಿ. ಶ್ರೀನಿವಾಸರಾವ್ ಅವರಿಗೆ ಇಲಾಖೆಯವರು ಪ್ರಮೋಷನ್ ಮೇಲೆ ಮುಂಬಯಿಗೆ ವರ್ಗ ಮಾಡಿದಾಗ, ಮುಂಬೈ ನಗರದ ಯಂತ್ರಮಾನವರ ಮಧ್ಯೆ, ಸಮಯಾಭಾವದ ಮಧ್ಯೆ, ದಿನನಿತ್ಯದ ಬದುಕು ನಡೆಸುವುದೇ ದುಸ್ತರ ವಾಗಿದ್ದ ಆ ಸಂದರ್ಭದಲ್ಲಿ ಮುಂಬೈ ಬದುಕೆನ್ನುವ ಬುಲ್‌ಡೋಜರ್‌ನಡಿ, ರಾಯರ ಸಾಹಿತ್ಯ ಕುಸುಮ, ಸಂಸ್ಕೃತಿಯ ಆಸಕ್ತಿ ಸಿಕ್ಕಿ ನಲುಗಿ ಹೋಗಬಹುದೆನ್ನುವ ಭೀತಿ ಯಂತೂ ಇದ್ದೇ ಇತ್ತು. ಆದರೆ ಆಶ್ಚರ್ಯದ ವಿಷಯವೆಂದರೆ ಮುಂಬಯಿಯಲ್ಲಿ ಅವರ ಈ ಆಸಕ್ತಿಗಳು ಇಮ್ಮಡಿಯಾದವು. ಮೈಸೂರು ಅಸೋಸಿಯೇಷನ್, ಕರ್ನಾಟಕ ಸಂಘ, ಭಾಂಡೂಪ್ ಕರ್ನಾಟಕ ಸಂಘ, ಮಾಹಿಮ್ ಕರ್ನಾಟಕ ಸಂಘ ಮುಂತಾದೆಡೆಗಳಲ್ಲಿ ಸಕ್ರಿಯವಾಗಿ ಎಲ್ಲ ಚಟುವಟಿಕೆಗಳಲ್ಲೂ ಭಾಗವಹಿಸುತ್ತಿದ್ದರು. ಮುಂಬೈ ವಿಶ್ವವಿದ್ಯಾನಿಲಯದಲ್ಲಿ ರಷ್ಯನ್ ಭಾಷೆಯ ಡಿಪ್ಲೊಮೋವನ್ನು ಇದೇ ಸಂದರ್ಭದಲ್ಲಿ ಮಾಡಿಕೊಂಡರು.

1956ರಲ್ಲಿ ಅನಸೂಯಾ ಎಂಬ ಕನ್ಯೆಯನ್ನು ವಿವಾಹವಾದ ಶ್ರೀನಿವಾಸರಾವ್ ನಾಲ್ಕು ದಶಕಗಳ ಸಾರ್ಥಕ ದಾಂಪತ್ಯ ಜೀವನವನ್ನು ನಡೆಸಿದ್ದಾರೆ, ಅದಕ್ಕೆ ಬಹು ಮಟ್ಟಿಗೆ ಅವರ ಶ್ರೀಮತಿಯವರೇ ಕಾರಣ. ಮದುವೆಯಾಗಿ ನಲವತ್ತು ಸಂವತ್ಸರ ವಾಗುತ್ತಿದ್ದರೂ, ಇಂದಿಗೂ ನವದಂಪತಿಗಳ ಉತ್ಸಾಹವನ್ನು, ಲವಲವಿಕೆಯನ್ನು, ಜೀವನಾಸಕ್ತಿಯನ್ನು ಇವರಿಬ್ಬರೂ ಉಳಿಸಿಕೊಂಡು ಬಂದು ಆದರ್ಶ ದಾಂಪತ್ಯಕ್ಕೆ ನಿದರ್ಶನವಾಗಿದ್ದಾರೆ. ಶ್ರೀಮತಿ ಅನಸೂಯಾ ಮನೆಗೆ ಬಂದವರನ್ನು ಆದರಿಸಿ, ಸತ್ಕರಿಸಿ, ವಿಶ್ವಾಸದಿಂದ ನೋಡಿಕೊಂಡು, ಇಡೀ ಕುಟುಂಬದಲ್ಲಿ ಸಹಮತದ,

ಸುಸಂಸ್ಕೃತ ವಾತಾವರಣವನ್ನು ಬೆಳೆಸಿಕೊಂಡು ಬಂದಿದ್ದಾರೆ. ತಮ್ಮ ಪತಿಯ ರಕ್ಷಣಾ ಇಲಾಖೆಯ ದುಡಿತ, ಸಾಹಿತ್ಯ ಸೇವೆ, ಸಂಘ ಸಂಸ್ಥೆಗಳ ಚಟುವಟಿಕೆ, ಇವೆಲ್ಲಕ್ಕೂ ಒತ್ತಾಸೆಯಾಗಿ ನಿಂತು ಶ್ರೀನಿವಾಸರಾವ್ ಅವರ ಸಾಹಿತ್ಯಿಕ ಸಾಧನೆಗೆ ಶ್ರೀಮತಿ ಅನಸೂಯ ಅವರು ಪ್ರಮುಖವಾಗಿ ಕಾರಣವಾಗಿದ್ದಾರೆ. ಮೂರು ಮುದ್ದು ಮಕ್ಕಳು, ಒಂದು ಗಂಡು, ಎರಡು ಹೆಣ್ಣು. ಅರುಣ್ ಸುಪುತ್ರ. ಕಲ್ಪನಾ ಹಾಗೂ ಕವಿತಾ ಹೆಣ್ಣು ಮಕ್ಕಳು. ಅಳಿಯ, ಸೊಸೆ, ಮೊಮ್ಮಕ್ಕಳೊಡನೆ ತಮ್ಮ ಸಂಸಾರ ಪರಿಸರವನ್ನು ನಂದನವನವನ್ನಾಗಿ ಮಾಡಿಕೊಂಡಿರುವ ಈ ದಂಪತಿಗಳ ಜಾಣ್ಮೆ, ವಿಶ್ವಾಸ ಹೃದಯ ಮೆಚ್ಚುವಂತಹುದು.

ಆಡು ಮುಟ್ಟದ ಸೊಪ್ಪಿಲ್ಲ ಎನ್ನುವಂತೆ ಕಾದಂಬರಿ, ಕಥೆ, ನಾಟಕ, ವ್ಯಕ್ತಿ ಚಿತ್ರಣ, ಜೀವನ ಚರಿತ್ರೆ, ಸಂಕಲನ, ಸಂಪಾದನೆ ಹಾಗೂ ಮಕ್ಕಳ ಸಾಹಿತ್ಯ ಮುಂತಾದ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಶ್ರೀನಿವಾಸರಾವ್ ಹೆಚ್ಚು ಪರಿಣಾಮ ಕಾರಿಯಾಗಿಯೇ ಕೈಯಾಡಿಸಿದ್ದಾರೆ. ಸಾಹಿತ್ಯ ಕ್ಷೇತ್ರಕ್ಕೆ ಇವರು ನೀಡಿರುವ "ಕನ್ನಡ ಸಾಹಿತಿ ದರ್ಶನ" ಕೃತಿ ಎಲ್ಲ ಕಾಲಕ್ಕೂ ನಿಲ್ಲಬಲ್ಲ ಮೌಲಿಕ ಕೊಡುಗೆ. ಇದು 1989ರಲ್ಲಿ, ಜ್ಞಾನಪೀಠಪ್ರಶಸ್ತಿ ವಿಜೇತ ಡಾ॥ ಕುವೆಂಪು ಅವರಿಂದ ಬಿಡುಗಡೆಯಾದ ಕೃತಿ. ಅಪಾರ ಪರಿಶ್ರಮ ವಹಿಸಿ, ಹಳೆಯ ಕವಿಗಳನ್ನು ಕುರಿತ ಸಾಹಿತ್ಯಚರಿತ್ರೆಯನ್ನೂ, ಹೊಸಗನ್ನಡ ಸಾಹಿತ್ಯದ ಬರಹಗಾರರನ್ನೂ ಒಟ್ಟಿಗೇ, ಒಂದೆಡೆಗೇ ಪರಿಚಯಿಸುವ ಇಂತಹ ಇನ್ನೊಂದು ಕೃತಿ ಕನ್ನಡದಲ್ಲಿ ಬಂದಿಲ್ಲ. ಇದು ಡಾ॥ ವಿ. ಕೃ. ಗೋಕಾಕ್, ಡಾ॥ ರಂ. ಶ್ರೀ ಮುಗಳಿ, ಡಾ॥ ಸಿದ್ಧಯ್ಯ ಪುರಾಣಿಕ್, ನಿರಂಜನ, ಡಾ॥ ಹಾ. ಮಾ. ನಾಯಕ್, ಡಾ॥ ದೇ.ಜ.ಗೌ, ಪ್ರೊ॥ ಎಲ್. ಎಸ್. ಶೇಷಗಿರಿ ರಾವ್, ಡಾ॥ ಸಿ.ಪಿ.ಕೆ. ಮುಂತಾದಂತಹ ನಾಡ ಧೀಮಂತ ಸಾಹಿತಿಗಳಿಂದ ಮುಕ್ತ ಕಂಠದ ಪ್ರಶಂಸೆಗೆ ಪಾತ್ರವಾಗಿವೆ. ನ್ಯಾಷನಲ್ ಬುಕ್ ಟ್ರಸ್ಟ್ ಇದನ್ನು ಭಾರತದ ಇತರ ಭಾಷೆಗಳಿಗೆ ಅನುವಾದ ಮಾಡಲು ಆಯ್ಕೆ ಮಾಡಿದೆ. ಹಾಗೆಯೇ 'ಪ್ರೌಢ ಪ್ರತಾಪ ವೀರರಾಜೇಂದ್ರ" ಕೃತಿಯೂ ಅತ್ಯುತ್ತಮವಾದ ಸಾಹಿತ್ಯಕೃತಿಯಾಗಿದೆ. ಮೈಸೂರಿನ 'ನೃಪತುಂಗ ಸಾಹಿತ್ಯ ಪ್ರಶಸ್ತಿ'ಯೂ ಈ ಕೃತಿಗೆ ದೊರೆತು ದಶಕದ ಉತ್ತಮ ಕೃತಿಗಳಲ್ಲೊಂದು ಎಂದು ಪರಿಗಣಿತವಾಯಿತು. ಬೆಳಗಾಂ ಜಿಲ್ಲೆಯ ಪಾಚ್ಛಾಪುರದ ವಿಶ್ವಭಾರತೀಯ ಪರಿಷತ್ತಿನವರು ಏರ್ಪಡಿಸಿದ್ದ ಕಾದಂಬರಿ ಸ್ಪರ್ಧೆಯಲ್ಲಿ ಈ ಕೃತಿ ನಾಲ್ಕು ಸಹಸ್ರ ರೂಪಾಯಿಗಳ ಪ್ರಥಮ ಬಹುಮಾನವನ್ನು ಪಡೆದುಕೊಂಡಿತು.

ಇವರ 'ಒರಿಯಾ ಕಥೆಗಳು' ಕೃತಿಗೆ 1984 ರಲ್ಲಿ ಉತ್ತಮ ಅನುವಾದಕ್ಕಾಗಿ ರಾಜ್ಯ ಪ್ರಶಸ್ತಿ ಲಭಿಸಿತು. ಶ್ರೀಯುತರ 'ಪವನ ಚಕ್ರ' ಹಾಗೂ 'ಗೆಜ್ಜೆ ಕಟ್ಟಿದ

ಹೆಜ್ಜೆ' ವೈಜ್ಞಾನಿಕ ಕಾದಂಬರಿಗಳಾಗಿ ಒಳ್ಳೆಯ ಜನಪ್ರಿಯತೆಯನ್ನು ಲೇಖಕರಿಗೆ ತಂದು ಕೊಟ್ಟವು. ದೇಶವನ್ನು ದಂಗು ಬಡಿಸಿದ ಅಂತರರಾಷ್ಟ್ರೀಯ ಗೂಢಚರ್ಯೆ ಚಟುವಟಿಕೆಗಳ ಜಾಲ, ಅದಕ್ಕೆ ಮಾರಕವಾಗಿರುವ ಮಾದಕ ವಸ್ತುಗಳ ಕಳ್ಳ ಸಾಗಾಣಿಕೆಗಳ ವಿಷವರ್ತುಲ ಇವುಗಳನ್ನು ಕೇಂದ್ರವನ್ನಾಗಿರಿಸಿಕೊಂಡು ರಚಿಸಿದ 'ಗೆಜ್ಜೆ ಕಟ್ಟಿದ ಹೆಜ್ಜೆ' ಓದುಗರನ್ನು ಕ್ಷಣ ಕ್ಷಣಕ್ಕೂ ಕುತೂಹಲದ ಕಣ್ಣುಗಳಿಂದ ಓದಿಸಿಕೊಂಡು ಭಾರಿ ಜನಪ್ರಿಯತೆಯನ್ನು ಗಳಿಸಿತು.

ಸಂಘ ಸಂಸ್ಥೆಗಳಲ್ಲಿ ಶ್ರೀನಿವಾಸರಾಯರಿಗೆ ಒಲವು. ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕೋಶಾಧ್ಯಕ್ಷರಾಗಿ ಮೂರು ವರ್ಷ ನಾಡು, ನುಡಿಯ ಸೇವೆಯನ್ನು ಅವರು ಸಲ್ಲಿಸಿದ್ದಾರೆ. ಕರ್ನಾಟಕ ಪ್ರಕಾಶಕರ ಸಂಘದ ಹಾಗೂ ಕರ್ನಾಟಕ ಮಕ್ಕಳ ಸಾಹಿತ್ಯಪರಿಷತ್ತಿನ ಕಾರ್ಯದರ್ಶಿಯಾಗಿ ಕ್ರಿಯಾತ್ಮಕ ಸೇವೆ ಸಲ್ಲಿಸುತ್ತಿದ್ದಾರೆ. ಮಿತ್ರ-ವೃಂದ, ಬನಶಂಕರಿ ಸಾಂಸ್ಕೃತಿಕ ಸಂಘ ಮುಂತಾದ ಹಲವಾರು ಸಂಘ ಸಂಸ್ಥೆಗಳೊಡನೆ ನಿಕಟ ಸಂಪರ್ಕವಿಟ್ಟುಕೊಂಡು ಅವುಗಳ ಪುರೋಭಿವೃದ್ಧಿಗೆ ಶ್ರಮಿಸಿದ್ದಾರೆ. ರಾಷ್ಟ್ರ ಖ್ಯಾತಿಯ ಬಿ. ಎಂ. ಶ್ರೀ ಪ್ರತಿಷ್ಠಾನದಲ್ಲಿ ಕಾರ್ಯಕಾರೀ ಸಮಿತಿ ಸದಸ್ಯರಾಗಿದ್ದಾರೆ. ಕೊಡಗು ಜಿಲ್ಲೆ ಹಾಗೂ ತುಮಕೂರು ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತು, ಸಿ. ಐ. ಎಲ್. ಕಲಾ ಸಂಘ, ಕರ್ನಾಟಕ ರಾಜ್ಯ ಸಾಮಾಜಿಕ ಹಿತರಕ್ಷಣೆ ಹಾಗೂ ಸಾಂಸ್ಕೃತಿಕ ಸಂಘ, ರಕ್ಷಣಾ ಇಲಾಖೆಯ ಇ.ಟಿ.ಡಿ.ಸಿ. ಸಂಸ್ಥೆ ಮುಂತಾದ ಸಂಘ ಸಂಸ್ಥೆಗಳು ಶ್ರೀನಿವಾಸರಾಯರ ಸಾಹಿತ್ಯ ಸೇವೆಯನ್ನು ಗೌರವಿಸಿ ಇವರನ್ನು ಸನ್ಮಾನಿಸಿವೆ.

ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೆ ಶ್ರೀನಿವಾಸರಾಯರ ಕೊಡುಗೆ ಗಣನೀಯ. ಮಕ್ಕಳಸಾಹಿತಿಗಳನ್ನು ಅವರ ಕೃತಿಗಳೊಡನೆ ಪರಿಚಯಿಸುವ 'ಮಕ್ಕಳೇ, ಇವರನ್ನು ನೀವು ಬಲ್ಲಿರಾ'—ಪ್ರಜಾಮತದಲ್ಲಿ ಧಾರಾವಾಹಿಯಾಗಿ ಹರಿದು ಬಂದು ಅಪಾರ ಜನಮನ್ನಣೆ ಗಳಿಸಿದೆ. ಐ. ಬಿ. ಎಚ್. ಸಂಸ್ಥೆಯವರಿಗಾಗಿ 'ಕೆರೂರು ವಾಸುದೇವಾ ಚಾರ್ಯ' ಹಾಗೂ 'ಗಂಗರಾಜ ದುರ್ವಿನೀತ' ಕೃತಿಗಳನ್ನು ರಚಿಸಿಕೊಟ್ಟಿದ್ದಾರೆ. ನ್ಯಾಷನಲ್ ಬುಕ್ ಟ್ರಸ್ಟ್‌ಗಾಗಿ 'ನಮ್ಮ ಪಾಯಿಪಡೆ' ಕೃತಿಯನ್ನೂ, ಭಾರತ-ಭಾರತಿಗಾಗಿ 'ಇಮ್ಮಡಿ ಪುಲಿಕೇಶಿ' ಯನ್ನು ಬರೆದಿರುವ ಇವರು 'ಹ್ಯೂಯನ್ ತ್ಸಾಂಗನ ಇಂಡಿಯಾ ಪ್ರವಾಸ, ಪಂಡಿತ ಗೋವಿಂದ ವಲ್ಲಭ ಪಂತ್, ಮೌಲಾನಾ ಅಬುಲ್ ಕಲಾಂ ಆಜಾದ್, ಪೌರಪ್ರಜ್ಞೆ, ಕವಿರತ್ನತ್ರಯರು, ಸ್ಮರಣೀಯ ಹುತಾತ್ಮರು, ಜಲ ಸಂಪತ್ತು, ಪುಟಾಣಿ ಸಾಹಸಿಗಳು ಮುಂತಾದ ಅನೇಕ ಮಕ್ಕಳ ಪುಸ್ತಕಗಳನ್ನು ರಚಿಸಿದ್ದಾರೆ. ಇಪ್ಪತ್ತಕ್ಕೂ ಹೆಚ್ಚು ರೂಪಕಗಳನ್ನು ಹಾಗು ನಾಟಕ ಗಳನ್ನು ಬಾನುಲಿ ಪ್ರಸಾರಕ್ಕಾಗಿಯೇ ರಚಿಸಿ ಅವು ಯಶಸ್ವೀ ರೇಡಿಯೋ

ಕಾರ್ಯಕ್ರಮಗಳಾಗಿ ಬಿತ್ತರಿಸಲ್ಪಟ್ಟಿವೆ. ಪಂಡಿತ್ ಗೋವಿಂದ ವಲ್ಲಭ ಪಂತ್, ಮೌಲಾನಾ ಅಬುಲ್ ಕಲಾಂ ಆಜಾದ್ ಹಾಗೂ ಮಕ್ಕಳಲ್ಲಿ ಪೌರಪ್ರಜ್ಞೆ ಮುಂತಾದ ಇವರ ರೂಪಕಗಳು ದೂರದರ್ಶನಗಳಲ್ಲಿ ಪ್ರಸಾರವಾಗಿವೆ. ಇವರ 'ಮಾಡು ಸಿಕ್ಕದಲ್ಲಾ' ಕಥೆ ದೂರದರ್ಶನದಲ್ಲಿ ಪ್ರಸಾರವಾಗಿದೆ. ಅನೇಕ ವಿದ್ವಾಂಸರನ್ನು ದೂರದರ್ಶನದಲ್ಲಿ ಶ್ರೀನಿವಾಸರಾಯರು ಸಂದರ್ಶನ ಮಾಡಿದ್ದಾರೆ.

ಶ್ರೀನಿವಾಸರಾಯರ ಕಥೆಗಳು ತಾಯಿನಾಡು, ಪ್ರಜಾವಾಣಿ, ಕನ್ನಡ ಪ್ರಭ, ಸಂಯುಕ್ತ ಕರ್ನಾಟಕ, ಕರ್ಮವೀರ, ಸುಧಾ, ಮಯೂರ, ತರಂಗ, ಮಂಗಳ, ಮಲ್ಲಿಗೆ, ತುಷಾರ, ಕಸ್ತೂರಿ, ಉತ್ಥಾನ, ಬಾಲಮಂಗಳ, ಮದರಾಸಿನ ರಾಯಭಾರಿ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

1986 ರಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯು ಶ್ರೀನಿವಾಸರಾಯರನ್ನು ತನ್ನ 'ಪ್ರವಾಸ ಅಧ್ಯಯನ ಅನುದಾನ ಯೋಜನೆ' ಯಡಿ ಆಂಧ್ರ ಪ್ರದೇಶ ಪ್ರವಾಸಕ್ಕೆ ಆಯ್ಕೆ ಮಾಡಿತು. ಇವರ 'ಬಾಳೇ ಬಂಗಾರ' ಕಾದಂಬರಿ ಚಲನಚಿತ್ರವಾಯಿತು. 'ಸುಧಾ' ಜನಪ್ರಿಯ ಪತ್ರಿಕೆಯಲ್ಲಿ ಇವರ 'ಮಬ್ಬು ಮಂಜಾವು', 'ಸ್ವರ ಮೇಳ', 'ಅನುಬಂಧ', 'ಕಾಡ ಬೆಳದಿಂಗಳು', 'ಇಬ್ಬನಿ' ಮುಂತಾದ ಕಾದಂಬರಿಗಳು ಧಾರಾವಾಹಿಯಾಗಿ ಬಂದವು. ಕನ್ನಡ ಪ್ರಭ ಪತ್ರಿಕೆಯಲ್ಲಿ 'ಸುಣ್ಣವಿಲ್ಲದ ವೀಳ್ಯ', 'ಸೋನಾರ್ ಬಾಂಗ್ಲಾ', 'ಹರಿಗೋಲು', 'ಪ್ರೌಢ ಪ್ರತಾಪ ವೀರ ರಾಜೇಂದ್ರ' ಮುಂತಾದ ಧಾರಾವಾಹಿಗಳು ಪ್ರಕಟವಾದುವು. ಪ್ರಜಾಮತ, ಮಲ್ಲಿಗೆ, ಮಂಗಳ ಪತ್ರಿಕೆಗಳಲ್ಲಿ ಅನೇಕ ಕಾದಂಬರಿಗಳು ಧಾರಾವಾಹಿಯಾಗಿ ಮೂಡಿ ಬಂದಿವೆ. ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ 'ಕಾಕಾ ಕಾಲೇಲ್ಕರ್' ಎಂಬ ಹಿಂದಿ ಕೃತಿಯನ್ನು ರಾಯರು ಕನ್ನಡಕ್ಕೆಅನುವಾದ ಮಾಡಿ ಕೊಟ್ಟಿದ್ದಾರೆ. ಇವರ ಬಹಳಷ್ಟು ಪ್ರವಾಸಿ ಲೇಖನಗಳು 'ಯಾತ್ರಿಕ'ದಲ್ಲಿ ಪ್ರಕಟಗೊಂಡಿವೆ. ಈಚೆಗೆ 'ಜೀವನ ಚರಿತ್ರೆ' ವಿಭಾಗದಲ್ಲೂ ಕೈಯಾಡಿಸುತ್ತಿರುವ ರಾಯರು 'ವೀರಪ್ಪ ಮೊಯಿಲಿ' ಯವರ ಸಂಕ್ಷಿಪ್ತ ವ್ಯಕ್ತಿಚಿತ್ರಣವನ್ನು ರಚಿಸಿದ್ದಾರೆ.

ಶ್ರೀ ಎಸ್. ವಿ. ಶ್ರೀನಿವಾಸರಾಯರು ಸಾಹಿತ್ಯವನ್ನು ಜೀವನಕ್ಕಾಗಿ ರಚಿಸಿದವರಲ್ಲ. ಆದರೆ ಸಾಹಿತ್ಯ ರಚನೆಯನ್ನೇ ತಮ್ಮ ಜೀವನದ ಪ್ರಧಾನ ಹವ್ಯಾಸವನ್ನಾಗಿ ಮಾಡಿಕೊಂಡವರು. ಆದರೆ ಸಾಹಿತ್ಯದ ಆಕರ್ಷಣೆಯನ್ನು ಹುಚ್ಚಾಗಿ ಮಾಡಿಕೊಳ್ಳದೆ, ಸಾಹಿತ್ಯ ರಂಗದ ಯಾವ ಗುಂಪಿನೊಡನೆಯೂ ಪಾಮೀಲಾಗದೆ, ತಮ್ಮ ವ್ಯಕ್ತಿತ್ವವನ್ನು, ಘನತೆಯನ್ನು ಉಳಿಸಿಕೊಂಡು ಬಂದಿರುವ ಶ್ರೀನಿವಾಸರಾಯರು ಎಲ್ಲ ಸಾಹಿತಿಗಳಿಗೂ ಚಿರಪರಿಚಿತರು. ಸಜ್ಜನಿಕೆ-ಆತ್ಮೀಯತೆಗಳ ಅವರ ವ್ಯಕ್ತಿತ್ವ ಎಲ್ಲರಲ್ಲೂ ಸ್ನೇಹವನ್ನು ಕಂಡುಕೊಂಡಿದೆ.

1992ರಲ್ಲಿ ಶ್ರೀ ಶ್ರೀನಿವಾಸರಾವ್ ಅವರಿಗೆ ಸಾಹಿತ್ಯ ಹಾಗೂ ಸಾಂಸ್ಕೃತಿಕ ಅಧ್ಯಯನಗಳ ನಿಮಿತ್ತ ಅಮೆರಿಕಾಕ್ಕೆ ಆಹ್ವಾನ ಬಂದಿದ್ದು, ಅಮೆರಿಕಾ ದೇಶಕ್ಕೆ ಹೋಗಿ ಬಂದರು. ಅಲ್ಲಿಯ ಗ್ರಂಥಾಲಯಗಳು, ಪುಸ್ತಕಗಳ ಸಂರಕ್ಷಣೆ, ಮಾಹಿತಿ ವ್ಯವಸ್ಥೆ, ಗ್ರಂಥಾಲಯದ ಕಂಪ್ಯೂಟರೀಕರಣ ಇವೆಲ್ಲವನ್ನು ನೋಡಿ ಬಂದ ಅವರು ಈ ಬದಲಾವಣೆ ನಮ್ಮಲ್ಲಿ ಬರಲು ಇನ್ನೆಷ್ಟು ದಶಕಗಳು ಬೇಕೋ ಎನ್ನುತ್ತಾರೆ. ಅಮೆರಿಕಾದ ಒಂದು ಗ್ರಂಥಾಲಯಕ್ಕೆ ಅವರು ಹೋದಾಗ, ಕರ್ನಾಟಕದ ಸಾಹಿತಿ ತಾವೆಂದು ತಿಳಿಸಿದೊಡನೆಯೇ ಅವರ ಹೆಸರು, ಹುಟ್ಟಿದ ದಿನಾಂಕ, ವೃತ್ತಿ, ಬರೆದ ಕೃತಿಗಳು, ಅವುಗಳ ಸಂಕ್ಷಿಪ್ತ ಪರಿಚಯದ ಕಂಪ್ಯೂಟರ್ ಪ್ರಿಂಟೌಟನ್ನು ಕ್ಷಣಾರ್ಧದಲ್ಲಿ ಆ ಗ್ರಂಥಪಾಲಕ ತೆಗೆದು ಕೊಟ್ಟಿದ್ದು ಇನ್ನೂ ನಂಬಲಾಗದ ವಿಸ್ಮಯ ಎನ್ನುತ್ತಾರೆ ಶ್ರೀನಿವಾಸರಾವ್.

ಉತ್ತಮ ಸಾಂಸ್ಕೃತಿಕ ಕೆಲಸಗಳಲ್ಲಿ ಸದಾ ಮುಂದಿರುವ ಶ್ರೀನಿವಾಸರಾವ್ ಎಲ್ಲರನ್ನು ಪ್ರೀತಿಯಿಂದ ಕಾಣಬಲ್ಲ ಹೃದಯವಂತಿಕೆಯನ್ನು ಪಡೆದುಕೊಂಡಿದ್ದಾರೆ. ಹಾಗೆಯೇ ಎಲ್ಲರ ಅಭಿಮಾನವನ್ನು ಗಳಿಸಿಕೊಂಡಿದ್ದಾರೆ.





# ಶಕ್ತಿಸಂಪನ್ನ ಪ್ರತಿಭಾವಂತ ಶ್ರೀನಿವಾಸರಾವ್

—ಪ್ರೊ॥ ಆರ್. ಜಿ. ಕುಲಕರ್ಣಿ

ಸದ್ದುಗದ್ದಲವಿಲ್ಲದೆ, ಅಪಾರ ಅಧ್ಯಯನ ಸತ್ವ ಪಡೆದ ಎಸ್. ಎ. ಶ್ರೀನಿವಾಸ ರಾವ್, ವೈಜ್ಞಾನಿಕ ದೃಷ್ಟಿ, ವಾಸ್ತವತೆಯ ಗಟ್ಟಿತನ, ಚಾರಿತ್ರಿಕ ಸೂಕ್ಷ್ಮ ಒಳ ನೋಟಗಳನ್ನೊಳಗೊಂಡ–ಬಹುಶಃ ಅದೇ ಕಾರಣಕ್ಕಾಗಿ–ಶಕ್ತಿಸಂಪನ್ನ ಪ್ರತಿಭಾವಂತ ರಾಗಿದ್ದಾರೆ. ಈ ಸೃಜನಶೀಲ ಲೇಖಕರು ಅರಗಿಸಿಕೊಂಡ ವಿದ್ಯಾವೈವಿಧ್ಯ, ಸಾಧಿಸಿದ ರಸಾತ್ಮಕ ಸಾಹಿತ್ಯಸಿದ್ಧಿ, ಯಾರಿಗಾದರೂ ಅಚ್ಚರಿ ಹುಟ್ಟಿಸುತ್ತವೆ. ಎಂ.ಎ. (ಕನ್ನಡ) ಹಾಗೂ ಬಿ.ಎಸ್.ಸಿ. (ಪಿ.ಸಿ.ಎಂ.)–ಶೈಕ್ಷಣಿಕ ಉಪಾಧಿಗಳನ್ನು, ಎ. ಎಂ. ಐ. ಇ. (ಎ) ಇಂಜನೀಯರಿಂಗ್ ಜ್ಞಾನದೊಂದಿಗೆ ಸಹಜವಾಗಿ ಸಮರಸಗೊಳಿಸಿಕೊಂಡ ಈ ಕನ್ನಡ ಕುವರರು, ರಾಷ್ಟ್ರಭಾಷಾ ವಿಶಾರದರೂ ಆಗಿ, ರಷ್ಯನ್ ಭಾಷೆಯ ಡಿಪ್ಲೊಮಾ ಕೂಡ ಪಡೆದುಕೊಂಡಿದ್ದಾರೆ. ವೃತ್ತಿಯಿಂದ ಭಾರತ ಸರ್ಕಾರದ ರಕ್ಷಣಾ ಇಲಾಖೆ ಯಲ್ಲಿ ಸೈಂಟಿಫಿಕ್ ಆಫೀಸರರಾಗಿ ದುಡಿದು ನಿವೃತ್ತರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಶ್ರೀನಿವಾಸರಾವ್ ಅವರು ಕನ್ನಡದ ಪ್ರಮುಖ ದೈನಂದಿನ, ಸಾಪ್ತಾಹಿಕ ಹಾಗೂ ಮಾಸಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಕಟಗೊಳಿಸಿದ, ಕಾದಂಬರಿಗಳ ಅನುಭವ ದ್ರವ್ಯವು ಸ್ವತಃ ವೈವಿಧ್ಯಪೂರ್ಣವಾಗಿರುವುದಲ್ಲದೆ, ಕಥೆ, ಕಾದಂಬರಿ, ನಾಟಕ ವ್ಯಕ್ತಿಚಿತ್ರ, ಪ್ರಬಂಧ-ಮೊದಲಾದ ನಾನಾ ಸಾಹಿತ್ಯ ಪ್ರಕಾರಗಳಲ್ಲಿ ಮೈದಾಳಿವೆ. ಇವರ ಅನೇಕ ಅನುವಾದಗಳಲ್ಲಿ, "ಇಪ್ಪತ್ತೊಂದು ಬಂಗಾಳಿ ಕಥೆಗಳು" ತುಂಬಾ ಪ್ರಾತಿನಿಧಿಕ ಕೃತಿ. ರವೀಂದ್ರನಾಥ ಟ್ಯಾಗೋರ್, ಶರಚ್ಚಂದ್ರ ಚಟರ್ಜಿಯವರಂಥ ವಿಶ್ವವಿಖ್ಯಾತ ಲೇಖಕರ ನಂತರದ ಬಂಗಾಳಿ ಪ್ರತಿಭೆಯು, ಸ್ವಾತಂತ್ರ್ಯ ಪೂರ್ವದ, ಸ್ವಾತಂತ್ರ್ಯಪ್ರಾಪ್ತಿಸನ್ನಿಹಿತವಾದ ಕಾಲದ ಹಾಗೂ ತದನಂತರದ ಬಂಗಾಳಿ ಜೀವನ, ಸೃಜನಶೀಲ ಪ್ರಜ್ಞೆಯ ವೈಶಿಷ್ಟ್ಯವು, ಈ ಕಥೆಗಳಲ್ಲಿ ಅಭಿವ್ಯಕ್ತಿ ಪಡೆದಿದೆ. ವಿಮರ್ಶೆಯು, ಮಾನವೀಯ ಸಮಸ್ಯೆಗಳ ಮೂಲಭೂತ ಸ್ವರೂಪವನ್ನು ಗುರುತಿಸದಿದ್ದರೆ, ಈ ಕತೆಗಳ ಸಾರ್ವತ್ರಿಕ ಮೌಲ್ಯ ಅರ್ಥವಾಗುವುದಿಲ್ಲ. ಉದಾಹರಣೆಗೆ–ನಾರಾಯಣ ಗಂಗೋಪಧ್ಯಾಯರ "ಸನ್ಮಾನ್ಯ ಪರೀಕ್ಷಕರಿಗೆ" ಎಂಬ ಕತೆಯು ಮೇಲುನೋಟಕ್ಕೆ, ಒಬ್ಬ ಬಡ ವಿದ್ಯಾರ್ಥಿಯು ವಿದ್ಯಾಭ್ಯಾಸ ಪೂರ್ಣ ಗೊಳಿಸಲು ನಡಿಸಿದ ನಿಷ್ಫಲ, ದುರಂತ ಹೋರಾಟದ ಚಿತ್ರಣದಂತೆ ಕಾಣುತ್ತದೆ.

ಆದರೆ ಸ್ವತಂತ್ರ ಭಾರತವು, ಪರೀಕ್ಷೆಗಳಲ್ಲಿ ಕಾಪಿ ಮಾಡುವುದನ್ನು ಶಾಸನಬದ್ಧ ಹಕ್ಕನ್ನಾಗಿ ಬೇಡುವ ಸನ್ನಿವೇಶವನ್ನು ಎದುರಿಸಬೇಕಾಗಿದೆ. ಇದು ಕೇವಲ ಕೆಲವೊಂದು ರಾಜಕೀಯ ಪಕ್ಷಗಳ ಮತ-ವೋಟು–ಪ್ರಾಪ್ತಿಯ ಪ್ರಶ್ನೆಯಲ್ಲ. ಸ್ವತಂತ್ರ ಭಾರತವು ಶಿಕ್ಷಣದ ಧ್ಯೇಯೋದ್ದೇಶಗಳ ಸ್ಪಷ್ಟ ಕಲ್ಪನೆಯನ್ನೇ ರೂಪಿಸಿಕೊಳ್ಳದಿರುವ ಸಮಸ್ಯೆ ಇದಾಗಿದೆ.

## ಜ್ಞಾನದ ವ್ಯಾಪಕತೆ ಸಾಧ್ಯವೆ ?

ಪದವಿಗಳಿಗೂ ಸಮಾಜದ ಸ್ಥಾನಮಾನ, ನೌಕರಿಗಳಿಗೂ ಇರುವ ಸಂಬಂಧ ತಪ್ಪಿಸಬಹುದೆ ? ಹಾಗೆ ಮಾಡಿದರೆ ಶಿಕ್ಷಣ, ಜ್ಞಾನ, ಕಲಾಪ್ರಜ್ಞೆ, ವ್ಯಾಪಕವಾಗಿ, ಸಾರ್ವತ್ರಿಕವಾಗಿ ಹರಡುವುದು ಸಾಧ್ಯವೆ ? ಸ್ವತಂತ್ರ ಭಾರತವು, ಜಾತಿ, ವರ್ಣಗಳ ಪರಿಮಿತಿಯಿಂದ ಮೇಲೇಳಬೇಕಾದರೆ, ಶಿಕ್ಷಣದ ಸಾರ್ವತ್ರಿಕತೆಯನ್ನೂ, ಉತ್ಕೃಷ್ಟತೆಯನ್ನೂ ಒಟ್ಟಿಗೇ ಸಾಧಿಸುವ ವಿಧಾನವನ್ನು ರೂಪಿಸಿಕೊಂಡು ವಿಶ್ವಕ್ಕೇ ಮಾದರಿಯಾಗಬೇಕಾಗಿದೆ.

ಬಂಗಾಳಿ ಸಾಹಿತ್ಯವು ರವೀಂದ್ರನಾಥ ಟ್ಯಾಗೋರರಿಂದ ಬಹು ಮುಂದೆ ಬಂದಿದೆ ಎಂದು ಹೇಳಿಕೊಳ್ಳಬಹುದು. ಆದರೆ ಆ ರವೀಂದ್ರ ಸಂಗೀತದ ಆ ಧ್ವನಿ, ಅದರ ಸಾಂಕೇತಿಕತೆ, ಸ್ವರಮೇಳಗಳ ಕಂಪಿನಿಂದ ದೂರ ಸರಿದಿಲ್ಲ. ಉದಾಹರಣೆಗೆ ಎಂಬತ್ತರ ದಶಕದ ಬಾಂಗ್ಲಾ ಸಣ್ಣ ಕಥೆಗಾರರ ಆಂದೋಲನದ ಪ್ರಮುಖ ನೇತಾರರಾದ ದೇವೇಶ್ ರಾಯ್‌ರ "ಹಿಂದಿನ ಭೂಮಿ" ಕಥೆಯ ಸೂಕ್ಷ್ಮ ಧ್ವನಿತರಂಗಗಳನ್ನು ಗಮನಿಸಿದರೆ, ಈ ಮಾತು ಸ್ಪಷ್ಟವಾಗುವುದು.

ರವೀಂದ್ರರು, ನಂದಲಾಲಬಸು, ಶರಚ್ಚಂದ್ರರಂಥ ಕವಿ, ಸಾಹಿತಿ, ಕಲಾವಿದರು, ಆಗಿಹೋದ ಪ್ರತಿಭಾಸತ್ವಗಳಲ್ಲ, ಜನಾಂಗದ ಸಂಸ್ಕೃತಿಯ ಜೀವಾಳವಾಗಿ ನಿಲ್ಲುವ ಚೈತನ್ಯದ ಕಿರಣಗಳಾಗಿರುತ್ತಾರೆ. "ಹಿಂದಿನ ಭೂಮಿ" ಕತೆಯಲ್ಲಿ ಎಷ್ಟೇ ಮಾನವೀಯ ಸುಖ ದುಃಖದ ಚಿತ್ರಣಗಳಿದ್ದರೂ ಅದರ ಹಿಂದಿನ ಒಂದು ಸೌಂದರ್ಯ ಭೂಮಿಕೆ, ಶಾಶ್ವತ ಕಾಂತಿಯತ್ತ, ಮತ್ತೆ ಮತ್ತೆ ಗಮನ ಹರಿಯುತ್ತದೆ. ಇಂಥದೊಂದು ಕಲಾ ಸೂಕ್ಷ್ಮ ಶರೀರದತ್ತ ಕನ್ನಡ ವಿಮರ್ಶೆ ಹಾಗೂ ಸಾಹಿತ್ಯ ಪ್ರಜ್ಞೆಯ ಗಮನ ಹರಿಯುವಂತೆ ಮಾಡಬೇಕಾಗಿದೆ. ಇದು ಪ್ರಜಾಪ್ರಭುತ್ವದ ಸಾರ್ವತ್ರಿಕತೆಯ ಮೂಲಭೂತ ಸಮಸ್ಯೆ.

"ಹಿಂದಿನ ಭೂಮಿ" ಕತೆಯಲ್ಲಿ, ಬಾಬೂ ಈ, "ನಿಶೀಥ್ ಕೀ ಕ್ ಎ ಗೈಲೊ ಮೌನೆ ?" (ಮಧ್ಯರಾತ್ರಿ ನನ್ನ ಮನದಲ್ಲಿ ಏನು ಹೇಳಿ ಹೋಯಿತು ?) ಎಂಬಂಥ ಹಾಡು ಹಾಡುತ್ತಾಳೆ. ಮಧ್ಯರಾತ್ರಿಯೂ ಕವಿಗೆ ಏನೊ ರಹಸ್ಯ ಹೇಳುತ್ತಿದೆ. ಜೀವನವೇ ಅರ್ಥಪೂರ್ಣವಾಗಿದೆ.

ಶ್ರೀನಿವಾಸರಾವ್, "ಇಪ್ಪತ್ತೊಂದು ಬಂಗಾಳಿ ಕಥೆ" ಗಳನ್ನು ಅನುವಾದಿಸಿ ಕನ್ನಡ ಸಾಹಿತ್ಯ ರಂಗಕ್ಕೆ ಅಮೂಲ್ಯ ಕಾಣಿಕೆ ಸಲ್ಲಿಸಿದ್ದಾರೆ. ಅವರ ಅನುವಾದವೂ ಸಹಜ, ಸತ್ವಶಾಲಿ.

## ಚರಿತ್ರೆ–ಚಾರಿತ್ರ್ಯ

ಈ ಲೇಖಕರು ತಮ್ಮ ಸಮಕಾಲೀನ ಹಾಗೂ ಕನ್ನಡ ನೆಲೆಯ ಜೀವನವನ್ನು ಅರ್ಥೈಸುತ್ತ ಇಡೀ ಕನ್ನಡ ಸಾಹಿತ್ಯ ಚರಿತ್ರೆಯನ್ನೇ ಅರ್ಥೈಸುವ "ಕನ್ನಡ ಸಾಹಿತಿ ದರ್ಶನ" ದಂಥ ಕೃತಿ ರಚಿಸಿದಾಗ, ಕೊಡಗಿನ ಜನಾಂಗದ ಚಾರಿತ್ರ್ಯ ಶೋಧಿಸುವ "ಪ್ರೌಢ ಪ್ರತಾಪ ವೀರರಾಜೇಂದ್ರ" ದಂಥ ಐತಿಹಾಸಿಕ ಕಾದಂಬರಿ ರಚಿಸಿದಾಗ, ದೇಶಕಾಲಗಳ ಹಿಂದಿನ ಭೂಮಿಕೆಯನ್ನು ಕನ್ನಡಿಸುವ ಸಾಧನೆ ಮಾಡುತ್ತಾರೆ.

"ಕನ್ನಡ ಸಾಹಿತಿ ದರ್ಶನ" ಒಂದು ಅಪೂರ್ವ ಸಾಹಸದ ಫಲ. ಎಲ್. ಎಸ್. ಶೇಷಗಿರಿರಾಯರು ಈ ಕೃತಿಯ ಬಗೆಗೆ ಹೇಳಿದ ಮಾತುಗಳನ್ನು ವಿಶೇಷವಾಗಿ ಗಮನಿಸುವುದು ಅಗತ್ಯ.

"ಶ್ರೀ ಎಸ್. ವಿ. ಶ್ರೀನಿವಾಸರಾಯರು ಕನ್ನಡ ಸಾಹಿತಿ ದರ್ಶನದಲ್ಲಿ ಮಾಡಿರುವ ಕೆಲಸ ಮೇಲುನೋಟಕ್ಕೆ ಸುಲಭವಾದ ಕಾಣುವಂಥಹದು. ಆದರೆ ಅಸಾಧಾರಣ ಶ್ರದ್ಧೆ, ಶ್ರಮಗಳಿಲ್ಲದೆ ಇಂತಹ ಕೆಲಸ ಸಂಪೂರ್ಣವಾಗಲಾರದು. ನೂರಾರು ವರ್ಷಗಳ ಸಾಹಿತಿಗಳ ವಿಷಯವಿರಲಿ, ನಿನ್ನೆ ಮೊನ್ನೆಯ ಸಾಹಿತಿಗಳನ್ನು ಕುರಿತು ಖಚಿತವಾಗಿ ವಿವರಗಳನ್ನು ಸಂಗ್ರಹಿಸುವುದೂ ನಮ್ಮ ದೇಶದಲ್ಲಿ ಕಷ್ಟದ ವಿಷಯವೇ. ಶ್ರೀ ಶ್ರೀನಿವಾಸರಾಯರು ಇಷ್ಟೊಂದು ವಿಷಯವನ್ನು ಸಂಗ್ರಹಿಸಿ ಅದಕ್ಕೊಂದು ಆಕರ್ಷಕ ರೂಪಕೊಟ್ಟು ಮಕ್ಕಳಿಗೆ ಒದಗಿಸಿದ್ದಾರೆ."

(ಮುನ್ನುಡಿ. ಪು. *iii*)

ಆದರೆ ಒಂದು ದಶಕದ ಅವಿಶ್ರಾಂತ ಶ್ರಮದ ಫಲವಾಗಿ ರೂಪಗೊಂಡ ಈ ಕೃತಿಯು, ಎಳೆಯರೂ, ದೊಡ್ಡವರೂ ಮತ್ತೆ ಮತ್ತೆ ಬಳಸುವ ಪುಸ್ತಕವೆಂದು

ಮರೆಯುವಂತಿಲ್ಲ. ಡಾ|| ರಂ. ಶ್ರೀ. ಮುಗಳಿಯವರು ಹೇಳುವಂತೆ "ಹಳೆಯ ಮತ್ತು ಹೊಸ ಸಾಹಿತಿಗಳ ಸಮಗ್ರ ಪರಿಚಯವನ್ನು ಒಳಗೊಂಡ ಒಂದೇ ಒಂದು ಪುಸ್ತಕ ಯಾವುದೂ ಇರಲಿಲ್ಲ." ಶ್ರೀನಿವಾಸರಾಯರು ಅಂಥ ಸಾಹಸಕ್ಕೆ ಕೈಹಾಕಿ ಕನ್ನಡಿಗರನ್ನು ಋಣಿಗಳನ್ನಾಗಿಸಿದ್ದಾರೆ.

ನಿಜವಾಗಿ ಕನ್ನಡ ಸಾಹಿತ್ಯ ಚರಿತ್ರೆಯು ಅನೇಕ ರೂಪಗಳು ಮೈದಾಳಬೇಕಾಗಿವೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮತದೃಷ್ಟಿ, ಸಾಹಿತ್ಯ, ಛಂದಸ್ಸು, ವಿಷಯ ಪ್ರತಿಪಾದನೆಗಳ ವೈಶಿಷ್ಟ್ಯ ಪರಂಪರೆ ಗುರುತಿಸುವ ಪ್ರಯತ್ನಗಳಾಗಿವೆ. ಆದರೆ ಯಾವ ಮೂಲಭೂತ ಮೌಲ್ಯಗಳು ಇಡಿ ಭಾರತದ ಸಾಹಿತ್ಯವಾಹಿನಿಯಲ್ಲಿ ಜೀವ ಸತ್ವಗಳಾಗಿ ಹರಿದಿವೆ-ಎಂಬುದನ್ನೂ ಅವು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹೇಗೆ ಜೀವಂತವಾಗಿವೆ ಎಂಬುದನ್ನೂ ನಮ್ಮ ವಿಮರ್ಶಾ ರಂಗವು ಶೋಧಿಸಬೇಕಾಗಿದೆ. ಹೆಸರನ್ನು ಅರಗಿಸಿಕೊಳ್ಳುತ್ತ, ತನ್ನದನ್ನು ಕಾಯ್ದುಕೊಳ್ಳುತ್ತ ಸಾಗಿದ ಕನ್ನಡತನ, ಕುಮಾರವ್ಯಾಸನ ಕೃಷ್ಣ, ವಚನಕಾರರ ಅಲ್ಲಮ, ರತ್ನಾಕರವರ್ಣಿಯ ಭರತ-ಪಾತ್ರ ಗಳ ಅಖಂಡತೆಯಲ್ಲಿ ಕಾಣಸುತ್ತದೆಂದು ಡಾ|| ದ. ರಾ. ಬೇಂದ್ರೆ ಹೇಳುತ್ತಾರೆ. ಈ ದೃಷ್ಟಿಯಿಂದ ಸಾಹಿತ್ಯ ಚರಿತ್ರೆಯನ್ನು ಅಧ್ಯಯನ ಮಾಡುವುದಕ್ಕೆ ಶ್ರೀನಿವಾಸ ರಾಯರ ಒಂದು ವಿಶಿಷ್ಟ ಪ್ರಯೋಗವೂ ಪ್ರೇರಕವಾದರೆ ಅವರ ಪ್ರಯತ್ನ ಸಾರ್ಥಕವಾಗುವುದು.

ಚರಿತ್ರೆಯು, ಕೇವಲ ಐತಿಹಾಸಿಕ ವಾಸ್ತವತೆಯ ದಾಖಲೆಯಲ್ಲ. ಶಾಶ್ವತ ಮೌಲ್ಯಗಳನ್ನ ಆವಿಷ್ಕರಿಸುತ್ತ, ಜನಾಂಗದ ಚಾರಿತ್ರ್ಯವನ್ನೇ ರೂಪಿಸುವುದು ಐತಿಹಾಸಿಕ ಪ್ರಜ್ಞೆಯ ಪ್ರಧಾನ ಕಾರ್ಯ.

ಈ ದೃಷ್ಟಿಯಿಂದ ಶ್ರೀನಿವಾಸರಾಯರ "ಪ್ರೌಢ ಪ್ರತಾಪ ವೀರ ರಾಜೇಂದ್ರ" ಎಂಬ ಐತಿಹಾಸಿಕ ಕಾದಂಬರಿಯು ವಿಶೇಷ ಅಧ್ಯಯನ ಯೋಗ್ಯ ಕೃತಿ.

ಡಾ|| ಪಿ. ಎಸ್. ರಾಮಾನುಜಂ-ಈ ಗ್ರಂಥದ ಮುನ್ನುಡಿಯಲ್ಲಿ ಹೇಳುವಂತೆ "ಕಾಡುಮೇಡುಗಳ ನಿಗೂಢತೆಯಲ್ಲಿ ಅಡಗಿಹೋಗಿರುವ ಕೊಡವರ ಸಾಹಸದ ಬಗ್ಗೆ ಬಂದಿರುವ ಗ್ರಂಥಗಳು ಕಡಿಮೆ. ಅದರಲ್ಲೂ ಅವರ ಜೀವನ ಕ್ರಮವನ್ನು, ಭಾವನೆ ಗಳನ್ನೂ ಪ್ರಾಮಾಣಿಕವಾಗಿ ಪ್ರತಿಬಿಂಬಿಸುವ ಪ್ರಯತ್ನಗಳೂ ಆಗಬೇಕಾದಷ್ಟು ಆಗಿಲ್ಲ. ........ಪ್ರಕೃತ ಕಾದಂಬರಿಯ ಲೇಖಕರು ಕೊಡವರ ಜೀವನದ ಬಗ್ಗೆ ಸಾಕಷ್ಟು ಅಧ್ಯಯನ ಮಾಡಿಯೇ ಈ ಸಾಹಸಕ್ಕೆ ಕೈಹಾಕಿರುವುದು ಈ ಕಾದಂಬರಿ ಯನ್ನು ಓದುವವರಿಗೆ ಸ್ಪಷ್ಟವಾಗುತ್ತದೆ."

(ಪು. *iv*)

ಐತಿಹಾಸಿಕ ವಾಸ್ತವತೆಯನ್ನು ಕಡೆಗಣಿಸದೆ, ಸರಳ ನಿರೂಪಣೆಯಲ್ಲಿಯೂ ರಸವಂತಿಕೆಯನ್ನು, ಸಂಕೀರ್ಣತೆಯನ್ನು ಜೀವಂತವಾಗಿಸಿಕೊಂಡು ಒಂದು ಜನಾಂಗದ ಕತೆಯನ್ನು ಒಬ್ಬ ರಾಜನ ಚರಿತ್ರೆಯ ಮೂಲಕ ಹೇಳುತ್ತವೆ, ಆ ಜನಾಂಗದ ಸಾಂಸ್ಕೃತಿಕ ಸತ್ವದ ಸಂಸ್ಪರ್ಶ ಮೂಡಿಸುವುದು ಶ್ರೀನಿವಾಸರಾಯರಿಗೆ ಸಾಧ್ಯವಾಗಿದೆ.

ಈ ಕಾದಂಬರಿಯ ಕೊನೆಗೆ ಕೊಟ್ಟಿರುವ "ಅರ್ಥಕೋಶ" ವನ್ನು ಗಮನಿಸಿದರೆ ಲೇಖಕರು, ಕೊಡವರ ಜನಾಂಗದ ಪರಿಭಾಷೆಯನ್ನು ಅರಗಿಸಿಕೊಂಡು ಶೈಲಿಯೊಂದನ್ನು ರೂಪಿಸಿಕೊಂಡ ಬಗೆ ಆಶ್ಚರ್ಯಕರವಾಗಿ ಕಾಣುತ್ತದೆ. ಇದನ್ನು ಗಮನಿಸದೆ, ಕಾದಂಬರಿಯನ್ನು ಓದುತ್ತಿದ್ದರೆ, ಅವರ ಸರಳತೆಯ ಮಾಯೆಯಲ್ಲಿ, ಸಹಜ ಓಟದಲ್ಲಿ, ಅಧ್ಯಯನದ ಪಾಕಕ್ರಿಯೆ ಲಕ್ಷ್ಯಕ್ಕೇ ಬರುವುದಿಲ್ಲ. ಜೀವಂತ ಮಾನವೀಯತೆಯೊಂದಿಗೆ ವಿಶಿಷ್ಟ ಸಂಸ್ಕೃತಿಯ ಜೀವಂತಿಕೆಯೂ ಸಮರಸ ಗೊಂಡಿರುವುದನ್ನು ಗುರುತಿಸಲು ಸಮರ್ಥ ವಿಮರ್ಶೆಯೇ ಬೇಕಾಗುತ್ತದೆ.

ದೊರೆ ವೀರರಾಜೇಂದ್ರನು, ಒಳಹೊರಗಿನ ಶತ್ರುಗಳೊಂದಿಗೆ ಹೋರಾಡಿ, ಕೊಡಗಿನ ಜನತೆಗೆ ತನ್ನತನದ ಒಂದು ನಿಲುವನ್ನು, ಬದುಕನ್ನು ಒದಗಿಸಿಕೊಟ್ಟ ವೀರಚೇತನ.

ಕರ್ನಾಟಕವು ಇಂದು ಭೌಗೋಲಿಕವಾಗಿ ಒಂದಾಗಿದ್ದರೂ ಸಾಂಸ್ಕೃತಿಕ ಅಖಂಡತ್ವವನ್ನು ಇನ್ನೂ ಪಡೆದಿಲ್ಲ. ಮರಾಠಿ, ತಮಿಳು, ತೆಲುಗು, ಮಲೆಯಾಳಿ ಭಾಷಿಕರನ್ನು ತನ್ನಲ್ಲಿ ಅರಗಿಸಿಕೊಂಡಿಲ್ಲ. ಈ ಛಿದ್ರ ವಿಚ್ಛಿದ್ರ ಪರಿಸರದಲ್ಲಿ ಶ್ರೀನಿವಾಸ ರಾಯರಂಥ ಐತಿಹಾಸಿಕ ಪ್ರಜ್ಞೆಯ ಕಾದಂಬರಿಕಾರರು, ಕರ್ನಾಟಕದ ಅಖಂಡಶೀಲ, ಸಂಸ್ಕೃತಿ ಪ್ರಜ್ಞೆಯನ್ನು ಅಭಿವ್ಯಕ್ತಗೊಳಿಸುವ ಸೃಜನಶೀಲ ಕೃತಿಗಳನ್ನು ಸಹಸ್ರಾರು ಸಂಖ್ಯೆಯಲ್ಲಿ ಪ್ರಕಟಿಸಬೇಕಾಗಿದೆ.

## ಸಹಜ ರಮಣೀಯ ಕತೆ

ಡಾ॥ ಗೋಕಾಕರು ಶ್ರೀನಿವಾಸರಾಯರಿಗೆ ಬರೆದ 1-3-1991 ರ ಪತ್ರದಲ್ಲಿ ವೀರರಾಜೇಂದ್ರನನ್ನು ಕುರಿತ ಈ ಕಾದಂಬರಿಯ ಬಗೆಗೆ ಅರ್ಥಪೂರ್ಣವಾದ ಮಾತು ಆಡಿದ್ದಾರೆ—

"ಇದೊಂದು ಒಳ್ಳೆಯ ಸಂವಿಧಾನಕ ಹಾಗೂ ಪರಿಸರದ ಕಾದಂಬರಿ, ಅವರ ಚಾರಿತ್ರಿಕ, ಐತಿಹಾಸಿಕ ಹಾಗೂ ಭೌಗೋಲಿಕ ವಿವರಗಳನ್ನು ನೀವು ಚೆನ್ನಾಗಿ ಜೀರ್ಣಿಸಿದ್ದೀರಿ. ನೀವು ಸ್ವೀಕರಿಸಿದ ತಂತ್ರ, ಕಥಾನಕವನ್ನು ರಸವತ್ತಾಗಿಸಿದೆ."

ಭೌಗೋಲಿಕ ವಿವರವೆಂದಾಗ ಕೊಡಗಿನ ವರ್ಣಮಯ ವನ್ಯ ಸಂಪತ್ತಿಯು ಸಂದರ್ಭದಲ್ಲಿ ಅಪೂರ್ವ ಕಾಂತಿಮಯತೆ, ಸಹಜ ರಮಣೀಯ ಕತೆಗಳೇ ಸಹೃದಯರ ಅಂತಃಕರಣಗಳನ್ನು ಸಂಸ್ಪರ್ಶಿಸುತ್ತವೆ. ಅದರಲ್ಲಿಯೂ ಶ್ರೀನಿವಾಸರಾಯರಂಥ ಸೌಂದರ್ಯ ಪ್ರಜ್ಞೆಯ ಕಲಾವಿದರ ಕುಂಚದಲ್ಲಿ ಪ್ರಕೃತಿ ಹಾಗೂ ಮಾನವ ಜೀವನಗಳು ಸಹಜ ಸಾಮರಸ್ಯ ಪಡೆದು, ಮೈದುಂಬಿ ನಿಲ್ಲುತ್ತವೆ. ಉದಾಹರಣೆಗೆ ವೀರ ರಾಜೇಂದ್ರನು ತನ್ನ ರಾಣಿಯರೊಂದಿಗೆ ಮಡಿಕೇರಿಯ ಪ್ರಖ್ಯಾತ ಮಂಜಿನ ಗಂಧರ್ವ ಪರಿಸರದಲ್ಲಿ ಒಂದು ಪ್ರಪಾತದ ಅಂಚಿಗೆ ಬಂದು ನಿಂತಾಗಿನ ವರ್ಣನೆ ಓದುತ್ತಿದ್ದರೆ, ಯಾರಿಗಾದರೂ ಮೈಮರೆವು ಉಂಟಾಗುತ್ತದೆ.

(ಪು. 196)

"ಬೆಟ್ಟದ ಅಂಚಿನಲ್ಲಿ ನಿಂತಿದ್ದರು ಎಲ್ಲರೂ ! ಎದುರಿಗೆ ಒಂದರ ಹಿಂದೊಂದು ಕಾಣಿಸುತ್ತಿದೆ ; ಎತ್ತರ, ಬಲು ಎತ್ತರ, ಗಿಡ್ಡ, ಅತಿಗಿಡ್ಡ, ಬೆಟ್ಟಸ್ತೋಮದ ಹಸಿರು ಉಬ್ಬುತಗ್ಗು, ಬೆಳ್ಳಿಯ ದ್ರವದಂತೆ ಅಲ್ಲಲ್ಲಿ ಇಳಿಯುತ್ತಿದೆ ಝರಿಯ ನೀರು, ಪದರ ಪದರದ ಕಾವಳ,ಹಲವು ಹಂತಗಳಲ್ಲಿ ಮಂದಗತಿಯಲ್ಲಿ ಚಲಿಸುತ್ತಿದೆ, ನೂಲಿನ ಎಳೆ ಎಳೆಯಾಗಿ ಹರಿಯುತ್ತಿದೆ. ಹಿಂಜಿದ ಹತ್ತಿಯಂತೆ ಹರಡುತ್ತಿದೆ.

ಕೆಳಗೆ ವಿಶಾಲವಾದ ಕಾಡು. ಅಲ್ಲಲ್ಲಿ ಹಸಿರು ಗದ್ದೆ ಕಣಿವೆ, ಮಂಜಿನಲ್ಲಿ ಮುಳುಗಿದ್ದ ಈ ನಿಸರ್ಗದ ವೈಭವ, ತಿಳಿನೀರಿನ ಮೇಲೆ ಎಳೆ ಬಿಸಿಲು ಬಿದ್ದಾಗ ಎದ್ದುಕಾಣುವ ಕಡಲ ಗರ್ಭದ ವರ್ಣಮಯ ವನ್ಯ ಸಂಪತ್ತಿನಂತೆ ಪ್ರತಿಫಲಿಸಿತ್ತು...."

ಶ್ರೀನಿವಾಸರಾಯರು ಕನ್ನಡ ಸಾಹಿತ್ಯ ರಂಗದಲ್ಲಿ ಸಮೃದ್ಧ ಕೃಷಿ ಮಾಡಿದ್ದಾರೆ. ಸುಸಂಸ್ಕೃತ ಬೆಳೆ ಬೆಳೆದಿದ್ದಾರೆ. ಅನೇಕ ಹಿರಿಯ ಸಾಹಿತಿಗಳು ಶ್ರೀಯುತರನ್ನು ಮನಸಾರೆ ಮೆಚ್ಚಿ ಪ್ರತಿಕ್ರಿಯಿಸಿದ್ದಾರೆ. ಆದರೂ ಈ ಲೇಖಕರ ಸಮಗ್ರ ಸಾಹಿತ್ಯದ ವಿಶೇಷ ಅಧ್ಯಯನವಾದರೆ ಕನ್ನಡದ ವಿಮರ್ಶಾರಂಗವೂ ಹೆಚ್ಚು ಸಂಪದ್ಭರಿತವಾಗುವುದು.



# ಸಾಹಿತಿ ಮಿತ್ರ ಶ್ರೀ ಎಸ್. ವಿ. ಎಸ್. ರಾವ್

—ಗೀತಪ್ರಿಯ (ಕನ್ನಡ ಚಿತ್ರ ನಿರ್ದೇಶಕ)

ಪಾಮರರಿಗೂ ಪಂಡಿತರಿಗೂ, ಖ್ಯಾತ ಲೇಖಕರಿಗೂ, ನವ್ಯ ಸಾಹಿತಿಗಳಿಗೂ ಸೇತುವೆಯಂತಿದ್ದ ನನ್ನ ಮಿತ್ರ ದಿ॥ ಹೆಚ್. ವಿ. ನಾರಾಯಣ್‌ರವರ ಮೂಲಕ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಶ್ರೀ. ಎಸ್. ವಿ. ಶ್ರೀನಿವಾಸರಾವ್‌ರವರ ಪರಿಚಯ ನನಗಾಯಿತು. ಅದಕ್ಕೆ ಮೊದಲೇ ಶ್ರೀನಿವಾಸರಾಯರ ಕಥೆಗಳನ್ನು ಜನಪ್ರಿಯ ಕನ್ನಡ ಮಾಸಪತ್ರಿಕೆ, ವಾರಪತ್ರಿಕೆಗಳಲ್ಲಿ ಓದಿ ಮೆಚ್ಚಿಕೊಂಡಿದ್ದರಿಂದ ಇವರ ಪರಿಚಯ ಸ್ನೇಹವಾಗಿ ಪರಿಣಮಿಸಿತು. ನಂತರ ಅವರು ಬರೆದ ಅನೇಕ ಕಥೆ ಕಾದಂಬರಿಗಳನ್ನು ಓದಿದೆ. ಇವರ ಆಕರ್ಷಕ ವರ್ಣನಾ ವೈಖರಿಗೆ ಬೆರಗಾದೆ. ಇವರ ಕಥೆಗಳಲ್ಲಿ ಸಾಮಾಜಿಕ ಪ್ರಜ್ಞೆ ಎದ್ದುಕಾಣುತ್ತದೆ. ಕಲ್ಪನೆಗಿಂತ ವಾಸ್ತವಿಕತೆಗೆ ಹೆಚ್ಚು ಒತ್ತುಕೊಡುವಂಥ ಚಿತ್ರಣ ಇವರದು. ಕೆಲವಂತೂ ದಿನವೂ ನಾವು ನೋಡುವಂಥ ನಿಜ ಜೀವನದಲ್ಲಿ ನಾವು ಕಂಡಂಥ ಘಟನೆಗಳಂತೆ ನಮ್ಮ ಕಣ್ಣಮುಂದೆ ಬಂದು ನಿಲ್ಲುತ್ತವೆ. ಪಾತ್ರಗಳ ಚಿತ್ರಣವೂ ಅಷ್ಟೆ. ಇವರ ಕೆಲವು ಕಥೆಗಳು ಬಹುಮಾನ ಗಳಿಸಿರುವುದೇ ಅದಕ್ಕೆ ಸಾಕ್ಷಿ ಎನ್ನಬಹುದು.

ಕಥೆ-ಕಾದಂಬರಿಗಳು ಅಷ್ಟೇ ಅಲ್ಲದೆ ಮಕ್ಕಳ ಸಾಹಿತ್ಯದಲ್ಲಿ ಕೈಆಡಿಸಿ ಸಫಲ ರಾಗಿದ್ದಾರೆ. ಮಕ್ಕಳಿಗಾಗಿ ಇವರು ಬರೆದ ಪುಟಾಣಿ ಸಾಹಸಿಗರು ಮಕ್ಕಳ ಮನ ಗೆಲ್ಲುತ್ತದೆ. ಮಕ್ಕಳಿಗಾಗಿಯೆ ಬರೆದ ಇಮ್ಮಡಿ ಪುಲಿಕೇಶಿ, ಪಂಡಿತಗೋವಿಂದ ವಲ್ಲಭಪಂತ, ಮೌಲಾನ ಅಬುಲ್‌ಕಲಾಂ ಆಜಾದ್, ಕವಿರತ್ನತ್ರಯರು, ಪೌರಪ್ರಜ್ಞೆ, ಇವೆಲ್ಲವೂ ಆಕರ್ಷಕ ಶೈಲಿಯಲ್ಲಿ ಮೂಡಿಸಿದ್ದಾರೆ. –ಇಷ್ಟೆ ಅಲ್ಲದೆ ಪ್ರವಾಸ ಸಾಹಿತ್ಯವನ್ನೂರಚಿಸಿ, ಕನ್ನಡಸಾಹಿತ್ಯ ದರ್ಶನದಲ್ಲಿ ಪ್ರಾಚೀನ ಅರ್ವಾಚೀನ ಸಾಹಿತಿ ಗಳ ಕಿರು ಪರಿಚಯವನ್ನೂ ಮೂಡಿಸಿದ್ದಾರೆ.

ಈಗಾಗಲೇ ಇವರ ಸುಮಾರು ಇಪ್ಪತ್ತು ಕಾದಂಬರಿಗಳೂ, ಕೆಲವು ಕಥಾ ಸಂಕಲನಗಳೂ ಪ್ರಕಟವಾಗಿ ಜನಪ್ರಿಯವಾಗಿವೆಯೆಂದರೆ ಇದೊಂದು ಸಾಧನೆಯೇ ಎನ್ನಬಹುದು. ಇವರ ಲೇಖನಿಯಿಂದ ಇನ್ನಷ್ಟು ವಿಚಾರ ಪ್ರಚೋದಕ ಕಥೆ ಕಾದಂಬರಿಗಳು ಮೂಡಿಬರಲಿ ಎಂದು ಆಶಿಸುತ್ತೇನೆ.

# ಸಜ್ಜನ ಮಿತ್ರ ಎಸ್. ವಿ. ಶ್ರೀನಿವಾಸರಾವ್

—ಹೆಚ್. ಆರ್. ದಾಸೇಗೌಡ

ಕಳೆದ ನಲವತ್ತು ವರ್ಷಗಳಿಂದ ಸಾಹಿತ್ಯ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಶ್ರದ್ಧೆ, ನಿಷ್ಠೆಗಳಿಂದ ಆ ಕೆಲಸವನ್ನು ಮಾಡಿಕೊಂಡು ಬರುತ್ತಿರುವ ಎಸ್. ವಿ. ಶ್ರೀನಿವಾಸರಾವ್ ಅವರೊಂದಿಗಿನ ನನ್ನ ಸ್ನೇಹ ಒಂದು ದಶಕದಿಂದೀಚಿಗಿನದು, ಹದಿನಾರಕ್ಕೂ ಹೆಚ್ಚು ಕಾದಂಬರಿಗಳನ್ನು ಧಾರಾವಾಹಿಯಾಗಿ ನಾಡಿನ ಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟಿಸಿ ಓದುಗರ ವಲಯದಲ್ಲಿ ಜನಪ್ರಿಯರಾಗಿರುವ ಶ್ರೀನಿವಾಸರಾವ್ ಕಥಾ ಸಂಕಲನಗಳನ್ನೂ, ಮಕ್ಕಳ ಪುಸ್ತಕಗಳನ್ನೂ ರೇಡಿಯೋ ರೂಪಕ-ನಾಟಕಗಳನ್ನೂ, ಕವಿಕಾವ್ಯ ದರ್ಶನವನ್ನೂ, ಪ್ರವಾಸ ಕಥನವನ್ನೂ ಪ್ರಕಟಿಸಿ ಕನ್ನಡ ಸಾರಸ್ವತ ಲೋಕಕ್ಕೆ ಎಪ್ಪತ್ತಕ್ಕೂ ಹೆಚ್ಚಿನ ಸಂಖ್ಯೆಯ ಕೃತಿಗಳನ್ನು ಕಾಣಿಕೆಯಾಗಿ ಅರ್ಪಿಸಿದ್ದಾರೆ. ಕರ್ನಾಟಕ ಪ್ರಕಾಶಕರ ಸಂಘದ ಅಧ್ಯಕ್ಷರಾಗಿದ್ದ ಎಚ್. ಸಿ. ರಾಮಣ್ಣ ಅವರು ಹಿಂದೆ ಬೆಂಗಳೂರು ವಿಶ್ವವಿದ್ಯಾಲಯದ ಕಾಲೇಜು ಅಭಿವೃದ್ಧಿ ಮಂಡಲಿಯ ಅಧ್ಯಕ್ಷನಾಗಿದ್ದ ನನ್ನ ಕಚೇರಿಗೆ ಎಸ್. ವಿ. ಶ್ರೀನಿವಾಸರಾವ್ ಅವರನ್ನು ಕರೆತಂದು ಪರಿಚಯಿಸಿದರು. ಪ್ರಕಾಶನೋದ್ಯಮದಲ್ಲಿ ನನಗಿದ್ದ ಆಸಕ್ತಿ ಇಂಥ ಭೇಟಿಗೆ ಹಿನ್ನೆಲೆಯಾಗಿತ್ತು. ಮೊದಲ ಭೇಟಿಯ ಸಂದರ್ಭದಲ್ಲಿ ಮಿತಭಾಷಿಗಳಾದ ರಾಮಣ್ಣನವರು ಶ್ರೀನಿವಾಸರಾಯರನ್ನು ನನಗೆ ಪರಿಚಯಿಸುತ್ತ "ಇವರು ವೃತ್ತಿಯಲ್ಲಿ ವಿಜ್ಞಾನಿಗಳು, ಪ್ರವೃತ್ತಿಯಿಂದ ಸಾಹಿತಿಗಳು, ನಿತ್ಯ ಜೀವನದಲ್ಲಿ ಸುಸಂಸ್ಕೃತ ಸ್ನೇಹ ಜೀವಿಗಳು" ಎಂದು ಔಪಚಾರಿಕ ಮಾತುಗಳನ್ನು ಆಡಿದರು. ಅಂದು ಪರಿಚಯವಾದ ಶ್ರೀನಿವಾಸರಾಯರೊಂದಿಗಿನ ನನ್ನ ಸ್ನೇಹಕ್ಕೆ ಹತ್ತು ವರ್ಷಗಳು ತುಂಬಿದ್ದರೂ ರಾಮಣ್ಣನವರ ಮಾತುಗಳನ್ನು ನಾನು ಮತ್ತೆ ಮತ್ತೆ ನೆನಪಿಸಿಕೊಳ್ಳುತ್ತಲೇ ಇರುವಂತೆ ಶ್ರೀನಿವಾಸರಾಯರು ಸಜ್ಜನಿಕೆಯ ಸ್ನೇಹವನ್ನು ತೋರುತ್ತಲೇ ಬಂದಿದ್ದಾರೆ. ಅರ್ಥಪೂರ್ಣ ಆತ್ಮೀಯ ಸ್ನೇಹಕ್ಕೆ ಬದಲಾಗಿ ಏನನ್ನೂ ಬಯಸದ ರಾಯರಿಗೆ ಈ ಗುಣ ತೋರಿಕೆಗಾಗಿ ಬಂದದ್ದಲ್ಲ, ಅವರಲ್ಲಿಯೇ ಅಂತರ್ಗತವಾಗಿರುವ ಸಹಜ ಗುಣವಾಗಿದೆ. ರಾಮಣ್ಣನವರಿಂದ ಇಂಥ ಒಂದು ಸ್ನೇಹಲಾಭ ನನಗಾದುದಕ್ಕೆ ನಾನು ಸಂತೋಷವನ್ನು ಅನುಭವಿಸಿದ್ದೇನೆ.

ರಕ್ಷಣಾ ಇಲಾಖೆಯಲ್ಲಿ ಸೈಂಟಿಫಿಕ್ ಆಫೀಸರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದು ಇತ್ತೀಚೆಗಷ್ಟೆ ನಿವೃತ್ತಿ ಹೊಂದಿರುವ ಶ್ರೀನಿವಾಸರಾವ್ ಮೂರು ವರ್ಷಗಳ ಅವಧಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕೋಶಾಧ್ಯಕ್ಷರಾಗಿದ್ದು ದಕ್ಷ ಆಡಳಿತಕ್ಕೆ ಮೇಲ್ಪಂಕ್ತಿಯನ್ನು ನಿರ್ಮಿಸಿದರು. 60 ವಸಂತಗಳನ್ನು ದಾಟಿ ಮುನ್ನಡೆಯುತ್ತಿರುವ ಶ್ರೀಯುತರು ಕರ್ನಾಟಕ ಸಾಹಿತ್ಯ ಪರಿಷತ್ತು ಮತ್ತು ಕರ್ನಾಟಕ ಪ್ರಕಾಶಕರ ಸಂಘದ ಕಾರ್ಯದರ್ಶಿಯಾಗಿದ್ದುಕೊಂಡು ಆ ಸಂಸ್ಥೆಗಳಲ್ಲಿ ಸಮಯೋಜಿತ ಬದಲಾವಣೆ—ಸುಧಾರಣೆಗಳನ್ನು ತರಲು ಶ್ರಮಿಸಿದ್ದಾರೆ, ಉಳಿದ ಸದಸ್ಯರಲ್ಲಿ ಸ್ಫೂರ್ತಿ, ಚೈತನ್ಯಗಳನ್ನು ಉಕ್ಕಿಸುವಂತೆ ದುಡಿದಿದ್ದಾರೆ. ಸ್ವಭಾವತ: ಹೆಚ್ಚು ಮಾತನಾಡದ ಶ್ರೀನಿವಾಸರಾಯರು ಮೌನದ ಚಿಪ್ಪೊಡೆದಾಗ ಮಾತ್ರ ಮುತ್ತಿನಂಥ ಮಾತುಗಳನ್ನೇ ಆಡುತ್ತಾರೆ. ನಿಗರ್ವಿಗಳೂ, ಆಡಂಬರದೂರರೂ, ಸಜ್ಜನರೂ, ಸ್ನೇಹಜೀವಿಗಳೂ ಆದ ರಾಯರ ವ್ಯಕ್ತಿತ್ವಕ್ಕೆ ಅವರ ನಿರಂತರ ಕ್ರಿಯಾಶೀಲತೆ ವಿಶಿಷ್ಟ ಮೆರಗು ತಂದುಕೊಡಲು ಕಾರಣವಾಗಿದೆ.

ಶ್ರೀನಿವಾಸರಾವ್ ಅವರ ಸಾಹಿತ್ಯ ರಾಶಿಯಲ್ಲಿನ ಬಹುಪಾಲು ಕಾದಂಬರಿಗಳು ಸುಧಾ, ಪ್ರಜಾಮತ, ಕನ್ನಡಪ್ರಭಗಳಲ್ಲಿ ಧಾರಾವಾಹಿಯಾಗಿ ಕಾಣಿಸಿಕೊಂಡು ಜನಮನವನ್ನು ಸೂರೆಗೊಂಡಿವೆ. ಇವುಗಳ ಪೈಕಿ ಸುಧಾದಲ್ಲಿ ಪ್ರಕಟವಾದ 'ಕಾಡ ಬೆಳದಿಂಗಳು' ಕಾದಂಬರಿ 'ಬಾಳೇ ಬಂಗಾರ' ಎನ್ನುವ ಹೆಸರಿನಲ್ಲಿ ಚಲನಚಿತ್ರವಾಗಿಯೂ ರೂಪುಗೊಳ್ಳುತ್ತಿದೆ. ಕನ್ನಡ ಪ್ರಭದಲ್ಲಿ ಮೂಡಿಬಂದ 'ಪ್ರೌಢಪ್ರತಾಪ ವೀರರಾಜೇಂದ್ರ' ನೃಪತುಂಗ ಸಾಹಿತ್ಯ ಪ್ರಶಸ್ತಿ ಮತ್ತು ಕಾದಂಬರಿ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನವನ್ನು ಪಡೆದುಕೊಂಡಿದೆ. ಕನ್ನಡದ ಮಟ್ಟಿಗೆ ಸೊರಗಿದಂತಿರುವ ಮಕ್ಕಳ ಸಾಹಿತ್ಯಕ್ಕೆ ಅಗತ್ಯ ಪುಷ್ಟಿಯೊದಗಿಸುವ ರೀತಿಯಲ್ಲಿ ನಮ್ಮ ಸಾಮಾಜಿಕ ಬದುಕು ಮತ್ತು ಪ್ರಾಚೀನ—ಅರ್ವಾಚೀನ ಇತಿಹಾಸವನ್ನು ಸಮರ್ಥವಾಗಿಯೂ ಕುತೂಹಲಕಾರಿಯಾಗಿಯೂ ಪರಿಚಯಿಸುವ ಹತ್ತಕ್ಕಿಂತ ಹೆಚ್ಚಿನ ಕೃತಿಗಳನ್ನು ಹೊರ ತಂದಿದ್ದಾರೆ. ಇವುಗಳಲ್ಲಿ ಭಾರತ-ಭಾರತಿ ಸಂಪದ, ಐ.ಬಿ.ಎಚ್., ನ್ಯಾಷನಲ್ ಬುಕ್ ಟ್ರಸ್ಟಿಗಾಗಿ ಸಿದ್ಧಪಡಿಸಿಕೊಡಲಾದ ಪುಸ್ತಕಗಳೂ ಸೇರಿವೆ. 'ಪುಟಾಣಿ ಸಾಹಿತಿಗಳು' ಧಾರಾವಾಹಿಯಾಗಿ ಬಾಲಮಂಗಳ ಪತ್ರಿಕೆಯಲ್ಲಿ ಪ್ರಕಟಗೊಂಡು ಚಿನ್ನದ ಮಾನ ಗದ್ದಿದೆ. ಐದಕ್ಕೂ ಹೆಚ್ಚು ಕಥಾಸಂಕಲನಗಳು ಪ್ರಕಟಗೊಂಡಿದ್ದು ಇವುಗಳ ಪೈಕಿ ನ್ಯಾಷನಲ್ ಬುಕ್ ಟ್ರಸ್ಟ್‌ಗೆ ಅನುವಾದಿಸಿ ಕೊಡಲಾದ "ಒರಿಸ್ಸಾ ಕಥೆಗಳು" 1984ರ ರಾಜ್ಯ ಸರ್ಕಾರದ ಪುರಸ್ಕಾರ ಗಳಿಸಿ ಕೊಂಡಿದೆ. ರಾಷ್ಟ್ರ-ರಾಜ್ಯದ ಮಹಾಪುರುಷರನ್ನೂ ಪರಾಕ್ರಮಿಗಳಾದ ರಾಜರನ್ನೂ, ಧರ್ಮಬೋಧಕರನ್ನೂ, ಕವಿಗಳನ್ನೂ, ವಿಜ್ಞಾನ ವಿಷಯಗಳನ್ನೂ ಸರಳವಾಗಿ

ಕುತೂಹಲಕರವಾಗಿ ಪರಿಚಯ ಮಾಡಿಕೊಡುವ ಇಪ್ಪತ್ತಕ್ಕೂ ಹೆಚ್ಚು ರೂಪಕಗಳು ಆಕಾಶವಾಣಿಯಿಂದ ಮಕ್ಕಳಿಗಾಗಿ ಪ್ರಸಾರಗೊಂಡಿವೆ. ಬಾಲಶ್ರೋತೃಗಳ ಮೆಚ್ಚುಗೆಗೆ ಪಾತ್ರವಾಗಿವೆ. ಸ್ವಾತಂತ್ರ್ಯ ಹೋರಾಟಗಾರರ ಬದುಕಿನ ಮಹತ್ವದ ಘಳಿಗೆಗಳನ್ನು ಮಕ್ಕಳ ಮನಸ್ಸಿಗೆ ಮುಟ್ಟಿಸುವ ಸಲುವಾಗಿ ರಚಿತವಾದ ರೂಪಕಗಳು ದೂರದರ್ಶನದಿಂದ ಪ್ರಸಾರಗೊಂಡಿವೆ. ಅಮೆರಿಕಾ ಪ್ರವಾಸ ಕುರಿತ 'ಇಣಿಕು ನೋಟ', ಭಾರತದ ಸಮಗ್ರ ದರ್ಶನ ಮಾಡಿಸುವ 'ಉತ್ತರ ಭಾರತ' 'ದಕ್ಷಿಣ ಭಾರತ' ಕೃತಿಗಳು ಪ್ರವಾಸ ಸಾಹಿತ್ಯಕ್ಕೆ ರಾಯರಿಂದ ಸಮರ್ಪಿತವಾಗಿರುವ ಕೊಡುಗೆಗಳು. ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ 'ಕಾಕಾ ಕಾಲೇಲ್ಕರ್' ಕೃತಿ ಅನುವಾದಿಸಿದ್ದಾರೆ. ರಾಷ್ಟ್ರಕವಿ ಕುವೆಂಪು ಅವರಿಂದಲೇ ಬಿಡುಗಡೆಗೊಂಡ 'ಕನ್ನಡ ಸಾಹಿತಿ ದರ್ಶನ' 1500 ಕ್ಕೂ ಹೆಚ್ಚಿನ ಸಂಖ್ಯೆಯ ಪ್ರಾಚೀನ–ಅರ್ವಾಚೀನ ಸಾಹಿತಿಗಳ ಪರಿಚಯ ಮಾಡಿಕೊಡುವ ವಿಶಿಷ್ಟ ಕೃತಿ. ಈ ಪುಸ್ತಕ ನ್ಯಾಷನಲ್ ಬುಕ್ ಟ್ರಸ್ಟಿನಿಂದ ಇತರ ಭಾರತೀಯ ಭಾಷೆಗಳಿಗೆ ಅನುವಾದಗೊಳ್ಳಲು ಮತ್ತು 'ರೈಟ್ಸ್ ಹಾಲ್'ನಲ್ಲಿ ಪ್ರದರ್ಶಿಸಲು ಆಯ್ಕೆಯಾಗಿರುವ ಗೌರವವನ್ನೂ ಸಂಪಾದಿಸಿಕೊಂಡಿದೆ.

ಶ್ರೀನಿವಾಸರಾವ್ ಅವರು ನಾಡು ನುಡಿಗೆ ಸಲ್ಲಿಸಿರುವ ಮೌಲಿಕ ಸೇವೆಯನ್ನು ಗುರುತಿಸಿ ಅನೇಕ ಸಂಘ ಸಂಸ್ಥೆಗಳು ಅವರನ್ನು ಸನ್ಮಾನಿಸಿ. ಪ್ರಶಸ್ತಿ ಪುರಸ್ಕಾರ ನೀಡಿ ಗೌರವಿಸಿವೆ. ಅವರು ಹಲವಾರು ಕಥಾಸ್ಪರ್ಧೆಯಲ್ಲಿ ರಜತ ಕರಂಡ ಹಾಗೂ ಬಹುಮಾನಗಳನ್ನು ಪಡೆದುಕೊಂಡಿದ್ದಾರೆ. ಬೆಳಗಾಂ ಜಿಲ್ಲೆ ಪಾಚ್ಛಾಪುರದ ವಿಶ್ವ ಭಾರತೀಯ ಪರಷತ್ತಿನವರು ಏರ್ಪಡಿಸಿದ್ದ ಕಾದಂಬರಿ ಸ್ಪರ್ಧೆಯಲ್ಲಿ ತಮ್ಮ 'ಪ್ರೌಢ ಪ್ರತಾಪ ವೀರರಾಜೇಂದ್ರ' ಕೃತಿಗೆ 4,000 ರೂ.ಗಳ ಪ್ರಥಮ ಬಹುಮಾನ ಪಡೆದುಕೊಂಡಿದ್ದಾರೆ. 1976 ರಲ್ಲಿ 'ಅಖಿಲ ಭಾರತ ಲೇಖಕರ ಕುಮ್ಮಟ'ಕ್ಕೆ ಕೇಂದ್ರ ಸರ್ಕಾರದಿಂದ ಆಯ್ಕೆಯಾಗಿರುತ್ತಾರೆ. ಪ್ರವಾಸ ಅಧ್ಯಯನ ಯೋಜನೆಯಡಿಯಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಆಂಧ್ರ ಪ್ರದೇಶದ ಪ್ರವಾಸಕ್ಕೆ 1986 ರಲ್ಲಿ ಆಯ್ಕೆಯಾಗಿರುತ್ತಾರೆ. 1992ರಲ್ಲಿ ವಿಶೇಷ ಆಹ್ವಾನದ ಮೇರೆಗೆ ಅಮೆರಿಕಾದಲ್ಲಿ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಅಧ್ಯಯನ ಪ್ರವಾಸ ಕೈಗೊಂಡಿರುತ್ತಾರೆ. ಭಾರತದ ರಕ್ಷಣಾ ಇಲಾಖೆ, ಇ.ಟಿ.ಡಿ.ಸಿ ಕೇಂದ್ರ ಸರ್ಕಾರದ ಸಂಸ್ಥೆ. ಡಿಫೆನ್ಸ್ ಅಕೌಂಟ್ಸ್, ಕಮಾನಿಮೆಟಲ್ ಮತ್ತು ಅಲಾಯ್ ಸಂಸ್ಥೆಗಳಿಂದ ರಾಜ್ಯೋತ್ಸವ ಸನ್ಮಾನ ಪಡೆದುಕೊಂಡಿರುತ್ತಾರೆ. ತುಮಕೂರು ಮತ್ತು ಕೊಡಗು ಜಿಲ್ಲಾ ಸಾಹಿತ್ಯ ಪರಿಷತ್ತುಗಳು ಇವರಿಗೆ ವಿಶೇಷಸನ್ಮಾನ ನೀಡಿವೆ. ಕರ್ನಾಟಕ ರಾಜ್ಯ ಸಾಮಾಜಿಕ ಹಿತರಕ್ಷಣೆ ಮತ್ತು ಸಾಂಸ್ಕೃತಿಕ ಸಂಘದವರು ಟಿ.ಟಿ.ಡಿ. ಸಭಾಂಗಣದಲ್ಲಿ ಸನ್ಮಾನ ಮಾಡಿದ್ದಾರೆ. ಬನಶಂಕರಿ ಸಾಂಸ್ಕೃತಿಕ ಸಂಘ ಮತ್ತು ಬನಶಂಕರಿ ತೆರಿಗೆದಾರರ ಸಂಘದವರು ರಾಜ್ಯೋತ್ಸವ ಸಂದರ್ಭದಲ್ಲಿ ಸನ್ಮಾನಿಸಿದ್ದಾರೆ.

ವಿಜ್ಞಾನದ ವಿದ್ಯಾರ್ಥಿಯಾಗಿ ಬಿ.ಎಸ್.ಸಿ. ಪದವಿ ಪಡೆದ ಶ್ರೀನಿವಾಸರಾವ್ ತಮ್ಮ ಬಹುಮುಖಿ ಆಸಕ್ತಿಯ ಕೇಂದ್ರವಾದ ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆದುಕೊಂಡರು. ವಿವಿಧ ಭಾಷೆಗಳನ್ನು ಸಾಧ್ಯವಾದ ಮಟ್ಟಿಗೂ ಕಲಿತು ಅದರ ಮೂಲಕ ಹಲವು ಸಂಸ್ಕೃತಿಗಳ ಹಿರಿಮೆ-ಗರಿಮೆಗಳನ್ನು ಪರಿಚಯ ಮಾಡಿಕೊಳ್ಳ ಬೇಕೆನ್ನುವ ಆಸಕ್ತಿಯಿಂದ ಹಿಂದಿಯಲ್ಲಿ ರಾಷ್ಟ್ರಭಾಷಾ ವಿಶಾರದ ಪದವಿಯನ್ನೂ, ಮುಂಬಯಿ ವಿಶ್ವವಿದ್ಯಾನಿಲಯದಿಂದ ರಷ್ಯನ್ ಭಾಷೆಯಲ್ಲಿ ಡಿಪ್ಲೊಮಾ ಪದವಿ ಯನ್ನೂ, ಇಂಜಿನಿಯರಿಂಗ್‌ನಲ್ಲಿ ಎ.ಎಂ.ಐ.ಇ. ಸಹ ಓದಿ ತಮ್ಮ ತಿಳುವಳಿಕೆಯ ಪ್ರಪಂಚವನ್ನು ವಿಸ್ತರಿಸಿಕೊಳ್ಳಲು, ಜ್ಞಾನದಾಹವನ್ನು ತಣಿಸಿಕೊಳ್ಳಲು ಪ್ರಯತ್ನಿಸಿದರು. ಕೇಂದ್ರ ಸರ್ಕಾರದ ರಕ್ಷಣಾ ವಿಭಾಗಕ್ಕೆ ಸೇರಿದ ಸಿ.ಕ್ಯೂ.ಎ.ಎಲ್.ನಲ್ಲಿ 33ಕ್ಕೂ ಹೆಚ್ಚು ವರ್ಷಗಳ ಕಾಲ ಕೆಲಸ ಮಾಡಿ ಸೈಂಟಿಫಿಕ್ ಆಫೀಸರ್ ಆಗಿ ನಿವೃತ್ತಿ ಹೊಂದಿರುವ ರಾಯರು ಅಲ್ಲೂ ತಮ್ಮ ಪ್ರತಿಭಾ ಸಂಪನ್ನತೆಯನ್ನು ವ್ಯಕ್ತಪಡಿಸಿದ್ದಾರೆ. ಆವಿಷ್ಕರಣ ಮತ್ತು ಉಪಯುಕ್ತ ಸಲಹೆ ಗಳಿಗಾಗಿ ರಕ್ಷಣಾ ಕಾರ್ಯದರ್ಶಿ ಹಾಗೂ ಇಲಾಖೆಯ ವರಿಷ್ಠ ಅಧಿಕಾರಿಗಳಿಂದ ನಗದು ಬಹುಮಾನ-ಪ್ರಶಸ್ತಿ ಪತ್ರಗಳನ್ನು ಪಡೆದುಕೊಂಡಿದ್ದಾರೆ.

ಸನ್ಮಿತ್ರ ಶ್ರೀನಿವಾಸರಾವ್ ಅರವತ್ತು ವರ್ಷಗಳನ್ನು ದಾಟಿದ್ದರೂ ತಾರುಣ್ಯದ ಉತ್ಸಾಹದಿಂದ ನಿರಂತರ ಸ್ಫೂರ್ತಿಯಿಂದ ಕ್ರಿಯಾಶೀಲರಾಗಿದ್ದಾರೆ. ನಿಸ್ವಾರ್ಥ ಬುದ್ಧಿಯಿಂದ ಕನ್ನಡದ ಕೈಂಕರ್ಯಕ್ಕೆ ತಮ್ಮನ್ನು ಸಮರ್ಪಿಸಿಕೊಂಡಿದ್ದಾರೆ. ಅವರ ಬದುಕು ಬರಹಗಳು ಮುಂದಿನ ತಲೆಮಾರಿನವರೆಗೆ ಸ್ಫೂರ್ತಿ ಚೈತನ್ಯ ನೀಡು ವಂತಾಗಲೀ. ಶ್ರೀನಿವಾಸರಾವ್ ಅವರ ಲೇಖನಿಯಿಂದ ಮತ್ತಷ್ಟು ಶ್ರೇಷ್ಠ ಕೃತಿಗಳು ಹೊರಬರಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.



# ಜೀವನೋತ್ಸಾಹದ ಅಪೂರ್ವ ವ್ಯಕ್ತಿ ಶ್ರೀನಿವಾಸರಾವ್

—ಕೆ. ಆರ್. ಕಮಲೇಶ್

ನಮ್ಮೂರು ತುಮಕೂರು ತಾಲ್ಲೂಕಿನ ಕುಗ್ರಾಮ. ತಲಕಾಡಿನ ಗಂಗರ ಕಾಲದಲ್ಲಿ ಖ್ಯಾತಿ ಪಡೆದಿದ್ದ ಪೆನ್ನುಡಿಕೆ (ಹೊನ್ನುಡಿಕೆ) ಹಾಗು ಹೊಯ್ಸಳ ಕಾಲದಲ್ಲಿ ಖ್ಯಾತವಾಗಿದ್ದ ಶಿವಗಂಗೆಯ ನಡುವಿನ ಪ್ರದೇಶವಿದು. ಈಗ್ಯೆ ಮೂರು ದಶಕಗಳ ಹಿಂದೆ ಹೇಗಿತ್ತೋ ಇಂದಿಗೂ ಹೆಚ್ಚು ಕಡಿಮೆ ಅದೇ ರೀತಿಯಿದ್ದರೂ ತನ್ನ ಬದಲಾಗದ ಗುಣವನ್ನು ಪ್ರದರ್ಶಿಸುತ್ತಿರುವ ಗ್ರಾಮ ಸಾಸಲು. ಹಿಂದುಳಿದ ನಾಯಕ ಹಾಗು ಪರಿಶಿಷ್ಟ ಜಾತಿಯ ಹರಿಜನರೇ ಹೆಚ್ಚಾಗಿರುವ ಈ ಗ್ರಾಮ ಎಲ್ಲಾದರೂ ಹಿಂದುಳಿಕೆಗೆ ಉಲ್ಲೇಖಿಸಬಹುದಾಗಿದೆ. ಒಂದೆರಡು ಬ್ರಾಹ್ಮಣರ. ಲಿಂಗಾಯಿತರ ಹಾಗೂ ಒಕ್ಕಲಿಗರ ಮನೆಗಳಿವೆ. ಊರಿನ ರಂಗನಾಥಸ್ವಾಮಿ ಸುತ್ತ ಮುತ್ತಲಿನ ಹತ್ತಾರು ಗ್ರಾಮಗಳ ಆರಾಧ್ಯ ದೈವ. ಈ ಊರಿನ ರಥೋತ್ಸವ ಹಾಗೂ ಗರುಡೋತ್ಸವ ಇಂದಿಗೂ ಪ್ರಸಿದ್ಧವೇ! ಕಾಳಘಟ್ಟಮ್ಮ. ಊರಿನ ಮಾರಮ್ಮ. ದೊಡ್ಡಮ್ಮ, ಕಾಲರ ಮುಂತಾದ ಸಾಂಕ್ರಾಮಿಕಗಳ ನಿವಾರಣಾ ದೇವತೆ ಯಾದ ಆಕೆ ಎಲ್ಲರಿಂದಲೂ ಪೂಜನೀಯಳು. ಊರಿನ ರಂಗನಾಥಸ್ವಾಮಿ ರಥೋತ್ಸವಕ್ಕೆ ಎಲ್ಲೆಲ್ಲಿಂದಲೂ ಜನಜಾತ್ರೆ ಸೇರಿ ಕುಗ್ರಾಮವಾಗಿದ್ದ ಸಾಸಲು ಒಮ್ಮಿಂದ ಒಮ್ಮೆಲೆ ಪ್ರಸಿದ್ಧಿಯಾಗಿ ಬಿಟ್ಟಿದೆ. ಮುಂಬೈನಿಂದ ಕೂಡ ರಥೋತ್ಸವ ದಲ್ಲಿ ಸಂತರ್ಪಣೆ ಮಾಡಿಸಲು ಶ್ರೀನಿವಾಸರಾವ್ ದಂಪತಿಗಳು ನಮ್ಮೂರಿಗೆ ಬರುತ್ತಿದ್ದುದುಂಟು.

ಇದು ನನ್ನ ಬಾಲ್ಯದಲ್ಲಿ ಕಡಿಮೆ ಮಹತ್ವದ ವಿಚಾರವಲ್ಲ. ಅದರಲ್ಲೂ ನಮ್ಮ ತಾತನ್ನ ಕಂಡೊಡನೆ 'ಏನು ನರಸಿಂಗಣ್ಣ ಚೆನ್ನಾಗಿದ್ದೀಯಾ?' ಮಾವನ್ನ ನೋಡಿದೊಡನೆ 'ದೊರೆಸ್ವಾಮಿ ಹೇಗಿದ್ದೀಯಾ?' ಎಂದು ಬಾಯಿ ತುಂಬಾ ಮಾತನಾಡಿಸುವ ಪರಿ! ದೂರದ ಮುಂಬೈನಲ್ಲಿರುವವರೆಲ್ಲಾ ಕನ್ನಡದಲ್ಲಿ ಮಾತ ನಾಡುತ್ತಾರೆಯೇ! ಯಾವಾಗಲೂ ಇಂಗ್ಲಿಷ್–ಹಿಂದಿ ಅವರುಗಳ ಭಾಷೆಯಾಗಿರ ಬಹುದು ಎಂದೆಲ್ಲಾ ಆಗ ನಾನು ಕಲ್ಪಿಸಿಕೊಳ್ಳುತ್ತಿದ್ದೆ.

ನಮ್ಮಲ್ಲಿ ಯಾರೂ ಶ್ರೀನಿವಾಸರಾವ್ ಅವರನ್ನು ಹೆಸರಿಡಿದು ಕೂಗುತ್ತಿರಲಿಲ್ಲ. 'ಗುರು' ಎಂದೇ ಅವರನ್ನು ಕೂಗುತ್ತಿದ್ದರು. ನಮ್ಮ ಸಾಸಲು ಗ್ರಾಮಕ್ಕೆ ಒಂದೆರಡು ಮೈಲಿ ದೂರದಲ್ಲಿರುವ ಚಿಕ್ಕ ಸಾರಂಗಿ ಅವರ ಸ್ವಂತ ಸ್ಥಳ. ಮಣ್ಣಿನ ಗಣೇಶನಿಗೆ ಖ್ಯಾತವಾದ ಗೂಳೂರಿಗೆ ಮೂರುಮೈಲಿ ಅವರೂರು.

ಮುಂಬೈನಿಂದ ರಂಗನಾಥಸ್ವಾಮಿ ಜಾತ್ರೆಯಲ್ಲಿ ಸಂತರ್ಪಣೆ ಮಾಡಿಸಲು ಬರುತ್ತಿದ್ದರೆಂದರೆ ನಮ್ಮೂರಿನ ರಂಗನಾಥಸ್ವಾಮಿ ಎಷ್ಟೊಂದು ಸತ್ಯದ ದೇವರು ಎಂಬ ಹೆಮ್ಮೆ ನನ್ನದು. ಊರಿನ ಜಾತ್ರೆಯ ಸಂದರ್ಭ ಅವರಿಗೊಂದು ನೆಪವಷ್ಟೇ. ಆ ನೆಪದಲ್ಲಿ ಊರಿಗೆ ಬಂದವರು ಎಲ್ಲರನ್ನೂ ಮಾತನಾಡಿಸುತ್ತಾ ಸಾಸಲು–ತುಮಕೂರು. ಬೆಂಗಳೂರು ಎಂದು ಓಡಾಡುತ್ತಾ ಹೋದ ಕಡೆಯೆಲ್ಲಾ ಪ್ರೀತಿಯ ಹೊಳೆ ಹರಿಸುತ್ತಾ ಆ ದಿನಗಳನ್ನು ಮತ್ತೆ ಮತ್ತೆ ನೆನೆಯುವಂತೆ ಮಾಡುತ್ತಿದ್ದರು.

ನಮ್ಮ ಬಳಗದಲ್ಲಿ ಅವರೇ ಅತಿ ಹೆಚ್ಚು ಓದಿದವರು. ಹೀಗಾಗಿ ದೊಡ್ಡವರು ನಮ್ಮಂತಹ ಚಿಕ್ಕವರ ಬಳಿ ಮಾತನಾಡಬೇಕಾದರೆ ಉದ್ದೇಶಪೂರ್ವಕವಾಗಿಯೇ ಅವರನ್ನು ಉಲ್ಲೇಖಿಸುತ್ತಿದ್ದರು. ಈಗಿನಂತೆ ಆಗ ವೈದ್ಯಕೀಯ ಶಿಕ್ಷಣ ಮಾರಾಟದ ವಸ್ತುವಾಗಿರಲಿಲ್ಲ. ಎಷ್ಟೇ ಕಷ್ಟಪಟ್ಟು ಓದಿದರೂ ವೈದ್ಯಕೀಯ ಕಾಲೇಜಿಗೆ ಪ್ರವೇಶಾವಕಾಶ ಸೀಮಿತವಾಗಿತ್ತು. ವೈದ್ಯಕೀಯ ಶಿಕ್ಷಣಕ್ಕೆ ಅವಕಾಶ ಸಿಗದಿದ್ದಕ್ಕೆ ಅವರಲ್ಲಿ ಕೊರಗು ಇತ್ತೆಂದು ನಮ್ಮ ಮಾವ ಸದಾ ಹೇಳುತ್ತಿದ್ದರು. ಆದರೆ ಗುರು ಸುಮ್ಮನೇ ಕೂರುವವರಲ್ಲ. ಒಂದೇ ಪರೀಕ್ಷೆ ಪಾಸು ಮಾಡ್ತಾನೆ. ಪುಸ್ತಕ ಬರೆಯುತ್ತಾನೆ. ತುಮಕೂರಿನಲ್ಲಿ 'ಸ್ವರಾಜ್ಯಭವನದಲ್ಲಿ ಅಡುಗೆ ಮಾಡ್ಕೊಂಡು. ಓದ್ಕೊಂಡು ಮುಂದೆ ಬಂದವನು' ಎಂದು ಅವರು ಶಿಕ್ಷಣ ಪಡೆದು ನಾಲ್ಕು ದಶಕಗಳಾದರೂ ಸಣ್ಣವರಿಗೆ ಅವರನ್ನು ಉದಾಹರಿಸುತ್ತಿದ್ದರೆಂದರೆ ನಮ್ಮ ವಲಯದಲ್ಲಿ ಅವರ ಪ್ರಭಾವ ಎಷ್ಟಿತ್ತೆಂದು ಊಹಿಸಬಹುದು. ಆದರೆ ನನಗೆ 'ಗುರು ಪುಸ್ತಕ ಬರೆಯುತ್ತಾನೆ' ಎಂಬ ಮಾತೇ ಪ್ರಿಯವೆನಿಸಿತು. ಪುಸ್ತಕ ಬರೆಯೋರು ಸಾಮಾನ್ಯರಲ್ಲ. ಅವರು ಅಸಾಧಾರಣ ಬುದ್ಧಿವಂತರಾಗಿರಲೇಬೇಕೆಂದುಕೊಳ್ಳುತ್ತಾ ಎಂದೂ ಹತ್ತಿರದಿಂದ ಅವರನ್ನು ಮಾತನಾಡಿಸದೇ. ದೂರದಿಂದಲೇ ಅವರನ್ನು ನೋಡುತ್ತಾ ಬೆರಗಿನಿಂದ ತೆಂಗಿನ ಮರದ ಹಿಂದೆ ನಿಲ್ಲುತ್ತಿದ್ದೆ.

## 2

ಮುಂದೆ ಬೆಳೆದು ದೊಡ್ಡ ಓದಿಗೆ ಹೋದ ನಂತರ ಕೂಡ 'ಗುರು ಪುಸ್ತಕ ಕೂಡ ಬರೀತಾನೆ' ಎಂಬ ನಮ್ಮ ಮಾವನ ಮಾತು ಸದಾಕಾಲ ನನ್ನ ಕಿವಿಯಲ್ಲಿ

ಗುಯ್ಯಗುಟ್ಟುತ್ತಿತ್ತು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಪದವಿ ವ್ಯಾಸಂಗ ಮಾಡುತ್ತಿದ್ದ ಕಾಲದಲ್ಲಿ ಶ್ರೀನಿವಾಸರಾವ್ ಅರ್ಥಾತ್ ಗುರು ಅವರ ಕಾದಂಬರಿಗಳು 'ಸುಧಾ'. 'ಪ್ರಜಾಮತ' ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಬರುತ್ತಿದ್ದವು. 'ಇಬ್ಬನಿ' 'ಸ್ವರಮೇಳ', 'ಸ್ವಾತಿಮಹನಿ' ಮೊದಲಾದ ಕಾದಂಬರಿಗಳು ಧಾರಾವಾಹಿಯಾಗಿ ಬರುವಾಗ ವಾರದಿಂದ ವಾರಕ್ಕೆ ಕಾಯುತ್ತಿದ್ದೆವು. ಅವರ ಎಲ್ಲಾ ಕಾದಂಬರಿಗಳು ಪ್ರವಾಸದ ಅನುಭವ ಕೊಡುತ್ತಿದ್ದರೂ. ಲೇಖಕರೂ ನಮ್ಮವರು. ನಾನು ನೋಡಿದವರೆಂಬ ಆತ್ಮೀಯತೆಯಿಂದಲೂ ಅವುಗಳೆಲ್ಲಾ ಮತ್ತಷ್ಟು ರುಚಿ ಎನಿಸುತ್ತಿದ್ದವು.

ಸಾಹಿತ್ಯವಲಯದಲ್ಲಿ ಹೇಗೋ ಸೇರಿಕೊಂಡ ನಾನು ಕಾದಂಬರಿಕಾರರಾದ ಶ್ರೀನಿವಾಸರಾವ್ ನಮ್ಮ ಸಂಬಂಧಿಕರು ಎಂದು ಹೇಳಿಕೊಂಡದ್ದುಂಟು. ಬಾಲ್ಯದಲ್ಲಿ ಕಂಡ ಎಷ್ಟೋ ವ್ಯಕ್ತಿಗಳು ಕ್ಷಣಕ್ಕಷ್ಟೇ ಪ್ರಕಾಶಮಾನರಾಗಿ ಅನಂತರ ನೆನಪಿನಿಂದಲೇ ಮರೆಯಾಗಬಹುದು. ಆದರೆ ಲೇಖಕರಾದ ಶ್ರೀನಿವಾಸರಾವ್ ನನ್ನಲ್ಲಿ ಕುತೂಹಲ ಹಾಗೂ ಓದಿನ ಆಸಕ್ತಿ ಕೆರಳಿಸಿದ ಕಾರಣೀಭೂತರಾದ ವ್ಯಕ್ತಿಗಳಿದ್ದಾರೆ. ಅದು ಮಾತಿನಿಂದಲ್ಲ. ಮೌನದಿಂದ ಎಂಬುದು ಗಮನಾರ್ಹ ವಿಚಾರ.

## 3

1982ರಲ್ಲಿ ಸ್ನಾತಕೋತ್ತರ ಪದವಿ ಮುಗಿಸಿದ ನನ್ನನ್ನು ಕಾಣದ ಕೈ ಬೆಂಗಳೂರು ಪ್ರೆಸ್‌ನ ಬಾಪ್ಕೋ ಪ್ರಕಾಶನ ಸಂಸ್ಥೆಗೆ ಸಂಪಾದಕರನ್ನಾಗಿಸಿತು. ಮೈಸೂರಿಗೆ ವ್ಯಾಸಂಗಕ್ಕೆ ಹೋದವ ಇತ್ತ ತಲೆ ಹಾಕಿದವನೇ ಅಲ್ಲ. ವಿದ್ಯಾರ್ಥಿ ದೆಸೆಯಲ್ಲಿ ಮೂರು–ನಾಲ್ಕು ಪುಸ್ತಕಗಳನ್ನು ಪ್ರಕಟಿಸಿದ್ದೆ, ಬಾಪ್ಕೊ ಪ್ರಕಾಶನ ಸಂಸ್ಥೆಗೆ ಕೆಲಸಕ್ಕೆ ಸೇರಿದ ದಿನ ನನ್ನ ತಾಯಿಯನ್ನು ನೋಡಲು ತುಮಕೂರಿಗೆ ಹೋಗಿದ್ದೆ. ಅಂದು ತುಮಕೂರಿನಲ್ಲಿ ಶ್ರೀನಿವಾಸರಾವ್ ಅವರ ಅಣ್ಣನ ಮಗನ ಮದುವೆ. ಮತ್ತೆ ಶ್ರೀನಿವಾಸರಾವ್ ಅವರ ಪರಿಚಯ ಮೊದಲೆಂಬಂತೆ ಆಯಿತು. ಈ ತನಕ ದೂರದಿಂದ ನೋಡಿದ್ದ, ಸಾಹಿತ್ಯದಿಂದಾಗಿ ಆತ್ಮೀಯತೆ ಬೆಳಸಿಕೊಂಡಿದ್ದ ಶ್ರೀನಿವಾಸರಾವ್ ಅವರ ಜೊತೆ ವಿಶ್ವಾಸ ಬೆಳೆಯಿತು. ಬಹುಬೇಗ ಅವರ ಆತ್ಮೀಯ ವಲಯಕ್ಕೆ ಸೇರಿಕೊಂಡು ಬಿಟ್ಟೆನು. ಬಾಪ್ಕೊ ಸಂಸ್ಥೆಗೆ ಸೇರಬೇಕೋ ಬೇಡವೋ ಎಂಬ ಜಿಜ್ಞಾಸೆಯಲ್ಲಿದ್ದ ನನಗೆ ಆ ಸಂಸ್ಥೆಗೆ ಸೇರುವಂತೆ ಪ್ರೇರಣೆ ನೀಡಿದರು. ಬೆಂಗಳೂರಿನಲ್ಲಿ ವಾಸ್ತವ್ಯಕ್ಕೆ ಗೂಡು. ಓಡಾಡಲು ಮಾರ್ಗದರ್ಶನ ಬಗೆ. ಶ್ರೀನಿವಾಸರಾವ್ ಹೊಸ ಜಾಗದಲ್ಲಿ ಆಶ್ರಯದಾತರಾದರು 'ಕನ್ನಡ ಪ್ರಭ'ದಲ್ಲಿ ಧಾರಾವಾಹಿ

ಯಾಗಿ ಪ್ರಕಟವಾಗುತ್ತಿದ್ದ ಅವರ 'ಮಂಗೋಲ' ಕಾದಂಬರಿಯನ್ನು ಪ್ರಕಟಿಸಲು ಅನುಮತಿ ಕೇಳಿದೆ. 'ನನ್ನ ಕಣ್ಮುಂದೆ ಬೆಳೆದ ಹುಡುಗ ಏನು ಮಾಡ್ತಾನೆ' ಎಂಬ ಅನುಮಾನ ವ್ಯಕ್ತಪಡಿಸದೇ ಹಸ್ತಪ್ರತಿ ಕೊಟ್ಟರು. 'ರಾಯಲ್ಟಿ ಎಷ್ಟು' ಎಂದರೆ 'ನನಗೆ ಇಷ್ಟ ಬಂದಷ್ಟು ಕೊಡು' ಎಂದರು. ಆಮೇಲೆ ನಿಧಾನವಾಗಿ ಅರ್ಥವಾಯ್ತು. ಅವರೆಂದೂ ಸಾಹಿತ್ಯವನ್ನು ದುಡಿಮೆಯ ಮಾರ್ಗ ಮಾಡಿಕೊಂಡಿರಲಿಲ್ಲ. ಕತೆ, ಕಾದಂಬರಿಗಳನ್ನು ರಚಿಸುವುದಷ್ಟೇ ತಮ್ಮ ಕೆಲಸವೆಂದುಕೊಂಡಿದ್ದರು. ಉಳಿದದ್ದು ಪ್ರಕಾಶಕರಿಗೆ ಸೇರಿದ್ದು . ಎಂದುಕೊಂಡಿದ್ದ ಅವರು ಪ್ರಕಾಶಕರು ಕೊಟ್ಟಷ್ಟನ್ನು ತಕರಾರಿಲ್ಲದೆ ತೆಗೆದುಕೊಳ್ಳುತ್ತಿದ್ದರು. ಹಾಗೆಂದ ಕ್ಷಣ ಶ್ರೀನಿವಾಸರಾವ್ ಅವರಿಗೆ ಓದುಗರಿರಲಿಲ್ಲವೆಂದು ಅರ್ಥವಲ್ಲ. ಒಂದು ಕಾಲದಲ್ಲಿ ಅವರ ಧಾರಾವಾಹಿಗಾಗಿ ಜನಪ್ರಿಯ ಪತ್ರಿಕೆಗಳು ಕಾಯುತ್ತಿದ್ದವು. ಪ್ರಕಟವಾದ ಧಾರಾವಾಹಿಗಳೂ ಸಹ ವ್ಯಾಪಕ ಓದುಗರ ಮೆಚ್ಚುಗೆ ಪಡೆಯುತ್ತಿದ್ದವು. ಅನ್ವೇಷಣೆ, ಹೊಸ ಹೊಸ ಸ್ಥಳ ಪರಿಚಯ, ನವಿರಾದ ಪ್ರೇಮ ಸನ್ನಿವೇಶಗಳು ಅಲ್ಲಲ್ಲಿ ಕಾಣಸಿಗುತ್ತಿದ್ದ ಥ್ರಿಲ್‌ಗಳಿಂದಾಗಿ ಹದಿ ಹರೆಯದ ಓದುಗರಿಗೆ ಅವರ ಕಾದಂಬರಿಗಳು ತುಂಬಾ ಇಷ್ಟವಾಗುತ್ತಿದ್ದವು. ಅವರ ಕಾದಂಬರಿ ಪ್ರಕಾಶಕನಾಗಿ ಅವರ ಹಿನ್ನೆಲೆಯಲ್ಲಿ ಈ ಮಾತು ಹೇಳಬೇಕಾಗಿದೆ. ಅವರಲ್ಲಿದ್ದ ವೈವಿಧ್ಯಮಯ ಹಸ್ತಪ್ರತಿಗಳನ್ನು ಕಂಡು 'ನಿಮ್ಮದೇ ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಿ' ಎಂದೆ. ಮಾರಾಟ ಹಾಗು ಇತರೆ ವ್ಯವಹಾರಗಳಿಂದ ದೂರವಿರಲು ಬಯಸುತ್ತಿದ್ದ ಶ್ರೀನಿವಾಸರಾವ್ ಸಹಜವಾಗಿ ಹಿಂದೇಟು ಹಾಕಲು ಪ್ರಾರಂಭಿಸಿದರು. ಮತ್ತೆ ಒತ್ತಾಯ ಮಾಡಿದೆ. ಹೇಗೋ ದೃಢ ನಿಶ್ಚಯ ಮಾಡಿದವರಂತೆ 'ಸೌರಭ ಪ್ರಕಾಶನ' ವತಿಯಿಂದ ತಮ್ಮ 'ಗೊಂಚಲು' ಕಥಾ ಸಂಕಲನವನ್ನು ಪ್ರಕಟಿಸಿದರು. ಮೊದಲ ಪುಸ್ತಕ ಅವರ ಕೈ ಕಚ್ಚಲಿಲ್ಲ. ಅಷ್ಟೇ ಅಲ್ಲ, ಈ ಪ್ರಕಾಶನ ಸಂಸ್ಥೆಯಿಂದ ಉತ್ತಮ ಗ್ರಂಥಗಳನ್ನು ಹೊರ ತರಬಹುದೆಂಬ ಧೈರ್ಯ ಅವರಲ್ಲಿ ಹುಟ್ಟಿಸಿತು.

'ಕನ್ನಡ ಸಾಹಿತಿ ದರ್ಶನ'ದಂತಹ ಐನೂರು ಪುಟಗಳ ಬೃಹತ್ ಗ್ರಂಥ ಪ್ರಕಟಿಸಿರುವ ಹೆಗ್ಗಳಿಕೆ ಈ ಪ್ರಕಾಶನ ಸಂಸ್ಥೆಯದು. 'ಮಕ್ಕಳೇ, ಇವರನ್ನು ನೀವು ಬಲ್ಲಿರಾ ?'. 'ಪ್ರೌಢ ಪ್ರತಾಪ ವೀರ ರಾಜೇಂದ್ರ' ಮೊದಲಾದ ವಿಶಿಷ್ಟ ಕೃತಿಗಳ ಪ್ರಕಟಣೆಯನ್ನು ಸೌರಭ ಪ್ರಕಾಶನ ಸಂಸ್ಥೆ ಮಾಡಿದೆ. ಇವುಗಳ ಜೊತೆ ಹತ್ತಾರು ಮಕ್ಕಳ ಪುಸ್ತಕ, ಒಟ್ಟಾರೆ ಹತ್ತು ಹನ್ನೆರಡು ವರ್ಷದಲ್ಲಿ ಹದಿನೈದು ಗ್ರಂಥಗಳನ್ನು ಪ್ರಕಟಿಸಿದ ಕೀರ್ತಿ ಇವರದು.

ಇಷ್ಟಾದರೂ ಯಾವುದಾದರೂ ಪ್ರಕಾಶಕರು ತಮ್ಮ ಕಾದಂಬರಿಗಳ ಪ್ರಕಟಣೆಗೆ ಅನುಮತಿ ಕೇಳಿದರೆ ಶ್ರೀನಿವಾಸರಾವ್ ನಿರಾಕರಿಸದೆ ಅನುಮತಿ ನೀಡುತ್ತಾರೆ. ತಮ್ಮ

ಜನಪ್ರಿಯ ಕಾದಂಬರಿಗಳನ್ನು ಪ್ರಕಟಿಸಿ ದುಡ್ಡು ಮಾಡಿಕೊಳ್ಳಬೇಕೆಂಬ ದುರಾಸೆ ಅವರಲ್ಲಿಲ್ಲ. ಪ್ರಕಾಶಕರುಗಳು ಸಹಜವಾಗಿ ಹಿಂದೇಟು ಹಾಕುವ ಸಂಶೋಧನಾ ಗ್ರಂಥ, ಪ್ರವಾಸ ಕಥನ ಹಾಗೂ ಜೀವನ ಚರಿತ್ರೆ ಗ್ರಂಥಗಳನ್ನು ತಮ್ಮ ಪ್ರಕಾಶನದ ಮೂಲಕ ಪ್ರಕಟಿಸುತ್ತಾ, ಲಾಭ ಬರುವ ಜನಪ್ರಿಯ ಕಾದಂಬರಿಗಳನ್ನು ಪ್ರಕಾಶಕರಿಗೆ ಪ್ರಕಟಣೆಗೆ ನೀಡುವ ಶ್ರೀನಿವಾಸರಾವ್ ಅವರನ್ನು ಏನಂತೀರಾ !

## 4

ಶ್ರೀನಿವಾಸರಾವ್ ಅವರಿಗೆ ನಿರಂತರ ಕಲಿಕೆಯಲ್ಲಿ ಆಸಕ್ತಿಯಿದೆ. ಹೊಸ ಹೊಸ ವಿಚಾರಗಳನ್ನು ಮನನ ಮಾಡಿಕೊಂಡು ಕಾದಂಬರಿಗಳನ್ನು ಚಿತ್ರಿಸುವ ಮಹದಾಸೆ ಅವರದು. ನಾನು ಬಾಪ್ಕೊ ಪ್ರಕಾಶನ ಸಂಸ್ಥೆಯಲ್ಲಿದ್ದಾಗ ಅವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯ ಮೂಲಕ ಕನ್ನಡ ಎಂ.ಎ. ಪರೀಕ್ಷೆಗೆ ಕುಳಿತಿದ್ದರು. ನಿವೃತ್ತಿಗೆ ಐದಾರು ವರ್ಷ ಇರಬೇಕಾದರೆ ಎಂ.ಎ. ಮಾಡುವ ಛಲ ಅವರದು. ಉದ್ಯೋಗ ಸಂಬಂಧವಾಗಿ ಬಿ.ಎಸ್‌ಸಿ;ಎ.ಎಂ.ಐ.ಇ. ಮೊದಲಾದ ತಾಂತ್ರಿಕ ಪದವಿಗಳನ್ನು ಪಡೆದಿದ್ದ ಅವರು ಸಾಹಿತ್ಯಾಸಕ್ತಿಯಿಂದಲೇ ಹಿಂದಿಯಲ್ಲಿ ರಾಷ್ಟ್ರಭಾಷಾ ವಿಶಾರದ ಪರೀಕ್ಷೆಯನ್ನು ಮುಗಿಸಿದ್ದರು. ದ್ವಿತೀಯ ವರ್ಷದ ಕನ್ನಡ ಎಂ.ಎ. ಪರೀಕ್ಷೆಗೆ 'ಕರ್ನಾಟಕ ಸಂಸ್ಕೃತಿ ಚರಿತ್ರೆಯ ಅಧ್ಯಯನ' ಎಂಬ ವಿಷಯವಿರುತ್ತದೆ. "ಇತಿಹಾಸದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ನಾನು ನಿಮಗೆ ಈ ವಿಷಯದಲ್ಲಿ ಸಹಾಯ ಮಾಡಬಹುದಲ್ಲವೇ" ಎಂದೆ ಸುಮ್ಮನೆ! ದೊಡ್ಡಸ್ತಿಕೆ ಇಲ್ಲದೇ "ಭಾನುವಾರ ನಮ್ಮ ಮನೆಗೆ ಬನ್ನಿ, ಒಟ್ಟಿಗೆ ಕುಳಿತು ಚರ್ಚಿಸೋಣ" ಎಂದರು. ಭಾನುವಾರ ಅವರ ಮನೆಗೆ ಹೋದೆ. ಅವರೊಡನೆ ಮಾತನಾಡುವುದೇ ಸೊಗಸು. ಕರ್ನಾಟಕ ಇತಿಹಾಸಕ್ಕೆ ಸಂಬಂಧಪಟ್ಟಂತೆ ಹತ್ತು–ಹನ್ನೆರಡು ಘಂಟೆ ಅಂದು ನಾವು ಮಾತಾಡಿರ ಬಹುದು. ಕಲಿಕೆಯಲ್ಲಿ ನಿರಂತರ ಆಸಕ್ತಿ ಉಳಿಸಿಕೊಂಡಿರುವ ಶ್ರೀನಿವಾಸರಾವ್ ಇಂದು ಕೂಡ ಸುಲಭವಾಗಿ ಯಾವುದೇ ಪರೀಕ್ಷೆಯನ್ನು ಪಾಸು ಮಾಡಬಲ್ಲರು.

ಆ ಸಂದರ್ಭದಲ್ಲಿ ಶೌರ್ಯ ಸಾಹಸಗಳ ನೆಲೆವೀಡು: ಕಾಫಿ ಕಿತ್ತಳೆಗಳ ತವರೂರು ಕೊಡಗು ಅವರನ್ನು ತನ್ನತ್ತ ಸೆಳೆದುಕೊಂಡಿತು. ಕೊಡಗಿನ ಕೊನೆಯ ಅರಸರು ತಮ್ಮ ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟ ಅವರ ಮನದಲ್ಲಿ

ಅಚ್ಚಳಿಯದೇ ನಿಂತಿತು. ಮೈಸೂರು ಸಂಸ್ಥಾನದ ಹೈದರ್ ಹಾಗೂ ಟಿಪ್ಪು ಮತ್ತು ಈಸ್ಟ್ ಇಂಡಿಯಾ ಕಂಪನಿಗಳ ನಡುವೆ 'ಕೊಡಗು' ಹೇಗೆ ನಲುಗಿಹೋಗಿರಬಹುದೆಂದು ಊಹಿಸತೊಡಗಿದರು. ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ 'ಚಿಕವೀರ ರಾಜೇಂದ್ರ' ಕಾದಂಬರಿ ದಂತಕತೆಗಳಿಗೆ ಕೊಟ್ಟಂತಹ ಮನ್ನಣೆಯನ್ನು ಸೂಕ್ಷ್ಮವಾಗಿ ಗಮನಿಸಿದರು. ಡಾ. ಮಾಸ್ತಿ ಅವರ 'ಚಿಕವೀರ ರಾಜೇಂದ್ರ, ಕಾದಂಬರಿ ಸೃಜನಶೀಲ ಕೃತಿಯಾಗಿ ಮಹತ್ತರ ಸ್ಥಾನಗಳಿಸಿದೆ. ಆದರೆ ಚಿಕವೀರ ರಾಜೇಂದ್ರನ ಕ್ರೂರತನ. ವಿಷಯಲಂಪಟತೆ. ಮೋಸ, ಪ್ರಜಾಪೀಡನೆ. ಕಾಮುಕತೆ ಮೊದಲಾದ ವಿಚಾರಗಳು ಅವನ ದೊಡ್ಡಪ್ಪ ದೊಡ್ಡವೀರ ರಾಜೇಂದ್ರನ ಕಾಲದಲ್ಲೂ ಬರುತ್ತದಲ್ಲ ಇದು ಹೇಗೆ? ಎಂಬುದು ಶ್ರೀನಿವಾಸರಾವ್‌ಅವರ ಕುತೂಹಲದ ಪ್ರಶ್ನೆ. ಟಿಪ್ಪು ಕಾಲದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದ ದೊಡ್ಡ ವೀರ ರಾಜೇಂದ್ರನ ಬಗ್ಗೆ ಪ್ರಜೆಗಳಲ್ಲಿ ಅರಸರ ಮೇಲೆ ದ್ವೇಷ ಹುಟ್ಟಿಸಲು ಶತ್ರುರಾಜರು ಹೂಡಿದ ಸಂಚು ಇದಾಗಿರಬಹುದೆಂಬ ಅನುಮಾನ ಇವರದು, ದೊಡ್ಡವೀರ ರಾಜೇಂದ್ರ ಹಾಗು ಚಿಕವೀರರಾಜೇಂದ್ರರ ಕಾಲದಲ್ಲಿ ಒಟ್ಟು ಮೂರು ಸಾವಿರ ಅಮಾಯಕರನ್ನು ಕೊಲ್ಲಲಾಯಿತೆಂದು ದಂತಕತೆ ಇದೆ. ಇದು ಅವರ ರಾಜ್ಯದ ಜನಸಂಖ್ಯೆಯ ಅರ್ಧದಷ್ಟಿರಬಹುದು. ಸ್ಥಳೀಯ ರಾಜರು ದುಷ್ಟರೆಂದು ಚಿತ್ರಿಸಲು ಟಿಪ್ಪು ಹಾಗೂ ಇಂಗ್ಲೀಷ್‌ನವರು ಒಂದೇ ತಂತ್ರ ಅನುಸರಿಸಿರುವರೇ ಮೊದಲಾದ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಶ್ರೀನಿವಾಸರಾವ್ ಮುಂದಾದರು. "ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನ ಸಂದರ್ಭದಲ್ಲಿ ಪ್ರತಿ ರಾಜವಂಶಗಳು ತಮ್ಮ ಸಾಮ್ರಾಜ್ಯದ ಸ್ಥಾಪನೆಯ ಹಿನ್ನೆಲೆಯಲ್ಲಿ ಹೇಳುವ 'ಗಂಡು ಮೆಟ್ಟಿದ ನೆಲದ ಕತೆ' ಅವರ ಮನದ ಮುಂದೆ ಹಾಯ್ದು ಹೋಯಿತು. ಬೇಟೆ ನಾಯಿ ಅಟ್ಟಿಸಿಕೊಂಡು ಹೋದ ಮೊಲದ ಕತೆ ಎಲ್ಲಾ ರಾಜರ ವಂಶದ ಪ್ರಾರಂಭದಲ್ಲಿ ಸಾಮಾನ್ಯವಾಗಿ ಬರುತ್ತಿತ್ತು. ಅವರು ಕೊಡಗಿನ ಸಂಸ್ಥಾನದ ದೊಡ್ಡವೀರ ರಾಜೇಂದ್ರನ ಬದುಕಿನಲ್ಲಿ ದಂತಕತೆಗಳೇ ನೈಜ ಇತಿಹಾಸವೆಂಬಂತೆ ಚಿತ್ರಿತವಾಗಿದೆ ಎಂಬುದನ್ನು ದೃಢ ಮಾಡಿಕೊಂಡರು. ಕೊಡಗಿನ ಸಂಸ್ಥಾನದ ಇತಿಹಾಸಕ್ಕೆ ಸಂಬಂಧ ಪಟ್ಟಂತ ಗ್ರಂಥಗಳನ್ನೆಲ್ಲಾ ಅಧ್ಯಯನ ಮಾಡಿದರು. ಡಾ. ಸೂರ್ಯನಾಥ ಕಾಮತ್ ಡಾ. ಎ. ವಿ. ನರಸಿಂಹಮೂರ್ತಿ. ಡಾ. ಸುಬ್ಬಯ್ಯ. ಡಾ. ಪಿ. ಎಸ್. ರಾಮಾನುಜಂ ಮುಂತಾದ ಹಲವರ ಗ್ರಂಥಗಳನ್ನು ಪರಿಶೀಲನೆ ನಡೆಸಿ ನನ್ನೊಡನೆ ಕೊಡಗು ಜಿಲ್ಲೆಯನ್ನು ಸುತ್ತಿ ಬಳಸಿ ಬಂದರು. ಅದರ ಪ್ರತಿಫಲ "ಪ್ರೌಢ ಪ್ರತಾಪ ವೀರ ರಾಜೇಂದ್ರ" ಕಾದಂಬರಿ.

ಕೊಡಗು ಸಂಸ್ಥಾನದ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನಕ್ಕೆ ಮೂಲ ಆಕರ ಗ್ರಂಥವಿದು. ಕೊಡಗಿನ ಕಲಿಗಳ ಸಾಹಸ ಹಾಗೂ ಮಾನವೀಯ ಗುಣಗಳ ಅರಿವಿಗೆ

ಈ ಕಾದಂಬರಿ ಸಹಾಯಕವಾಗಿದೆ. ಕನ್ನಡದ ಹಿರಿಯ ಚೇತನರಾದ ಡಾ. ಸಿದ್ಧಯ್ಯ ಪುರಾಣಿಕ್ ಅವರು ಹೇಳುವಂತೆ ಪ್ರೌಢ ಪ್ರತಾಪ ವೀರರಾಜೇಂದ್ರ ಕಾದಂಬರಿ ಓದಿದ ಮೇಲೆ ಶ್ರೀನಿವಾಸರಾಯರ ಎಲ್ಲಾ ಕಾದಂಬರಿಗಳೂ ಐತಿಹಾಸಿಕ ಕಾದಂಬರಿಗಳಾಗಿರ ಬಾರದಾಗಿತ್ತೇ' ಎಂದುಕೊಳ್ಳುವ ಓದುಗರ ಸಂಖ್ಯೆ ಹೆಚ್ಚು. ಪ್ರೌಢ ಪ್ರತಾಪ ವೀರ ರಾಜೇಂದ್ರ ಕಾದಂಬರಿಯ ಮೊದಲಭಾಗ ಈಗ ಪ್ರಕಟವಾಗಿದೆ. ಎರಡನೆಯ ಭಾಗ ಪ್ರಕಟವಾದರೆ ಕೊಡಗಿನ ಇತಿಹಾಸಕ್ಕೆ ಮತ್ತಷ್ಟು ಅಪೂರ್ವ ಕೊಡುಗೆಯಾಗು ವುದರಲ್ಲಿ ಸಂಶಯವಿಲ್ಲ. ಓದುಗರ ಆಸಕ್ತಿಯನ್ನು ಉಳಿಸಿಕೊಂಡು ಇತಿಹಾಸಕ್ಕೆ ಅಪಚಾರವಾಗದೇ ಐತಿಹಾಸಿಕ ಕಾದಂಬರಿಗಳನ್ನು ರಚಿಸುವುದು ಸುಲಭದ ಮಾತಲ್ಲ. ಇಂತಹ ಮಹತ್ತರ ಕ್ರಿಯೆಯಲ್ಲಿ ಸಂಪೂರ್ಣವಾಗಿ ಯಶಸ್ವಿಯಾಗಿದ್ದಾರೆಂದು ಅವರ 'ಪ್ರೌಢ ಪ್ರತಾಪ ವೀರರಾಜೇಂದ್ರ' ಓದಿದ ಪ್ರತಿಯೊಬ್ಬರೂ ಹೇಳುವ ಮಾತಾಗಿದೆ.

## 5

ಶ್ರೀನಿವಾಸರಾವ್ ಅವರಿಗೆ ಕಲಿಯುವುದರಲ್ಲಿ ಮಾತ್ರ ಆಸಕ್ತಿಯಿಲ್ಲ. ಕಲಿಸು ವುದರಲ್ಲೂ ಆಸಕ್ತಿಯಿದೆ. ಅದರಲ್ಲೂ ಮಕ್ಕಳಿಗೆ ಕತೆಯ ಮೂಲಕ ಸರಳವಾಗಿ ವಿಚಾರಗಳನ್ನು ಕಲಿಸುವುದರಲ್ಲಿ ಅವರು ನಿಷ್ಣಾತರು. ಒಮ್ಮೆ ನಾನು ಅವರ ಮನೆಯ ಮಹಡಿಯ ಮೇಲೆ ಮಾತನಾಡುತ್ತಾ ಕುಳಿತಿದ್ದಾಗ ಅವರ ಮೊಮ್ಮಗಳು 'ರಂಜು'ವಿನ ಆಕ್ರಂದನ ಧ್ವನಿ ಕೇಳಿ ಬಂತು. ಹೋಗಿ ನೋಡಿದರೆ ಬೆಡ್‌ಲೈಟ್ ಸ್ವಿಚ್ ಬಿಚ್ಚಿ ರಿಪೇರಿ ಮಾಡಲು ಹೋಗಿ ಷಾಕ್ ಹೊಡೆಸಿಕೊಂಡು ಗಾಬರಿಯಿಂದ ನಡಗುತ್ತಾ ನಿಂತಿದ್ದಾಳೆ. ಅವರಮ್ಮ, ಅಜ್ಜ ಮಗುವಿನ ಕೂಗು ಕೇಳಿ ಓಡಿ ಬಂದರು. ದೊಡ್ಡವರ ಹಿಂಡನ್ನೆಲ್ಲಾ ಕಂಡು ಮಗು ಮತ್ತಷ್ಟು ಹೆದರಿಕೆಯಿಂದ ತಲೆ ತಗ್ಗಿಸಿ ಕೊಂಡು ಅಳುತ್ತಾ ನಿಂತಳು. ಶ್ರೀನಿವಾಸರಾವ್ ಮಗುವಿನ ಹತ್ತಿರ ಹೋಗಿ ಅದರ ತಲೆ ಸವರುತ್ತಾ "ಏನಮ್ಮ, ರಂಜು ಏನಾಯ್ತು" ಎಂದು ಮೃದುವಾಗಿ ಕೇಳತೊಡಗಿ ದರು. "ತಾತ, ಗೋಡೆಯಲ್ಲಿದ್ದ ಸ್ವಿಚ್ ಹಾಕಿದರೂ ಲೈಟ್ ಯಾಕೆ ಹತ್ತಿಕೊಳ್ಳಲಿಲ್ಲ ಅಂತ ನೋಡುತ್ತಾ ಅದನ್ನ ಮುಟ್ಟಿದೆ" ಎಂದ್ಲು. ಶ್ರೀನಿವಾಸರಾವ್ ಲೈಟ್ ಸ್ವಿಚ್ ಬಿಚ್ಚಿ ತೋರಿಸುತ್ತಾ ಮಗುವಿಗೆ ಒಂದು ಪಾಠವೇ ಹೇಳತೊಡಗಿದರು.

ಪ್ರಾಯಶಃ ಶ್ರೀನಿವಾಸರಾವ್ ಅವರಲ್ಲಿ ಕಲಿಸುವುದರ ಆಸಕ್ತಿಯ ಫಲವೇ ಮಕ್ಕಳೇ, ಇವರನ್ನು ನೀವು ಬಲ್ಲಿರಾ ?" ಹಾಗೂ "ಕನ್ನಡ ಸಾಹಿತಿ ದರ್ಶನ"ದಂತಹ ಕೃತಿಗಳು ಹೊರಬರಲು ಕಾರಣವಾಗಿದೆ. 'ಪ್ರಜಾಮತ' ಸಂಪಾದಕರಾಗಿದ್ದ

ದಿವಂಗತ ಪಾ.ವಂ. ನಾಗರಾಜರಾವ್ ಅವರು ಶ್ರೀನಿವಾಸರಾವ್ ಅವರ ಅಭಿಮಾನಿ. ತಮ್ಮ ಪತ್ರಿಕೆಯಲ್ಲಿ ಇವರ ಅನೇಕ ಕಾದಂಬರಿಗಳು ಧಾರಾವಾಹಿಯಾಗಿ ಪ್ರಕಟವಾಗಲು ಕಾರಣರಾದವರು. ಸೃಜನಶೀಲ ಲೇಖಕರಾದಂತೆ ಶ್ರೀನಿವಾಸರಾವ್ ಅವರು ಸಂಶೋಧನಾ ಕ್ಷೇತ್ರದಲ್ಲೂ ಕೆಲಸ ಮಾಡಿ ಒಳ್ಳೆಯ ಹೆಸರು ಗಳಿಸಲೆಂಬಂತೆ "ಶ್ರೀನಿವಾಸರಾವ್ ಇಂದು ಪತ್ರಿಕೆಗಳಲ್ಲಿ 'ಮಕ್ಕಳ ಪುಟ' ಎಂದರೆ ಕಾಗಕ್ಕ ಗುಬ್ಬಕ್ಕ ಕತೆಗಳಿಗೆ ಸೀಮಿತವಾಗಿದೆ. ನಮ್ಮ ಮಕ್ಕಳು ಕನ್ನಡ ಸಾಹಿತ್ಯದ ಮೇರು ಪುರುಷರ ವಿಚಾರ ತಿಳಿಯಲಾರರೇ" ಎಂದರು. ಶ್ರೀನಿವಾಸರಾವ್ ಅವರಿಗೆ ಇಷ್ಟು ಹೇಳಿದರೆ ಸಾಕಲ್ಲವೇ ? ಒಳ್ಳೆಯ ಸಲಹೆ ಯಾವ ಮೂಲದಿಂದ ಬಂದರೂ ಸ್ವೀಕರಿಸುವ ಉದಾರ ಮನೋಭಾವ ಅವರದು. ತಕ್ಷಣ ಕಾರ್ಯಪ್ರವೃತ್ತರಾದರು. ಆಧುನಿಕ ಯುಗದಲ್ಲಿ ಮಕ್ಕಳ ಆಸಕ್ತಿಗನುಗುಣವಾಗಿ ಕೆಲಸ ಮಾಡಿದ ಹಿರಿ-ಕಿರಿ ಸಾಹಿತಿಗಳೆಲ್ಲರ ವಿವರಗಳನ್ನು ಕಲೆಹಾಕಿ 'ಪ್ರಜಾಮತ'ದ ಮೂಲಕ ಕನ್ನಡ ನಾಡಿನ ಮಕ್ಕಳಿಗೆ ಪರಿಚಯ ಮಾಡಿಕೊಟ್ಟರು. ಎಂ. ಎಸ್. ಪುಟ್ಟಣ್ಣ, ಪಂಜೆ ಮಂಗೇಶರಾಯರು, ರಾಷ್ಟ್ರಕವಿ ಕುವೆಂಪು, ವರಕವಿ ದ. ರಾ. ಬೇಂದ್ರೆ, ಡಾ|| ದೇ. ಜ. ಗೌ, ಡಾ|| ಜಿ. ಪಿ. ರಾಜರತ್ನಂ, ಡಾ|| ಶಿವರಾಮ ಕಾರಂತ, ಪ್ರೊ. ಕೆ. ಎಸ್. ನಿಸಾರ್ ಅಹಮದ್, ಡಾ. ಎಚ್. ಎಸ್. ವೆಂಕಟೇಶಮೂರ್ತಿ, 'ಸಿಸು' ಸಂಗಮೇಶ, ಟಿ. ಎಸ್. ನಾಗರಾಜಶೆಟ್ಟಿ ಅವರ ತನಕ ಲೇಖಕರನ್ನು ತುಂಬಾ ಸರಳವಾಗಿ ಮಕ್ಕಳಿಗೆ ಪರಿಚಯ ಮಾಡಿಕೊಟ್ಟಿದ್ದಾರೆ. ಅವನ್ನೇ "ಮಕ್ಕಳೇ, ಇವರನ್ನು ನೀವು ಬಲ್ಲಿರಾ ?" ಎಂಬ ಹೆಸರಿನಲ್ಲಿ ಗ್ರಂಥ ಸಹ ತಂದಿದ್ದಾರೆ. ಗ್ರಂಥದ ಮೌಲ್ಯವನ್ನು ಗಮನಿಸಿದ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮೂಲಕ ಅದರ ಮುದ್ರಣ ವೆಚ್ಚಕ್ಕೆ ಧನಸಹಾಯ ನೀಡಿದೆ.

ಮಕ್ಕಳಿಗೆ ಹೊಸ ವಿಚಾರಗಳನ್ನು ಕಲಿಸುವುದರ ಅವರ ಆಸಕ್ತಿಯ ಫಲವಾಗಿ 'ಕನ್ನಡ ಸಾಹಿತಿ ದರ್ಶನ' ಗ್ರಂಥ ಪ್ರಕಟನೆ. ಶ್ರೀನಿವಾಸರಾವ್ ಅವರು ಮೂಲತಃ ವಿಜ್ಞಾನದ ವಿದ್ಯಾರ್ಥಿ. ಸೃಜನಶೀಲ ಲೇಖಕರೂ ಹೌದು. ಆದರೆ ಸಾಹಿತ್ಯ ರಚನೆಗೆ ಬೇಕಾದ ಸಿದ್ಧತೆ ಮಾಡಿಕೊಂಡವರಲ್ಲ. ಅವರೇ ಹೇಳುವಂತೆ "ಕನ್ನಡ ಸಾಹಿತ್ಯ ಚರಿತ್ರೆ ಬರೆಯುವುದು ಅವರ ಉದ್ದೇಶವಾಗಿರಲಿಲ್ಲ. ಕನ್ನಡ ನಾಡಿನ ಮಕ್ಕಳಿಗೆ ಆದಿಕವಿ ಪಂಪನಿಂದ ಹಿಡಿದು ಇತ್ತೀಚೆಗೆ ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಡಾ|| ಯು. ಆರ್. ಅನಂತಮೂರ್ತಿಯವರೆಗೆ ಮೊದಲ ಕಿರುಪರಿಚಯ ಮಾಡಿಕೊಡುವುದೇ ಅವರ ಗುರಿಯಾಗಿತ್ತು. ಕನ್ನಡ ಸಾಹಿತಿ ದರ್ಶನದ ಮೂಲಕ ಐನೂರು ಪುಟಗಳಲ್ಲಿ ಸುಮಾರು ಸಾವಿರದ ಐನೂರು ಕನ್ನಡ ಸಾಹಿತಿಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ವ್ಯಾಸರಾಯರು ಬೇಸಿಗೆ ರಜೆಯಲ್ಲಿ ಮೊಮ್ಮಕ್ಕಳಿಗೆ ಕನ್ನಡ ಸಾಹಿತ್ಯದಲ್ಲಿ ದುಡಿದ ಮಹನೀಯರನ್ನು ಕುರಿತು ಕತೆ ಹೇಳತೊಡಗುತ್ತಾರೆ.

ರಾಮಾಯಣ. ಮಹಾಭಾರತ. ಜೈನ ಹಾಗೂ ವೀರಶೈವ ಧರ್ಮ ಪುರಾಣಗಳು, ಛಂದಸ್ಸು, ವ್ಯಾಕರಣಶಾಸ್ತ್ರ ಗ್ರಂಥಗಳ ರಚನಕಾರರು ಮುಂತಾಗಿ ವಿಭಾಗ ಮಾಡಿಕೊಂಡು ಸಾಹಿತ್ಯ ಚರಿತ್ರೆಯ ಕತೆ ಹೇಳುವ ವ್ಯಾಸರಾಯರು ಆಧುನಿಕ ಕಾಲಕ್ಕೆ ಬಂದಂತೆ ಕತೆ, ಕಾದಂಬರಿ, ಸಂಶೋಧನೆ. ಪತ್ರಿಕೋದ್ಯಮಗಳೆಂದು ಮಕ್ಕಳನ್ನು ಮರೆತುಬಿಡುತ್ತಾರೆ. ಈ ಗ್ರಂಥದಲ್ಲಿ ಶ್ರೀನಿವಾಸರಾವ್ ಕಲೆಹಾಕಿರುವ ಮಾಹಿತಿ ಬಹಳ ದೊಡ್ಡದು. ಪ್ರತಿಯೊಬ್ಬ ಲೇಖಕರ ಜನ್ಮದಿನಾಂಕ, ಹುಟ್ಟಿದ ಸ್ಥಳ, ಅವರ ವಿದ್ಯಾಭ್ಯಾಸ, ಕೃತಿ ವಿವರಗಳನ್ನು 'ಅಡಿಟಿಪ್ಪಣಿ'ಯಲ್ಲಿ ಒದಗಿಸುತ್ತಾ ಗ್ರಂಥಕ್ಕೆ ಸಂಶೋಧನಾ ವ್ಯಾಪ್ತಿಯನ್ನು ಒದಗಿಸಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಯಾರಿಗಾದರೂ ಹೇಳಲಿ. ಇಲ್ಲಿರುವ ವಿವರಗಳು ಸಾಹಿತ್ಯಾಸಕ್ತರಿಗೆ ದೊಡ್ಡ ಸಂಪನ್ಮೂಲವಾಗಿವೆ.

'ಕವಿಚರಿತೆ' ಗ್ರಂಥದ ಕರ್ತೃಗಳಾದ ಆರ್. ನರಸಿಂಹಾಚಾರ್ಯ ಅವರಿಂದ ಹಿಡಿದು ವಿದ್ಯಾರ್ಥಿಗಳಿಗಾಗಿ 'ಕನ್ನಡ ಸಾಹಿತ್ಯ ಚರಿತ್ರೆ' ಬರೆದು ಡಾ. ತ.ಸು. ಶಾಮರಾಯ ಹಾಗೂ ಪ್ರೊ. ಕೆ. ವೆಂಕಟರಾಮಪ್ಪನವರ ತನಕ ಹತ್ತಾರು ಮಹನೀಯರು ಕನ್ನಡ ಸಾಹಿತ್ಯ ಚರಿತ್ರೆ ರಚಿಸಿದ್ದಾರೆ. ಅವರಿಗೆಲ್ಲಾ ಸಾಧಿತವಾಗದ ಅನೇಕ ವಿಚಾರಗಳು ಅವರುಗಳ ಗ್ರಂಥದಲ್ಲಿ ಉಳಿದಿದ್ದರೂ ಕನ್ನಡ ಸಾಹಿತ್ಯ ಚರಿತ್ರೆ ಮತ್ತಷ್ಟು ಗೊಂದಲವಾಗಿಯೇ ಉಳಿದಿದೆ. ಅದರಲ್ಲೂ ಆಧುನಿಕ ಕಾಲವನ್ನು ಇವರ್‍ಯಾರೂ ಪರಿಗಣಿಸಿಯೇ ಇಲ್ಲ. ಮಹಾಕವಿ ಪಂಪನಿಂದ ಹಿಡಿದು ಆಧುನಿಕ ಕಾಲದ ಎಲ್ಲಾ ಸಾಹಿತಿಗಳನ್ನು ಪರಿಚಯ ಮಾಡಿಕೊಡುವುದು ಸಾಮಾನ್ಯವಾದ ಸಾಹಸವಲ್ಲ. ಮಕ್ಕಳಿಗೆ ಎರಡು ಸಾವಿರ ವರ್ಷಗಳಷ್ಟು ಸುದೀರ್ಘವಾದ ಇತಿಹಾಸವುಳ್ಳ ಕನ್ನಡ ಸಾಹಿತ್ಯ ಚರಿತ್ರೆಯನ್ನು ಹೇಳ ಹೊರಟರೆ ಸಮಸ್ಯೆಗಳನ್ನು ಮೈಮೇಲೆ ಎಳೆದುಕೊಂಡಂತೆ ತಾನೇ ! 1988ರಲ್ಲಿ ಮೈಸೂರಿನಲ್ಲಿ 'ಉದಯರವಿ'ಯಲ್ಲಿ ರಾಷ್ಟ್ರಕವಿ ಕುವೆಂಪು ಅವರು ಈ ಗ್ರಂಥವನ್ನು ಬಿಡುಗಡೆ ಮಾಡಿದರು. "ಮಹತ್ತರ ಕಾರ್ಯಕ್ಕಾಗಿ ಸೋಲುವುದು ಗೆಲುವಿನ ಮಹತ್ವಕ್ಕಿಂತ ಕಡಿಮೆಯದಲ್ಲ" ಎಂಬ ಕುವೆಂಪು ನುಡಿಯೇ ಶ್ರೀನಿವಾಸರಾವ್ ಅವರಿಗೆ ಸ್ಫೂರ್ತಿ ನೀಡಿರಬೇಕು. ಶ್ರೀನಿವಾಸರಾವ್ ಅವರ ಗ್ರಂಥದಲ್ಲಿ ದೊರೆಯುವ ಮಾಹಿತಿಯನ್ನು ವೈಜ್ಞಾನಿಕವಾಗಿ ಜೋಡಿಸಿ ರೂಪ ಕೊಟ್ಟರೆ ಸಮಗ್ರ ಕನ್ನಡ ಸಾಹಿತಿ ದರ್ಶನ ಪರಿಪೂರ್ಣವಾಗಿ ದೊರೆಯುವುದರಲ್ಲಿ ಸಂಶಯವಿಲ್ಲ.

ಮಕ್ಕಳ ಜ್ಞಾನಾಭಿವೃದ್ಧಿಯ ಬಗ್ಗೆ ವಿಶೇಷ ಆಸಕ್ತಿಯಿರುವ ಶ್ರೀನಿವಾಸರಾವ್ ಸಮಾನ ವಯಸ್ಕರೊಡನೆ ಸೇರಿ 'ಮಕ್ಕಳ ಸಾಹಿತ್ಯ ಪರಿಷತ್ತು' ಎಂಬ ಸಂಸ್ಥೆ ಕಟ್ಟಿದ್ದಾರೆ. 'ಜಲವಿದ್ಯುತ್' 'ಬಾನುಲಿ ನಾಟಕಗಳು' 'ನಮ್ಮ ವಾಯುಪಡೆ'

'ಗಂಗರಾಜ ದುರ್ವಿನೀತ' 'ಆಕ್ರಂದನ' 'ಸ್ಮರಣೀಯ ಹುತಾತ್ಮರು' 'ಜನಸಂಪತ್ತು' ಮೊದಲಾದ ಹತ್ತಾರು ಮಕ್ಕಳ ಪುಸ್ತಕಗಳನ್ನು ರಚಿಸಿದ್ದಾರೆ.

## 6

ಶ್ರೀನಿವಾಸರಾವ್ ಎಂದೂ ಸುಮ್ಮನೇ ಕೂರುವವರಲ್ಲ. ರಕ್ಷಣಾ ಇಲಾಖೆ ಯಲ್ಲಿದ್ದಾಗಲೇ ತಮ್ಮ ಕಛೇರಿಯಲ್ಲಿ 'ಕನ್ನಡ ಸಂಘ' ಸ್ಥಾಪಿಸಿ ಉತ್ತರ ಭಾರತ ದವರಿಗೆ ಕನ್ನಡ ನಾಡಿನ ಪರಿಚಯ ಮಾಡಿಕೊಟ್ಟಿದ್ದಾರೆ. ತಮ್ಮ ಕನ್ನಡ ಸಂಘಕ್ಕೆ ಡಾ. ಸಿದ್ಧಯ್ಯ ಪುರಾಣಿಕ, ಪ್ರೊ. ಜಿ. ಎಸ್. ಸಿದ್ದಲಿಂಗಯ್ಯ, ಡಾ. ಸಾ.ಶಿ. ಮರುಳಯ್ಯ, ಪ್ರೊ. ಎಲ್. ಎಸ್. ಶೇಷಗಿರಿರಾವ್. ಡಾ.ಎಂ. ಚಿದಾ ನಂದಮೂರ್ತಿ ಮೊದಲಾದ ಸಾಹಿತ್ಯ ಪುರುಷರನ್ನು ಕರೆಯಿಸಿ ತಮ್ಮ ಸಹೋದ್ಯೋಗಿ ಗಳಿಗೆ ಕನ್ನಡ ನಾಡಿನ ಹಿರಿಮೆ–ಗರಿಮೆಯನ್ನು ಪರಿಚಯಿಸಿ ಕೊಟ್ಟಿದ್ದಾರೆ.

ನಿವೃತ್ತರಾದ ನಂತರ ಕನ್ನಡ ಸಾಹಿತ್ಯ ಪರಿಷತ್ತಿನ ಕೋಶಾಧ್ಯಕ್ಷರಾಗಿ ಕನ್ನಡ ಕಟ್ಟುವಲ್ಲಿ ದುಡಿದಿದ್ದಾರೆ. ಸ್ವತಃ ಪ್ರಕಾಶಕರಾದ ಶ್ರೀನಿವಾಸರಾವ್ ಅವರಿಗೆ ಪ್ರಕಾಶಕರ ದುಃಖ–ದುಮ್ಮಾನಗಳ ಅರಿವು ಇದೆ. "ಅಖಿಲ ಕರ್ನಾಟಕ ಪ್ರಕಾಶಕರ ಸಂಘ"ದ ಕಾರ್ಯದರ್ಶಿಯಾಗಿ ಸಕ್ರಿಯವಾಗಿ ಕೆಲಸ ಮಾಡುತ್ತಿರುವ ಹೆಗ್ಗಳಿಕೆ ಅವರದು.

ತಾನಿರುವ ಪರಿಸರವೆಲ್ಲಾ ಸಾಹಿತ್ಯ ಸಂಸ್ಕೃತಿಯ ಕಂಪು ಹರಡಬೇಕೆಂಬ ಆಲೋಚನೆಯುಳ್ಳವರು ಅವರು. ಬೆಂಗಳೂರಿನ ಶ್ರೀನಗರದಲ್ಲಿ ಮೂರು ದಶಕ ಗಳಿಂದ ವಾಸವಾಗಿರುವ ಶ್ರೀನಿವಾಸರಾವ್ ಅಲ್ಲಿನ ಜನತೆಯ ಸಾಂಸ್ಕೃತಿಕಾಸಕ್ತಿ ವೃದ್ಧಿಸಲು 'ಬನಶಂಕರಿ ಸಾಂಸ್ಕೃತಿಕ ಸಂಘ' ಸ್ಥಾಪಿಸಿ ಬೆಳೆಸಿದ್ದಾರೆ. ಈ ಸಂಘ ಪ್ರತಿವರ್ಷ ವಿಜೃಂಭಣೆಯಿಂದ ರಾಜ್ಯೋತ್ಸವ ಕಾರ್ಯಕ್ರಮ ನಡೆಸುವುದಲ್ಲದೇ ಪ್ರತಿ ತಿಂಗಳು ಸಂಘದ ಸದಸ್ಯರಿಗಾಗಿ ಯಾವುದಾದರೊಂದು ಕಾರ್ಯಕ್ರಮ ಹಮ್ಮಿಕೊಳ್ಳುವುದು ಉಂಟು.

# 7

ಶ್ರೀನಿವಾಸರಾವ್ ಅವರದು ನಿರಂತರ ಕ್ರಿಯಾಶೀಲ ಚಟುವಟಿಕೆಯ ವ್ಯಕ್ತಿತ್ವ. ಏನಾದರೂ ಕೆಲಸ ಹಚ್ಚಿಕೊಂಡು ಸದಾಕಾಲ ತಮ್ಮನ್ನು ಅದರಲ್ಲಿ ತೊಡಗಿಸಿಕೊಳ್ಳುವ ಜಾಯಮಾನ ಅವರದು. ಸಾಹಿತ್ಯ ಸೃಷ್ಟಿ, ಪ್ರಕಟಣೆ, ಸಂಘ ಸಂಸ್ಥೆಗಳ ಒಡನಾಟ–ಹೀಗೆ ಎಲ್ಲವನ್ನೂ ಸುಸೂತ್ರವಾಗಿ ಮಾಡಿ ಮುಗಿಸುವ ಛಲ ಅವರದು.

1953 ರಷ್ಟು ಹಿಂದೆಯೇ ಇವರ ಕತೆ ಹಾಗೂ ಡಾ॥ ಹಾ. ಮಾ. ನಾಯಕ ಅವರ ಕತೆಗಳಿಗೆ "ಮೈಸೂರು ವಿಶ್ವವಿದ್ಯಾನಿಲಯ" ಏರ್ಪಡಿಸಿದ್ದ ಕಥಾ ಸ್ಪರ್ಧೆಯಲ್ಲಿ ಬಹುಮಾನ ಬಂದಿದೆ. ಒರಿಯಾ ಹಾಗೂ ಬಂಗಾಳಿ ಭಾಷಾ ಕತೆಗಳನ್ನು ಶ್ರೀನಿವಾಸ ರಾವ್ ಅನುವಾದಿಸಿದ್ದಾರೆ. ನ್ಯಾಷನಲ್ ಬುಕ್ ಟ್ರಸ್ಟ್ ಅವುಗಳನ್ನು ಪುಸ್ತಕ ರೂಪದಲ್ಲಿ ತಂದಿದೆ. ಇವುಗಳಿಗೆ ಅತ್ಯುತ್ತಮ ಅನುವಾದವೆಂದು ಮನ್ನಣೆ ಸಹ ದೊರೆತಿದೆ. ಇದರ ಜೊತೆ ಇಪ್ಪತ್ತು ಕಾದಂಬರಿ. ಐದು ಕಥಾ ಸಂಕಲನ. ಹನ್ನೆರಡು ಮಕ್ಕಳ ಪುಸ್ತಕ, ಮೂರು ಪ್ರವಾಸ ಕಥನಗಳನ್ನು ಪ್ರಕಟಿಸಿದ್ದಾರೆ. ಅವರ ಸಾಹಿತ್ಯಿಕ ಸೇವೆ ಸಹೃದಯರ ಮೆಚ್ಚುಗೆ ಪಡೆದಿದೆ. ಆದರೂ ಅವರ ಮನಸದ ಮೂಲೆಯಲ್ಲಿ ಅತೃಪ್ತಿಯ ಹೊಗೆ ಕಾಣದೇ ಇಲ್ಲ. ಒಂದೆರಡು ಗ್ರಂಥಗಳನ್ನು ಪ್ರಕಟಿಸಿದ ವ್ಯಕ್ತಿಗಳಿಗೆ ಸಾಹಿತ್ಯ ಅಕಾಡೆಮಿಯ ವಿಶೇಷ ಪ್ರಶಸ್ತಿ ಹಾಗೂ ರಾಜ್ಯೋತ್ಸವ ಪ್ರಶಸ್ತಿ ಸಂದಾಯವಾಗಿರುವುದುಂಟು. "ಸಿಕ್ಕಿದವರಿಗೆ ಸೀರುಂಡೆ" ಎನಿಸಿರುವ ಪ್ರಶಸ್ತಿಗಳು ಶ್ರೀನಿವಾಸರಾವ್‌ರಂತಹ ಅನೇಕ ಶ್ರದ್ಧಾವಂತರನ್ನು ಪಕ್ಕ ಸರಿಸಿರುವುದನ್ನು ಕಾಣಬಹುದಾಗಿದೆ. ರಾಜಕೀಯ, ಚಲನಚಿತ್ರ, ಕ್ರೀಡಾ ಕ್ಷೇತ್ರಗಳಲ್ಲಿ ಕೇಳಿ ಬರುತ್ತಿರುವ "ಗಾಡ್ ಫಾದರ್" ಎಂಬ ಶಬ್ದದ ನೆರವು ಸಾಹಿತ್ಯ ಕ್ಷೇತ್ರಕ್ಕೂ ಬೇಕಾಗಿರಬಹುದೇನೋ ! ದೂರದ ಮುಂಬೈನಲ್ಲಿ ಸಾಹಿತ್ಯ ಸೇವೆ ಪ್ರಾರಂಭ ಮಾಡಿದ ಶ್ರೀನಿವಾಸರಾವ್ ಅವರು ಮೊದಲಿನಿಂದಲೂ ಅವರಿವರ ಮರ್ಜಿ ಹಿಡಿದು ಬಾಳಲು ಕಲಿತವರಲ್ಲ. ಹೀಗಾಗಿ ಅನೇಕ ಲೌಕಿಕ ಪ್ರಯೋಜನ ಅವರಿಗೆ ದೊರೆಯದೆ ಹೋಗಿರಬಹುದು. ಆದರೆ ಅವರ ಕಾದಂಬರಿಗಳನ್ನು ಓದಿದ ಸಹೃದಯರು ಹಾಗೂ ಅವರ ಜೊತೆಗೆ ಸಂಘ ಸಂಸ್ಥೆಗಳಲ್ಲಿ ಕೆಲಸ ಮಾಡಿದವರು ಶ್ರೀನಿವಾಸರಾವ್ ಅವರ ಅಪ್ಪಟ ಪ್ರತಿಭೆಯನ್ನು ಗುರುತಿಸದೇ ಇರಲಾರರು.

ಶ್ರೀನಿವಾಸರಾವ್ ಅವರ ಬದುಕಿನ ವಿವರಗಳನ್ನು ಕಂಡಾಗೆಲ್ಲಾ ಅವರ ಕೌಟುಂಬಿಕ ನೆಮ್ಮದಿಯನ್ನು ಗುರುತಿಸದೇ ಹೋಗುವುದು ಸಾಧ್ಯವೇ ಇಲ್ಲ. ಪ್ರತಿಯೊಬ್ಬ ಯಶಸ್ವಿ ಪುರುಷನ ಹಿಂದೆ ಮಹಿಳೆ ಇದ್ದೇ ಇರುತ್ತಾಳೆಂಬ ಮಾತು ಹೆಚ್ಚು ಹೆಚ್ಚು ಬಳಸಿ ಕ್ಲೀಷೆಯಾಗಿರಬಹುದು. ಆದರೆ ಶ್ರೀನಿವಾಸರಾವ್ ಅವರ

ವಿಚಾರದಲ್ಲಿ ಇದು ಹೇಳಲು ಮಾತಾಗಲು ಸಾಧ್ಯವೇ ಇಲ್ಲ. ಅವರ ಪತ್ನಿ ಶ್ರೀಮತಿ ಅನಸೂಯ ಶ್ರೀನಿವಾಸರಾವ್ ಅವರಷ್ಟೇ ಉತ್ಸಾಹಶಾಲಿಗಳು. "ಪ್ರೌಢ ಪ್ರತಾಪ ವೀರ ರಾಜೇಂದ್ರ" ಹಾಗು "ಕನ್ನಡ ಸಾಹಿತಿ ದರ್ಶನ" ದಂತಹ ಬೃಹತ್ ಗ್ರಂಥಗಳು ಶ್ರೀನಿವಾಸರಾವ್ ಅವರ ಮೂಲಕ ಹೊರಬರಲು ಆ ತ್ಯಾಗಮಯಿಯೇ ಪ್ರೇರಕ ಶಕ್ತಿಯಾಗಿದ್ದರೆಂದರೆ ತಪ್ಪಿಲ್ಲ.

ಶ್ರೀನಿವಾಸರಾವ್ ಅವರದು ತುಂಬಾ ಸ್ನೇಹಶೀಲ ವ್ಯಕ್ತಿತ್ವ. ಶ್ರೀನಗರದ "ಸೌರಭ" ಮನೆ ಸದಾಕಾಲ ಅತಿಥಿ–ಅಭ್ಯಾಗತರಿಂದ ತುಂಬಿ ಹೋಗಿರುತ್ತದೆ. ಹೊಸ ಹೊಸ ರುಚಿಯ ಊಟ–ತಿಂಡಿ, ಸದಾ ನಗುಮುಖ, ಸಣ್ಣವರು–ಹಿರಿಯರು ಎಂಬ ಭೇದವೆಣಿಸದೇ ಎಲ್ಲರನ್ನು ಸಮಾನ ರೀತಿಯಲ್ಲಿ ಕಾಣುವ ಶ್ರೀನಿವಾಸರಾವ್ ದಂಪತಿಗಳನ್ನು ಅವರ ಮಿತ್ರರೆಲ್ಲಾ ಕೊಂಡಾಡುತ್ತಾರೆ.

## 8

ಶ್ರೀನಿವಾಸರಾವ್ ಬಹು ದೊಡ್ಡ ಕುಟುಂಬದಿಂದ ಬಂದವರು. ಇಂದಿಗೂ ಅವರ ಬಂಧು–ಮಿತ್ರರ ಸ್ನೇಹ ವಲಯ ಬಹು ವಿಸ್ತಾರವಾದುದು. ದೊಡ್ಡ ಕುಟುಂಬವೆಂದರೆ ವೈಮನಸ್ಸು–ಪೂರ್ವಾಗ್ರಹಗಳು ಇದ್ದೇ ಇರುತ್ತದಲ್ಲವೇ ? ಕೆಲವೊಮ್ಮೆ ಅವುಗಳು ಬೇಸರವಾಗುವಷ್ಟು ರೀತಿ ಆಸ್ಫೋಟನಗೊಳ್ಳುವುದುಂಟು. ಹಿರಿಯರು-ರಕ್ತಸಂಬಂಧಿಗಳು ಲೌಕಿಕ ಪ್ರಯೋಜನಕ್ಕಾಗಿ ಇವರಿಂದ ದೂರ ಸರಿದರು. ಆಗೆಲ್ಲಾ ಶ್ರೀನಿವಾಸರಾವ್ ಅವರು ಸಾತ್ವಿಕ ನೆಲೆಯನ್ನು ಬಿಟ್ಟವರಲ್ಲ. ಆಕ್ರೋಶಕ್ಕೆ ತುತ್ತಾಗಿ ಮನುಷ್ಯತ್ವ ಕಳೆದುಕೊಂಡವರಲ್ಲ. ತಮ್ಮ ನ್ಯಾಯಯುತ ಹಕ್ಕಿಗೆ ಹೋರಾಟ ನಡೆಸಿದ ನಂತರ ಅದೊಂದು ಕಹಿಘಟನೆ ಎಂಬಂತೆ ಮರೆತು ಬಿಟ್ಟವರು. ಸ್ನೇಹದ ಅಯಸ್ಕಾಂತದಿಂದ ದೂರ ಸರಿದವರನ್ನೂ ಕೂಡ ತಮ್ಮ ವಲಯಕ್ಕೆ ಸೆಳೆದುಕೊಂಡ ಹಿರಿಮೆ ಅವರದು.

## 9

ಶ್ರೀನಿವಾಸರಾವ್ ಅವರ ವ್ಯಕ್ತಿತ್ವದಲ್ಲಿ ಸ್ನೇಹವರ್ಧನೆಯಂತೆ ಮತ್ತೊಂದು ವಿಶೇಷ ಗುಣ ಎಂದರೆ ಉಪಕಾರ ಸ್ಮರಣೆ. ವಿದ್ಯಾರ್ಥಿ ಜೀವನದಲ್ಲಿ ಸಹಾಯ

ಮಾಡಿದ ವಿ. ಆರ್. ನಾಯುಡು ಅವರನ್ನು ಇಂದಿಗೂ ಅವರು ಮರೆತಿಲ್ಲ. ಅವರಿಗೆ ವೈದ್ಯಕೀಯ ಉಪಚಾರವಾಗಲಿ, ತಿರುಪತಿ ದೇವಸ್ಥಾನಕ್ಕೆ ಹಣ ಸಂಗ್ರಹವಾಗಲಿ ಶ್ರೀನಿವಾಸರಾವ್ ಅವರ ನೇತೃತ್ವವಿರಲೇಬೇಕು. ಅದೇ ರೀತಿ ತುಮಕೂರಿನ ಡಿ.ಸಿ.ಸಿ. ಬ್ಯಾಂಕ್ ಜನರಲ್ ಮ್ಯಾನೇಜರ್ ಆಗಿದ್ದ ಶ್ರೀಯುತ ಗುರುಮೂರ್ತಾಚಾರ್ ಹಾಗೂ ಶ್ರೀನಿವಾಸರಾವ್ ಅವರ ಸಂಬಂಧ ಅಪೂರ್ವವಾದುದು. ವಿದ್ಯಾರ್ಥಿ ಜೀವನದಲ್ಲಿ ದೊರೆತ ಸ್ನೇಹ ಮಧ್ಯ ವಯಸ್ಸಿನಲ್ಲಿ ಸಕಾಲದ ಉಪಕಾರ ಸ್ಮರಣೆಯಿಂದಾಗಿ ಅದು ಎಂದೆಂದಿಗೂ ಕಳಚದ ಬೆಸುಗೆಯ ಕೊಂಡಿಯಾಗಿ ಮಾರ್ಪಾಟುಗೊಂಡಿದೆ.

ಶ್ರೀನಿವಾಸರಾವ್ ಅವರ ಬೆಂಗಳೂರಿನ 'ಸೌರಭ' ಮನೆ ಇಂದಿಗೂ ಹಳೆಯ ಕಾಲದ ಶಾನುಭೋಗರ ಮನೆಯಂತೆ ಗಿಜಿಗುಟ್ಟುತ್ತದೆ. ಶ್ರೀನಿವಾಸರಾವ್ ದಂಪತಿಗಳಿಗೆ ಜನಬಳಕೆ ಹೆಚ್ಚು. ಅತ್ತೆ–ಮಾವ, ನಾದಿನಿ. ಭಾವ–ಮೈದುನ, ಅಣ್ಣನ ಮಕ್ಕಳು. ಅಳಿಯಂದಿರು. ಸೊಸೆ. ಅವರ ಕುಟುಂಬ, ಮಗನ ಮಿತ್ರರು–ಹೀಗೆ ಸದಾ ಕಾಲ ಬಂಧು–ಮಿತ್ರರೊಡನೆ ಇರಬಯಸುವವರಿವರು. ಇಬ್ಬರು ಹೆಣ್ಣು ಮಕ್ಕಳು ಮದುವೆಯಾಗಿ ನೆಮ್ಮದಿಯಿಂದ ಗಂಡನ ಮನೆಯಲ್ಲಿದ್ದಾರೆ. ಒಬ್ಬನೇ ಮಗ ಮೈಸೂರಿನಲ್ಲಿ ಬಿ.ಇ.ಎಂ.ಎಲ್.ನಲ್ಲಿ ಉದ್ಯೋಗದಲ್ಲಿದ್ದಾನೆ. ಮಕ್ಕಳನ್ನು ಬೆಳೆಸುವುದರಲ್ಲೂ ಶ್ರೀನಿವಾಸರಾವ್ ಅವರಲ್ಲಿ ವಿಶೇಷತೆ ಇದೆ. ಮಕ್ಕಳ ಮೇಲೆ ಎಂದಿಗೂ ಒತ್ತಾಯ ಹೇರುವವರಲ್ಲ. ಮಕ್ಕಳು ಎಂಜಿನಿಯರಿಂಗ್–ವೈದ್ಯಕೀಯ ಶಿಕ್ಷಣ ಪಡೆಯಲೇಬೇಕೆಂದು ಹಠ ತೊಟ್ಟವರಲ್ಲ. ಅವರವರ ಅಭಿರುಚಿಗೆ ತಕ್ಕಂತೆ ಬೆಳೆಯಲು ಮಾರ್ಗದರ್ಶನ ನೀಡಿದ್ದಾರೆ.

## 10

ಶ್ರೀನಿವಾಸರಾವ್ ಅವರದು ಕ್ರಮಬದ್ಧ ಬದುಕು. ಬೆಳಿಗ್ಗೆ ಐದು ಘಂಟೆಗೆ ಎದ್ದು ವಾಯು ಸಂಚಾರ ಮುಗಿಸಿ ಯೋಗಾಸನಗಳನ್ನು ಮಾಡುತ್ತಾರೆ. ಲಘು ಉಪಹಾರದ ನಂತರ ಸ್ಕೂಟರ್ ಹತ್ತಿ ಸಂಘ ಸಂಸ್ಥೆಗಳ ಕೆಲಸಕ್ಕೆ ಹೊರಟರೆ ಮಧ್ಯಾಹ್ನಕ್ಕೆ ಅವರು ಕಾಣಸಿಗುವರು. ಊಟದ ನಂತರ ಪತ್ರ ವ್ಯವಹಾರ. ದೂರದರ್ಶನದಲ್ಲಿ ರಾತ್ರಿ ಹತ್ತೂವರೆ ಘಂಟೆಗೆ ಪ್ರಸಾರವಾಗುವ ಚಲನಚಿತ್ರ ನೋಡಿಯೇ ಮಲಗುವುದು. ಆದರೆ ಪಾಲಿಸುವುದರಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಅವರ ಬದುಕಿನಲ್ಲಿ ಶಿಸ್ತಿದೆ. ಆದರೆ ಅದು ಮಿಲಿಟರಿ ಶಿಸ್ತಲ್ಲ. ಅವರು ಯಾವುದೇ

ಕೆಲಸವನ್ನು ತೆಗೆದುಕೊಂಡರೂ ಅಚ್ಚುಕಟ್ಟಾಗಿ ಕಾಲಮಿತಿಯೊಳಗೆ ಮುಗಿಸುತ್ತಾರೆ. ಅವರ ಅದು ಯಾಂತ್ರಿಕವಾಗಿ ಮುಗಿಸಿದ ಕಾರ್ಯವಾಗದೇ ತಮ್ಮನ್ನೇ ತೊಡಗಿಸಿಕೊಂಡ ಕಾರ್ಯವಾಗಿರುತ್ತದೆ. ಇದಕ್ಕೆಲ್ಲಾ ಮೂಲದ್ರವ್ಯ ಅವರಲ್ಲಿರುವ ಜೀವನೋತ್ಸಾಹ. ಬದುಕಿನ ಸೂಕ್ಷ್ಮಗಳನ್ನು ಅರಿತುಕೊಂಡು, ಸುತ್ತಮುತ್ತಲಿನ ಜನರನ್ನು ಪ್ರೀತಿಸುತ್ತಾ ಅವರ ಅಭಿರುಚಿಯನ್ನು ಸಂಸ್ಕಾರಗೊಳಿಸುತ್ತಾ. ಜೀವನಕ್ಕೊಂದು ಹೊಸ ಅರ್ಥವನ್ನು ಹುಡುಕುತ್ತಿರುವ ಶ್ರೀನಿವಾಸರಾವ್ ಅವರು ಎಲ್ಲರಿಗೂ ಬೇಕಾದ ಅಪರೂಪದ ವ್ಯಕ್ತಿಗಳಾಗಿದ್ದಾರೆ.



# ಅನುಬಂಧ

## ಕವಲು-ತಿರುವು

(ಸ್ವಕೀಯ)

ಮನುಷ್ಯನ ಬಾಳೊಂದು ಕಗ್ಗಂಟು. ಭವಿಷ್ಯದ ಕಲ್ಪನೆಯಿಲ್ಲದೆ, ನಡೆಯ ಬೇಕಾದ ದಾರಿಯ ಅರಿವಿಲ್ಲದೆ, ಭವಿತವ್ಯದ ಕತ್ತಲ ಗುಹೆಯೊಳಗೆ ಮನುಷ್ಯ ಜನಿಸುತ್ತಾನೆ. ಮುಂದೆ ಹುಟ್ಟಿದ ಪರಿಸರ, ಆತನ ಬಾಳಿಗೆ ದಾರಿದೀಪವಾಗುತ್ತದೆ. ಬೆಳೆದ ವಾತಾವರಣ, ಸುತ್ತಲಿನ ಸಂಸರ್ಗ ಆತನ ಭವಿಷ್ಯ ನಿರ್ಧರಿಸುವಲ್ಲಿ ನೆರವಾಗು ತ್ತದೆ.

ಬಾಳಿನಲ್ಲಿ ತಿರುವು ಕಾಣದ, ಕವಲಿಲ್ಲದ ದಾರಿಯಲ್ಲಿ ಪಯಣಿಸದ ಪಥಿಕನಿಲ್ಲ ವೆಂದರೆ ಅತಿಶಯೋಕ್ತಿಯಾಗಲಾರದು. ಕವಲು-ತಿರುವು ಬಾಳಪಥದಲ್ಲಿ ಅನಿವಾರ್ಯ. ನಾವು ನಡೆದುಬಂದಿರುವ ಸುದೀರ್ಘದ ದಾರಿಯಲ್ಲಿ ಒಂದೆಡೆ ನಿಂತು ಹಿಂದೆ ದೃಷ್ಟಿ ಹರಿಸಿದರೆ ಕಂಡುಬರುವ ತಿರುವುಗಳೆಷ್ಟು ? ಕವಲುಗಳೆಷ್ಟು ? ಇವುಗಳಲ್ಲಿ ಕೆಲವು ಸುಂದರ ಅನುಭವಗಳನ್ನು ಕೆದಕಿದರೆ, ಮತ್ತೆ ಕೆಲವು ಭಯಾನಕ ಘಟನೆಗಳಿಗೆ ಕನ್ನಡಿ ಹಿಡಿಯಬಹುದು.

ನನ್ನ ಜೀವನ ಎರಡು ಸಮಾನಾಂತರ ಪಥಗಳಲ್ಲಿ ಹರಿದಿದೆ. ಹೆಚ್ಚು ಏರು-ಪೇರುಗಳಿಲ್ಲದ ಸರ್ಕಾರಿ ಉದ್ಯಮದ ಪಥ ಒಂದು. ಇದರಲ್ಲಿ ಸುಮಾರು ೩೪ ವರ್ಷ ರಕ್ಷಣಾ ವಿಭಾಗದ ಕಂಟ್ರೋಲರೇಟ್ ಆಫ್ ಕ್ವಾಲಿಟಿ ಅಶ್ಯೂರೆನ್ಸ್ ಎಲೆಕ್ಟ್ರಾನಿಕ್ ಇಲಾಖೆಯಲ್ಲಿ ದುಡಿದು ಸೈಂಟಿಫಿಕ್ ಆಫೀಸರ್ ಹುದ್ದೆಯಿಂದ ನಿವೃತ್ತನಾಗಿದ್ದೇನೆ. ನನ್ನ ಸಾಹಿತ್ಯಾಭಿರುಚಿಗೆ ಅನುವಂಶಿಕ ಹಿನ್ನೆಲೆಯಿಲ್ಲದಿದ್ದರೂ ಹಿಂದಿನ ಜನ್ಮದ ಸಂಸ್ಕಾರದ ಪುಣ್ಯ ವಿಶೇಷವೋ ಅಥವಾ ಹುಟ್ಟಿ ಬೆಳೆದ ಪರಿಸರದ ಪ್ರಭಾವವೊ ಏನೊ ? ಅಂತೂ ನಾನು ಎಳೆಯ ವಯಸ್ಸಿನಿಂದಲೂ ಕಲ್ಪನಾ ಜೀವಿಯಾಗಿದ್ದೆ. ಇದೇ ನಾನು ತುಳಿದ ಎರಡನೆ ಪಥ.

ಹುಟ್ಟಿ ಬೆಳೆದ ಹಳ್ಳಿಯ ಶುಭ್ರ ನಿಸರ್ಗ, ನಿರಕ್ಷರ ಕುಕ್ಷಿ ಗ್ರಾಮೀಣ ಜನರ ನಿಷ್ಕಲ್ಮಷ ಜೀವನ, ಮನೆಯಲ್ಲಿನ ಪ್ರೇಮಮಯ ವಾತಾವರಣ, ಭಾವನೆಗಳನ್ನು ಮೂರ್ತಗೊಳಿಸುವ ಉತ್ಸಾಹದಿಂದಿದ್ದುವು. ಶುಭ್ರ ನಿಸರ್ಗದ ಮೌನದಲ್ಲಿ ಮಂಜುಳ

ಕಲರವ ಕೇಳುವ ಕಾತುರ, ಪಕ್ಷಿಗಳ ಕುಹುಕುಹುವಿನಲ್ಲಿ ಲಯಬದ್ಧ ಪ್ರಾಸ ಅರಸುವ ಆತುರ ನನ್ನದಾಗಿರುತ್ತಿತ್ತು. ಮಳೆಗಾಲದ ಕಪ್ಪೆಗಳ ವಟಗುಟ್ಟುವ ಶಬ್ದ, ಕ್ರಿಮಿ ಕೀಟಗಳ ಕೀಚ್ ಕಿಚ್ ದನಿ, ಮನದಲ್ಲಿ ಕಥೆಯೊಂದಕ್ಕೆ ಹಂದರ ನೇಯುತ್ತಿದ್ದುವು.

ಹೀಗೆ ಉದ್ಯೋಗದ ಹೆದ್ದಾರಿಗೆ ನಾನು ಬರುವ ಮೊದಲೇ ನನ್ನ ಮನಸ್ಸು ವಿಚಾರಧಾರೆ ಕವಲುದಾರಿ ಹಿಡಿದು ಸಾಹಿತ್ಯಪಥದತ್ತ ಕ್ರಮಿಸತೊಡಗಿತ್ತು. ಈ ಕವಲು ದಾರಿಯೇ ಬಹುಬೇಗ ಹೆದ್ದಾರಿಯಾಯಿತು. ನಾಲ್ಕು ದಶಕಕ್ಕೂ ಹೆಚ್ಚು ಕಾಲದಿಂದ ಈ ಹೆದ್ದಾರಿಯಲ್ಲಿ ಹೆಜ್ಜೆ ಹಾಕುತ್ತಾ ಹಲವಾರು ತಿರುವುಗಳಲ್ಲಿ ಇಣಕಿ ನೋಡಿದ್ದೇನೆ, ನಡೆದಿದ್ದೇನೆ.

ಹಳ್ಳಿಯ ಪರಿಸರದಲ್ಲಿ ಹುಟ್ಟಿ ಬೆಳೆದರೂ ನನಗೆ ಮೊದಲಿನಿಂದಲೂ ಓದಿನಲ್ಲಿ ಅತೀವ ಆಸಕ್ತಿ. ನಮ್ಮ ಹಳ್ಳಿಯ ಲೈಬ್ರರಿಯಲ್ಲಿದ್ದ (ಪುಸ್ತಕಗಳ ಪೆಠಾರಿ ನಮ್ಮನೆಯಲ್ಲೇ ಇತ್ತು) ಶಿವರಾಮಕಾರಂತರ "ಬಾಲ-ಪ್ರಪಂಚ" ನನ್ನ ಮೇಲೆ ಅತೀವ ಪ್ರಭಾವ ಬೀರಿದ ಪ್ರಥಮ ಗ್ರಂಥ ಅನ್ನಬಹುದು. ಬಿ. ವೆಂಕಟಾಚಾರ್ಯ ಮತ್ತು ಗಳಗನಾಥರ ಕಾದಂಬರಿಗಳು ನನ್ನ ಸುಪ್ತ ಚೇತನವನ್ನು ಬಡಿದೆಬ್ಬಿಸಿ ಕಲ್ಪನೆಯನ್ನು ಕುದುರಿಸತೊಡಗಿದ್ದವು.ಪಣಾಸ್ತಿಯವರ ಕಥೆಗಳು ನನ್ನ ಮನಸ್ಸಿನಲ್ಲಿ ಬೀಜರೂಪದಲ್ಲಿ ನೆಲೆಸಿ ಮೊಳಕೆ ಒಡೆಯಲು ಸೂಕ್ತ ಅವಕಾಶ ಕಾಯತೊಡಗಿದ್ದವು.

ತುಮಕೂರಿನಲ್ಲಿ ನಾನು ಓದುತ್ತಿದ್ದಾಗ ಶ್ರೀ ಜಿ. ಎಸ್. ಸಿದ್ಧಲಿಂಗಯ್ಯ (ಈಗಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು) ನನ್ನ ಸಹಪಾಠಿಯಾಗಿದ್ದರು. ಒಂದೇ ಬೀದಿಯಲ್ಲಿ ಇದ್ದು, ಓಲ್ಡ್ ಬಾಯ್ಸ್ ಮಿಡ್ಲ್ ಸ್ಕೂಲಿನಲ್ಲಿ ಇಬ್ಬರೂ ಓದುತ್ತಿದ್ದುದರಿಂದ ಹಾಗೂ ಇಬ್ಬರಿಗೂ ಸಾಹಿತ್ಯದಲ್ಲಿ ಆಸಕ್ತಿ ಇದ್ದುದರಿಂದ ಗೆಳೆತನ ದಿನೇದಿನೇ ವೃದ್ಧಿಸಹತ್ತಿತ್ತು.

ನನ್ನ ಸಾಹಿತ್ಯಾಸಕ್ತಿಗೆ ನೀರೆರೆದು, ಕಸಿಗೊಬ್ಬರ ನೀಡಿ ಪೋಷಿಸಿದವರು ಶ್ರೀ ಕೆ. ಎಸ್. ಜೋಯಿಸ್. ಅವರು ವೃತ್ತಿಯಲ್ಲಿ ಲಾಯರ ಗುಮಾಸ್ತರಾಗಿದ್ದರೂ ನಮ್ಮನೆಯಲ್ಲಿ ನನಗೆ ಮತ್ತು ನನ್ನ ಅಣ್ಣನಿಗೆ ಅವರೇ ಗುರುಗಳಾಗಿದ್ದರು. ಶಾಲೆಯ ಪಾಠದ ಜೊತೆಗೆ ಅವರು ನನಗೆ ಕನ್ನಡ ಮತ್ತು ಸಂಸ್ಕೃತ ಕಾವ್ಯಗಳಲ್ಲಿ ರಸವತ್ತಾದ ಭಾಗಗಳನ್ನು ಓದಿ ಹೇಳಿ ಸಾರಾಂಶವನ್ನು ಮನದಟ್ಟಾಗುವಂತೆ ತಿಳಿಸುತ್ತಿದ್ದರು. ಇದರಿಂದಾಗಿ ನನ್ನಲ್ಲಿ ಸಾಹಿತ್ಯಾಭಿರುಚಿ ಬೆಳೆಯತೊಡಗಿತ್ತು.

ನನ್ನ ಸಾಹಿತ್ಯಾಸಕ್ತಿ ಬೆಳೆದು ಸೃಜನಾತ್ಮಕವಾಗತೊಡಗಿದಾಗ ಮೊದಲು ಅದು ಹೊರ ಹೊಮ್ಮಿದ್ದು ಕವಿತೆಗಳ ರೂಪದಲ್ಲಿ. ಇದಕ್ಕೆ ಗೆಳೆಯ ಸಿದ್ದಲಿಂಗಯ್ಯ

ನವರ ಪ್ರಭಾವವೂ ಇದ್ದಿರಬಹುದು. ಹೀಗೆ ಸಾಹಿತ್ಯಪಥದಲ್ಲಿ ನಾನು ಕ್ರಮಿಸಿದ ಕಿರುದಾರಿ 'ಕವನಸೃಷ್ಟಿ' (ಹೈಸ್ಕೂಲಿನಲ್ಲಿದ್ದಾಗ ನನ್ನದೊಂದು ಕವನ 'ಚಿತ್ರಗುಪ್ತ' ದಲ್ಲಿ ಪ್ರಕಟಗೊಂಡಿತ್ತು.)

ಆರ್ಯನ್ ಹೈಸ್ಕೂಲಿನ ವಾರ್ಷಿಕೋತ್ಸವದ ಸಂದರ್ಭದಲ್ಲಿ ಜರುಗಿದ ಒಂದು ಪುಟ್ಟ ಘಟನೆ ನನ್ನ ಸಾಹಿತ್ಯ ದೃಷ್ಟಿ ಹಾಗೂ ಸಾಹಿತ್ಯ ಪಥವನ್ನೇ ಬದಲಿಸಿಬಿಟ್ಟಿತು. ಸಾಹಿತ್ಯ ಜೀವನದಲ್ಲಿ ಇದೊಂದು ಪ್ರಮುಖ ತಿರುವಾಯಿತು.

ವಾರ್ಷಿಕೋತ್ಸವದ ಸಂದರ್ಭದಲ್ಲಿ ಸ್ಥಳದಲ್ಲೇ ಕಥೆ, ಕವನ ರಚಿಸುವ ಸ್ಪರ್ಧೆ ಯನ್ನು ಏರ್ಪಡಿಸಿದ್ದರು. ಕಥಾ ವಿಭಾಗದಲ್ಲಿ ನಾನು ರಚಿಸಿದ ಕಥೆ ಪ್ರಥಮ ಬಹುಮಾನ ಗಳಿಸಿತು. ಇದೇ ನಾನು ಕಥೆಗಾರನಾಗಲು ಅಂಕುರಾರ್ಪಣವಾಯಿತು. ಕವಿತೆಯಮೇಲಿದ್ದ ಆಸಕ್ತಿ ಏಕೋ ಬಹುಬೇಗ ಕಮರಿಹೋಯಿತು. ಅಂದು ಆಯ್ದ ಕಥೆಯ ಕವಲುದಾರಿಯೇ ನನ್ನ ಸಾಹಿತ್ಯ ಜೀವನದ ಹೆದ್ದಾರಿಯಾಯಿತು. ಆ ದಿನಗಳಲ್ಲಿ ಕನ್ನಡ ನಾಡಿನಲ್ಲಿ ನಡೆದ ಬಹಳಷ್ಟು ಕಥಾ ಸ್ಪರ್ಧೆಗಳಲ್ಲಿ ನನಗೆ ಬಹುಮಾನಗಳು ಬರತೊಡಗಿದವು.ಇವುಗಳಲ್ಲಿ ನನಗೆ ನೆನಪಿರುವುದೆಂದರೆ ಶಿವಮೊಗ್ಗ ಕಾಲೇಜಿನ ವಿದ್ಯಾರ್ಥಿಗಳು ನಡೆಸಿದ್ದ ಅಂತರಕಾಲೇಜು ಕಥಾಸ್ಪರ್ಧೆಯಲ್ಲಿ ಎರಡನೆ ಬಹುಮಾನ (ರಜತಕರಂಡ) ಲಭಿಸಿದ್ದುದು. ಅದೇ ವರ್ಷ (೧೯೫೩) ಬೆಂಗಳೂರಿನ ಕಲಾ ಸಾಹಿತ್ಯ ಸಂಘ ಏರ್ಪಡಿಸಿದ್ದ ಕಥಾಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಲಭಿಸಿತು. 'ಕರ್ಮವೀರ' ನಡೆಸಿದ್ದ ದೀಪಾವಳಿ ಕಥಾಸ್ಪರ್ಧೆಯಲ್ಲಿ ನನ್ನದೊಂದು ಕಥೆ ಮೆಚ್ಚುಗೆ ಗಳಿಸಿತು. ಇಷ್ಟು ಹೊತ್ತಿಗೆ ನನ್ನ ಕಥೆಗಳು 'ವಿಶ್ವ ಕರ್ನಾಟಕ', ಉಷಾ, ಕತೆಗಾರ, ಕಥಾಂಜಲಿ ಮುಂತಾದವುಗಳಲ್ಲಿ ಪ್ರಕಟಗೊಳ್ಳತೊಡಗಿದ್ದುವು (೧೯೪೮-೧೯೫೩).

ಕಾಲೇಜಿಗೆ ಸೇರಿದ ಹೊಸದರಲ್ಲಿ ನನ್ನ ಆಸಕ್ತಿ ಇದ್ದಕ್ಕಿದ್ದಂತೆಯೇ ಹಿಂದಿ ಭಾಷೆಯತ್ತ ವಾಲಿತು. ಎರಡೇ ವರ್ಷಗಳಲ್ಲಿ ರಾಷ್ಟ್ರಭಾಷಾ ವಿಶಾರದ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಮದರಾಸಿಗೆ ಹೋಗಿ ಶಾಲು ಹೊದಿಸಿಕೊಂಡು ಬಂದೆ. ಸಾಹಿತ್ಯಾ ಸಕ್ತಿಯ ಈ ತಿರುವು ಸಾಹಿತ್ಯಕೃಷಿಗೆ ಬಹು ಇಂಬು ನೀಡಿತು. ಹಿಂದಿಯ ಸಾಹಿತ್ಯ ಅಧ್ಯಯನದಿಂದಾದಿ ನನ್ನ ಅನುಭವ ಜ್ಞಾನಭಂಡಾರ ಹಿಗ್ಗಿತು. ಮುಂದೆ ಅನುವಾದ ಕ್ಷೇತ್ರ ಪ್ರವೇಶಿಸಲು ಬಹಳ ನೆರವಾಯಿತು.

ತುಮಕೂರಿನಲ್ಲಿ ಬಿ.ಎಸ್.ಸಿ. ಮುಗಿಸಿಕೊಂಡು ಎ.ಎಂ.ಐ.ಇ. ಓದಲು ೧೯೫೩-೫೪ರಲ್ಲಿ ಬೆಂಗಳೂರಿಗೆ ಬಂದೆ. ಆಗ ಇಲ್ಲಿದ್ದ ನನ್ನ ಮಿತ್ರ ಹೆಚ್. ವಿ.

ಸೀತಾರಾಮಯ್ಯ (ಪತ್ರಕರ್ತರು) ಬಳೇಪೇಟೆಯ ಪ್ರೆಸ್ ಒಂದರಲ್ಲಿ ಮೇನೇಜರ್ ಆಗಿದ್ದ ಹೆಚ್. ಎ. ನಾರಾಯಣ್ (ಮುಂದೆ ಏರ್ವೈ ಟ್ರಾವಲ್ ಲೈನ್ಸ್‌ನ ಮಾಲೀಕರು ಹಾಗು 'ಯಾತ್ರಿಕ' ಪತ್ರಿಕೆಯ ಸಂಸ್ಥಾಪಕರಾಗಿದ್ದರು)ರವರ ಪರಿಚಯ ಮಾಡಿಸಿದರು. ಈ ಪರಿಚಯ ನನ್ನ ಸಾಹಿತ್ಯ ಜೀವನಕ್ಕೆ ಮುಖ್ಯ ತಿರುವು ನೀಡಿತು ಎಂದು ಹೇಳಬಹುದು. ಜೀವನದುದ್ದಕ್ಕೂ ಈ ಮಿತ್ರರು ನನ್ನನ್ನು ಬಹು ಆತ್ಮೀಯವಾಗಿ ನಡೆಸಿಕೊಂಡರು. ನನ್ನ ಸಾಹಿತ್ಯ ಜೀವನದಲ್ಲಿ ನಾನು ಏನನ್ನಾದರೂ ಸಾಧಿಸಿದ್ದರೆ ಆ ಗೌರವದ ಸಿಂಹಪಾಲು ಅವರಿಗೇ ಸೇರತಕ್ಕದ್ದು.

ಇದೇ ದಿನಗಳಲ್ಲಿ ನಾನು ರಚಿಸಿದ್ದ ನನ್ನ ಪ್ರಥಮ ಸಾಮಾಜಿಕ ಕಾದಂಬರಿ 'ಕನ್ಯಾದಾನ'ವನ್ನು ಗಣ್ಯಸಾಹಿತಿ ಶ್ರೀ ನಿರಂಜನರು ಬಹಳ ಆಸ್ಥೆಯಿಂದ ಓದಿ ಸೂಕ್ತ ಸಲಹೆಗಳನ್ನಿತ್ತಿದುದಲ್ಲದೆ 'ಒಳ್ಳೆಯ ಕಾದಂಬರಿಕಾರರಾಗುತ್ತೀರಿ' ಎಂದು ಹರಸಿದ್ದರು. ಈ ಕಾದಂಬರಿ ನಾರಾಯಣ್‌ರವರ ಸ್ನೇಹಸೌಹಾರ್ದದಿಂದಲೇ ತಿಪಟೂರಿನ ಸುದರ್ಶನ ಪ್ರಕಾಶನದಿಂದ (೧೯೬೦) ಹೊರ ಬರುವಂತಾಯಿತು. ಇವರ ಸಹಕಾರದಿಂದಲೇ ನನ್ನ ಪ್ರಥಮ ಕಥಾಸಂಕಲನ 'ಗಾಳಿ ಮೋಡದ ಗೆಳತಿ' ಶ್ರೀ ಎಂ. ರಾಮನ್‌ರವರ ಬಾಲಾಜಿ ಪ್ರಕಾಶನದಿಂದ (೧೯೬೨) ಪ್ರಕಟಗೊಂಡಿತು.

೧೯೬೫ರಲ್ಲಿ 'ಕತೆಗಾರ' ಪತ್ರಿಕೆಯನ್ನು ನೋಡಿಕೊಳ್ಳುತ್ತಿದ್ದ ಶ್ರೀ ನಾರಾಯಣ್‌ರವರೇ ನನ್ನ 'ಹಂಬಲ' (ಮಣ್ಣಿನ ಮಗ' ಹೆಸರಿನಿಂದ ಪುಸ್ತಕ ರೂಪದಲ್ಲಿ ಪ್ರಕಟಗೊಂಡಿದೆ) ಕಾದಂಬರಿಯನ್ನು ಧಾರಾವಾಹಿಯಾಗಿ ಪ್ರಕಟಿಸಿದರು. ಧಾರಾವಾಹಿ ಕಾದಂಬರಿಗಳಿಗೇ ಇದೇ ನಾಂದಿಯಾಯಿತು. ಇದಾದನಂತರ ಒಂದಾದನಂತರ ಒಂದರಂತೆ ನನ್ನ ಕಾದಂಬರಿಗಳು ಧಾರಾವಾಹಿಯಾಗಿ ಪ್ರಕಟಗೊಳ್ಳಲು ಪ್ರಾರಂಭಗೊಂಡವು. ಇದುವರೆವಿಗೆ 15 ಕಾದಂಬರಿಗಳು ಸುಧಾ, ಕನ್ನಡಪ್ರಭ, ಪ್ರಜಾಮತ, ಮಂಗಳ, ಬಾಲಮಂಗಳಗಳಲ್ಲಿ ಪ್ರಕಟಗೊಂಡಿವೆ. (ಸುಧಾ-5, ಕನ್ನಡಪ್ರಭ-3, ಪ್ರಜಾಮತ-3, ಮಂಗಳ-1, ಬಾಲಮಂಗಳ-1).

ನಾನೊಮ್ಮೆ ಆಫೀಸಿನ ಕೆಲಸದ ಮೇಲೆ ದೆಹಲಿಗೆ ಹೋಗಿದ್ದಾಗ ನ್ಯಾಷನಲ್ ಬುಕ್‌ಟ್ರಸ್ಟ್‌ನ ಶ್ರೀ ಎಂ. ಸುಬ್ಬರಾಯರ ಪರಿಚಯವಾಯಿತು. ನನ್ನ ಸಾಹಿತ್ಯ ಕೃಷಿಯನ್ನು ಮೆಚ್ಚಿದ್ದ ಶ್ರೀಯುತರು ನನಗೆ ನ್ಯಾಷನಲ್ ಬುಕ್ ಟ್ರಸ್ಟ್‌ನ ಕೆಲವು ಪುಸ್ತಕಗಳ ಅನುವಾದದ ಹೊರೆ ಹೊರಿಸಿದರು. ನಾನು ಹಿಂದಿಯಲ್ಲಿ ಡಿಗ್ರಿ ಪಡೆದಿದ್ದುದು ಸಾರ್ಥಕವಾಯಿತು. ನಾನು ಹಿಂದಿಯಿಂದ ಅನುವಾದಿಸಿದ್ದ 'ಒರಿಯಾ ಕಥೆಗಳು' ಕಥಾಸಂಕಲನಕ್ಕೆ ಉತ್ತಮ ಅನುವಾದಕ್ಕಾಗಿ ೧೯೮೮ರಲ್ಲಿ ಕರ್ನಾಟಕ ಸರ್ಕಾರದ ಬಹುಮಾನ ಲಭಿಸಿತು. ಇದಾದ ನಂತರ ಇದೇ ಸಂಸ್ಥೆಗೆ ಇಂಗ್ಲೀಷ್ ಮತ್ತು ಹಿಂದಿ

ಯಿಂದ ಐದು ಪುಸ್ತಕಗಳನ್ನು ಅನುವಾದಿಸಿ ಕೊಟ್ಟಿದ್ದೇನೆ. ಹೀಗೆ ನಾನು ಅನುವಾದ ಕ್ಷೇತ್ರಕ್ಕೆ ಕಾಲಿಂಸಿದೆ.

೧೯೭೭ರಲ್ಲಿ ಘಟಿಸಿದ ಈ ಘಟನೆ ತೀರಾ ಅನಿರೀಕ್ಷಿತವಾದಿತ್ತು. ಕೇಂದ್ರ ಸರ್ಕಾರದ ಫೀಲ್ಡ್ ಪಬ್ಲಿಸಿಟಿ ಇಲಾಖೆಯವರು ನನ್ನನ್ನು ಅಖಿಲ ಭಾರತ ಸಾಹಿತಿಗಳ ಕಮ್ಮಟಕ್ಕೆ ಮದರಾಸಿಗೆ ಆಹ್ವಾನಿಸಿ ಹಿಂದಿ, ಉರ್ದು, ತಮಿಳು, ತೆಲುಗು, ಬಂಗಾಳಿ, ಮಲೆಯಾಳಂ ಭಾಷೆಗಳ ಶ್ರೇಷ್ಠ ಸಾಹಿತಿಗಳನ್ನು ನನಗೆ ಪರಿಚಯ ಮಾಡಿಸಿದ್ದಲ್ಲದೆ ಅವರೆಲ್ಲರ ಸಂಗಡ ೨೧ ದಿನಗಳ ದಕ್ಷಿಣ ಭಾರತದ ಪ್ರವಾಸ ಸಹ ಏರ್ಪಡಿಸಿದ್ದರು. ಈ ಸಾಹಿತಿಗಳ ಸಂಗಮ, ಒಡನಾಟ ಒಂದು ಅನುಪಮ ಅನುಭವ. ನನ್ನ ಜೀವನದಲ್ಲಿ ಎಂದೆಂದೂ ಹಸಿರಾಗಿರುವ ನೆನಪು.

೧೯೮೭ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಅನುದಾನ ಯೋಜನೆಯಡಿ ನನ್ನನ್ನು ಆಂಧ್ರಪ್ರದೇಶದ ಸಾಹಿತ್ಯ ಮತ್ತು ಸಂಸ್ಕೃತಿಯ ಅಧ್ಯಯನಕ್ಕೆ ಆಯ್ದು ಕಳುಹಿಸಿದ್ದುದೂ ನನ್ನ ಜೀವನದ ಮಹತ್ತರ ತಿರುವು ಎಂದೇ ಭಾವಿಸುತ್ತೇನೆ. ಇದರಿಂದಾಗಿ ನನಗೆ ಆಂಧ್ರದ ಪ್ರಸಿದ್ಧ ಲೇಖಕರುಗಳ ಮತ್ತು ಪತ್ರಿಕೆಗಳ ಪರಿಚಯ ವಾದುದಲ್ಲದೆ ಅಲ್ಲಿನ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಜೀವನದ ಪರಿಚಯವೂ ಆಯಿತು. ಅನುಭವ ಮತ್ತಷ್ಟು ವಿಸ್ತಾರಗೊಂಡಿತು.

ಕೆಲವರ್ಷಗಳ ಹಿಂದೆ ನ್ಯಾಷನಲ್ ಬುಕ್‌ಟ್ರಸ್ಟ್ ಲಾಲ್‌ಬಾಗ್‌ನಲ್ಲಿ ಮಕ್ಕಳ ಪುಸ್ತಕಗಳ ಒಂದು ಪ್ರದರ್ಶನ ಏರ್ಪಡಿಸಿತ್ತು. ಅದನ್ನು ನೋಡಿ ಆಕರ್ಷಿತನಾದೆ. ಆ ಸಾಹಿತ್ಯದತ್ತ ಮನಸ್ಸು ವಾಲಿತು. ರಾಷ್ಟ್ರೋತ್ಥಾನ ಪರಿಷತ್ತು ಮತ್ತು ಐ.ಬಿ.ಹೆಚ್‌ಗಾಗಿ ಕೆಲ ಪುಸ್ತಕ ರಚಿಸಿ ಕೊಟ್ಟೆ. ನ್ಯಾಷನಲ್ ಬುಕ್ ಟ್ರಸ್ಟ್‌ಗೂ ಕೆಲ ಅನುವಾದಗಳನ್ನು ಮಾಡಿ ಕೊಟ್ಟೆ. ಅನಂತರ ನಾನೇ ಸ್ವಂತವಾಗಿ ಈ ವಿಭಾಗದಲ್ಲಿ ಎಂಟು ಪುಸ್ತಕಗಳನ್ನು ರಚಿಸಿದ್ದೇನೆ. ಆಕಾಶವಾಣಿ, ದೂರದರ್ಶನಕ್ಕೂ ಹಲವು ರೂಪಕ/ನಾಟಕಗಳನ್ನು ರಚಿಸಿ ಕೊಟ್ಟಿದ್ದೇನೆ. ಮಕ್ಕಳ ಸಾಹಿತ್ಯದಲ್ಲಿ ಮೂಡಿ ಬಂದ ಒಲುವಿನಿಂದಾಗಿಯೇ ಆತ್ಮೀಯಬಂಧು ಶ್ರೀಮತಿ ನಿರುಪಮಾರವರ ಜೊತೆಗೂಡಿ 'ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತು' ಸ್ಥಾಪಿಸಲು ಕಾರಣನಾದೆ. ಇದರ ಪ್ರಧಾನ ಕಾರ್ಯದರ್ಶಿಗಳಾಗಿ ಶ್ರೀ ಬಾಬು ಕೃಷ್ಣಮೂರ್ತಿಗಳೂ, ಕಾರ್ಯದರ್ಶಿಯಾಗಿ ನಾನೂ ಕಾರ್ಯಭಾರ ನಿರ್ವಹಿಸುತ್ತಿದ್ದೇವೆ. ಶ್ರೀಮತಿ ನಿರುಪಮಾರವರು ಈ ಸಂಘದ ಅಧ್ಯಕ್ಷರು. ಅನೇಕ ವಿಚಾರ ಸಂಕಿರಣ, ಗೋಷ್ಠಿ, ಕಮ್ಮಟಗಳನ್ನು ನಡೆಸಿರುವುದಲ್ಲದೆ ಅಪ್ಪಭಾಷಾ ಮಕ್ಕಳ ಸಾಹಿತಿಗಳ ಸಮ್ಮೇಳನ ಸಹ ಯಶಸ್ವಿಯಾಗಿ ನಡೆಸಿದ್ದೇವೆ.

ಇನ್ನೊಂದು ಇಷ್ಟೇ ಮುಖ್ಯವಾದ ತಿರುವು ನಾನು ಕರ್ನಾಟಕ ಪ್ರಕಾಶಕರ ಸಂಘ ಸೇರಿದ್ದು. ಇದಕ್ಕೆ ಕಾರಣಕರ್ತರುಗಳು ಮಾನ್ಯಮಿತ್ರರಾದ ಪ್ರೊ. ಹೆಚ್. ಆರ್.ದಾಸೇಗೌಡ ಹಾಗೂ ಬಂಧುಶ್ರೀ ಕೆ.ಆರ್.ಕಮಲೇಶ್('ಯುವ ಕರ್ನಾಟಕ'ದ ಸಂಪಾದಕರು). ಪ್ರಕಾಶನದ ನಶೆ ನನಗೂ ಹತ್ತಿತು. 'ಸೌರಭ ಪ್ರಕಾಶನ' ರೂಪುಗೊಂಡಿತು. ಈ ಆಸಕ್ತಿಯಿಂದಾಗಿಯೇ ಇಂದು ಈ ಸಂಘದ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದೇನೆ. ಪ್ರೊ. ಜಿ. ಎಸ್. ಸಿದ್ದಲಿಂಗಯ್ಯನವರು ಈ ಸಂಘದ ಅಧ್ಯಕ್ಷರು.

ನನ್ನ ಸಾಹಿತ್ಯಕೃಷಿ, ಕಥೆ, ಕಾದಂಬರಿ, ನಾಟಕಗಳಿಗೆ ಸೀಮಿತಗೊಂಡಿದ್ದುದು ಶ್ರೀಮತಿ ನಿರುಪಮಾ ಮತ್ತು ಪ್ರಜಾಮತದ ಮಾಜಿ ಸಂಪಾದಕ ಶ್ರೀ ಹೆಚ್. ವಿ. ನಾಗರಾಜರಾಯರ ಪ್ರೇರಣೆಯಿಂದಾಗಿ ಸಂಕಲನ, ಜೀವನಚರಿತ್ರೆ, ಸಂಶೋಧನೆ ಯತ್ತ ಹರಿಯತೊಡಗಿತು. ಈ ಕ್ಷೇತ್ರದಲ್ಲಿ ರೂಪುಗೊಂಡ ಮೌಲಿಕ ಕೃತಿಗಳೆಂದರೆ "ಮಕ್ಕಳೇ, ಇವರನ್ನು ನೀವು ಬಲ್ಲಿರಾ ?" ಮತ್ತು "ಕನ್ನಡ ಸಾಹಿತಿ ದರ್ಶನ" (ರಾಷ್ಟ್ರ ಕವಿ ಡಾ. ಕುವೆಂಪುರವರ ಅಮೃತಹಸ್ತದಿಂದ ಬಿಡುಗಡೆಗೊಂಡು ಸಾರಸ್ವತ ಜನರ ಮೆಚ್ಚುಗೆ ಪಡೆದಿದೆ).

ನನ್ನ ಕಾದಂಬರಿ ಕ್ಷೇತ್ರ, ಮೂರು ಕವಲುಗಳಲ್ಲಿ ಹರಿದಿರುವುದನ್ನು ಗಮನಿಸಬಹುದು. ಮೊದಲನೆಯದು 'ಸಾಮಾಜಿಕ', ಎರಡನೆಯದು 'ವೈಜ್ಞಾನಿಕ', ಮೂರನೆಯದು 'ಚಾರಿತ್ರಿಕ'. ಮೊದಲನೆಯದಕ್ಕೆ ನನ್ನ ಸುತ್ತಲಿನ ಪರಿಸರ, ಅನುಭವ ಪ್ರೇರಕವಾಗಿದ್ದರೆ ಎರಡನೆಯದಕ್ಕೆ 'ಓದು' ಪೋಷಕವಾಯಿತು. ಮೂರನೆಯದಕ್ಕೆ ಶ್ರೀ ಕೆ. ಆರ್. ಕಮಲೇಶ್ ಕಾರಣರಾದರು. 'ಗೆಜ್ಜೆ ಕಟ್ಟಿದ ಹೆಜ್ಜೆ' (ಮಂಗಳ ವಾರಪತ್ರಿಕೆ), ಮತ್ತು 'ಪವನಚಕ್ರ' (ಮಲ್ಲಿಗೆ ಮಾಸಪತ್ರಿಕೆ) ವೈಜ್ಞಾನಿಕ ಕ್ಷೇತ್ರಕ್ಕೆ ಸೇರಿದರೆ 'ಪ್ರೌಢ ಪ್ರತಾಪ ವೀರರಾಜೇಂದ್ರ' (ಕನ್ನಡ ಪ್ರಭ) ಚಾರಿತ್ರಿಕ ಕ್ಷೇತ್ರಕ್ಕೆ ಸೇರಿದ್ದು. (ಈ ಕಾದಂಬರಿ ಭಾರತೀಯ ವಿದ್ಯಾಪರಿಷತ್ತು, ಪಾಚ್ಚಾಪುರ ಜಿಲ್ಲೆ : ಬೆಳಗಾಂ, ಏರ್ಪಡಿಸಿದ್ದ ಸಾಹಿತ್ಯ ಸ್ಪರ್ಧೆಯಲ್ಲಿ ಕಾದಂಬರಿ ವಿಭಾಗದಲ್ಲಿ ಪ್ರಥಮ ಬಹುಮಾನ ಗಳಿಸಿದೆ).

ನನ್ನ ಜೀವನದ ಅನಿರೀಕ್ಷಿತ ಮತ್ತೊಂದು ತಿರುವು ಎಂದರೆ ನಾನು ಕನ್ನಡ ಸಾಹಿತ್ಯ ಪರಿಷತ್ತು ಪ್ರವೇಶಿಸಿದ್ದು. ೧೯೭೮ರಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಚುನಾವಣೆಯಲ್ಲಿ ನನ್ನ ಬಾಲ್ಯ ಮಿತ್ರ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರು ಅಪಾರ ಬಹುಮತದಿಂದ ಅಧ್ಯಕ್ಷರಾಗಿ ಆರಿಸಿ ಬಂದರು. ಅವರು ನನ್ನನ್ನು

ಪರಿಷತ್ತಿನ ಗೌರವ ಕೋಶಾಧ್ಯಕ್ಷರಾಗಿ ಆಯ್ದುಕೊಂಡರು. ಇದರಿಂದಾಗಿ ನನಗೆ ಸಾಹಿತ್ಯಕ್ಷೇತ್ರದ ಪ್ರಮುಖರೆಲ್ಲರ ಪರಿಚಯವಾಗುವ ಸುಯೋಗ ಲಭಿಸಿದೆ. ಕನ್ನಡ ನಾಡುನುಡಿಗೆ ಸಕ್ರಿಯ ಸೇವೆ ಸಲ್ಲಿಸುವ ಸೌಭಾಗ್ಯ ನನ್ನದಾದಿದೆ.

ಹೀಗೆ ಸೀಳು ಹೊಡೆದ ಬಾಳಿನ ಸಮಾನಾಂತರ ಪಥಗಳಲ್ಲಿ ಕ್ರಮಿಸುತ್ತಾ ಉದ್ಯಮದ ಹೆದ್ದಾರಿಯಲ್ಲಿ ನಡಿಗೆ ನಿಂತು ಹೋಗಿದ್ದರೂ ಸಾಹಿತ್ಯ ಪಥದಲ್ಲಿ ಸಾಧನೆಗಳ ಹೊನ್ನು ಕಿರಣಗಳತ್ತ ಮುಖ ಮಾಡಿ ಗುರಿ ಮುಟ್ಟುವ ಛಲದಿಂದ ಮುನ್ನಡೆಯುತ್ತಿದ್ದೇನೆ.

('ಮಂಗಳ' ದಿನಾಂಕ 11, ಸೆಪ್ಟೆಂಬರ್ 1991)



# ಜೀವನದ ಮುಖ್ಯ ಘಟನೆಗಳು

| | |
|---|---|
| 24-12-1931 | ಜನನ, ತುಮಕೂರಿನಲ್ಲಿ.<br>ತಂದೆ : ಗುಂಡಪ್ಪ ; ತಾಯಿ : ಪದ್ಮಾವತಮ್ಮ. |
| 1934 | ದತ್ತು ಸ್ವೀಕಾರ.<br>ದತ್ತು ತೆಗೆದುಕೊಂಡ ತಂದೆ : ಚಿಕ್ಕ ಸಾರಂಗಿ ಶಾನುಭಾಗ್ ವೆಂಕಟರಾಮಯ್ಯ.<br>ತಾಯಿ : ಪುಟ್ಟಬಚ್ಚಮ್ಮ |
| 1949 | ತುಮಕೂರಿನ ಆರ್ಯನ್ ಹೈಸ್ಕೂಲಿನಿಂದ ಎಸ್.ಎಸ್.ಎಲ್.ಸಿ. ಯಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆ. |
| 1952 | ಹಿಂದಿಯಲ್ಲಿ ರಾಷ್ಟ್ರ ಭಾಷಾ ವಿಶಾರದ ಪರೀಕ್ಷೆಯಲ್ಲಿ ತೇರ್ಗಡೆ. ಮದರಾಸಿನಲ್ಲಿ ಪ್ರಶಸ್ತಿ ಸ್ವೀಕಾರ. |
| 1954 | ತುಮಕೂರು ಫಸ್ಟ್ ಗ್ರೇಡ್ ಕಾಲೇಜಿನಿಂದ ಬಿ.ಎಸ್ಸಿ. ಡಿಗ್ರಿ. |
| 1955–56 | ಎ.ಪಿ.ಎಸ್ ಕಾಲೇಜಿನ ಸಂಜೆ ಕಾಲೇಜಿನಲ್ಲಿ ಎ.ಎಮ್.ಐ.ಇ. ವಿದ್ಯಾಭ್ಯಾಸ. |
| ಮೇ, 13, 1956 | ವಿವಾಹ. ಪತ್ನಿ ಶ್ರೀಮತಿ ಅನುಸೂಯ. |
| ಸೆಪ್ಟೆಂಬರ್, 1956 | ರಕ್ಷಣಾ ಇಲಾಖೆಯ ಟಿ.ಡಿ.ಇ ಎಲೆಕ್ಟ್ರಾನಿಕ್ಸ್ ಇಲಾಖೆ ಅಲ್ಲಿ ಉದ್ಯೋಗ ಬೆಂಗಳೂರು-6 |
| 1958 | ಮಿತ್ರವೃಂದದ ಅಧ್ಯಕ್ಷತೆ (ಮಲ್ಲೇಶ್ವರಂ) |
| ಜೂನ್ 18, 1958 | ಪುತ್ರಿ–ಕಲ್ಪನಾ ಜನನ. |
| ಜನವರಿ 20, 1963 | ಪುತ್ರ ಜನನ : ಅರುಣ ಕುಮಾರ್. |
| ಏಪ್ರಿಲ್, 1966 | ಮುಂಬಯಿ ವಿಶ್ವವಿದ್ಯಾನಿಲಯದಿಂದ ರಫ್ತು ಡಿಪ್ಲಮೊ |

| | |
|---|---|
| 1962–1969 | ಮುಂಬಯಿಯ ಘಟಕ (ಇನ್ಸ್‌ಪೆಕ್ಟರೇಟ್ ಆಫ್ ಎಲೆಕ್ಟ್ರಾನಿಕ್ಸ್) ದಲ್ಲಿ ಕಾರ್ಯ ನಿರ್ವಹಣೆ |
| ಏಪ್ರಿಲ್ 23, 1967 | ಕರ್ನಲ್ ಡಿ. ಸ್ವರೂಪ್ ಅವರಿಂದ ಪ್ರಶಂಸಾ ಪತ್ರ. |
| ಸೆಪ್ಟೆಂಬರ್ 7, 1969 | ಪುತ್ರಿ ಜನನ : ಕವಿತಾ. |
| ಮಾರ್ಚ್ 26, 1970 | ಉದ್ಯೋಗದಲ್ಲಿ ಹೊಸ ಪರೀಕ್ಷಾ ಯಂತ್ರವನ್ನು ನಿರ್ಮಿಸಿದ್ದಕ್ಕೆ ಇಲಾಖೆಯಿಂದ ನಗದು ಬಹುಮಾನ |
| ಜೂನ್ 1974 | ಸ್ವಗೃಹ 'ಸೌರಭ' ನಿರ್ಮಾಣ (17ನೇ ಮುಖ್ಯ ರಸ್ತೆ, ಶ್ರೀನಗರ, ಬೆಂಗಳೂರು-50) |
| ಜುಲೈ 1974 | *AN/PRC*-25 ಸಂಭಾಷಣಾ ಯಂತ್ರಕ್ಕೆ ಹೊಸ ಬ್ಯಾಟರಿಯನ್ನು ಕಂಡು ಹಿಡಿದುದಕ್ಕೆ ಕೇಂದ್ರ ಸರ್ಕಾರದ ರಕ್ಷಣಾ ಇಲಾಖೆಯ ಸೆಕ್ರೆಟರಿಯವರಿಂದ ಮೆಚ್ಚುಗೆ ಪತ್ರ |
| ಏಪ್ರಿಲ್, ಮೇ, 1978 | ಉತ್ತರ ಇಂಡಿಯಾ ; ನೇಪಾಳ ಪ್ರವಾಸ |
| ಆಗಸ್ಟ್, 1978 | ಸೈಂಟಿಫಿಕ್ ಆಫೀಸರ್ (ಗೆಜೆಟೆಡ್) ಹುದ್ದೆಗೆ ಬಡ್ತಿ. |
| ಮೇ, 9, 1980 | ಪುತ್ರಿ ಚಿ॥ ಸೌ॥ ಕಲ್ಪನಾಳ ವಿವಾಹ ಶ್ರೀ ಬಿ. ಎಸ್. ಗುರುರಾಜ್‌ರವರ ಸಂಗಡ |
| 1984 | ಕನ್ನಡದಲ್ಲಿ ಸ್ನಾತಕೋತ್ತರ ಡಿಗ್ರಿ, ಮೈಸೂರು ವಿಶ್ವವಿದ್ಯಾನಿಲಯದಿಂದ. |
| ಫೆಬ್ರುವರಿ 1989 | ಕನ್ನಡ ಸಾಹಿತ್ಯ ಪರಿಷತ್ತಿನ ಗೌ॥ ಕೋಶಾಧ್ಯಕ್ಷರಾಗಿ ಆಯ್ಕೆ |
| ಸೆಪ್ಟೆಂಬರ್ 1989 | ಅಂಡಮಾನ್ ನಿಕೋಬಾರ್ ಪ್ರವಾಸ |
| 1989–90 | ಬನಶಂಕರಿ ಸಾಂಸ್ಕೃತಿಕ ಸಂಘದ ಉಪಾಧ್ಯಕ್ಷ |
| ಡಿಸೆಂಬರ್ 30, 1989 | ರಕ್ಷಣಾ ವಿಭಾಗದ ಸಿ.ಕ್ಯು.ಎ.ಎಲ್. ಇಲಾಖೆಯಿಂದ ನಿವೃತ್ತಿ |
| ಅಕ್ಟೋಬರ್ 9, 1991 | ಮಗ ಅರುಣ ಕುಮಾರನ ವಿವಾಹ ಚಿ॥ ಸೌ॥ ಶಶಿಕಲಾಯೊಡನೆ |
| ಅಕ್ಟೋಬರ್ 11, 1991 | ಮಗಳು ಚಿ॥ ಸೌ॥ ಕವಿತಾಳ ವಿವಾಹ ಶ್ರೀ ಎ. ವಿ. ವೇಣುಗೋಪಾಲ್‌ರವರ ಸಂಗಡ. |
| 24, ನವೆಂಬರ್ 1991 | ಸ್ವಗೃಹದಲ್ಲಿ ಷಷ್ಟ್ಯಬ್ದ ಸಮಾರಂಭ |
| ಜುಲೈ, ಆಗಸ್ಟ್ 1992 | ಅಮೆರಿಕಾ ಪ್ರವಾಸ |

# ಸಾಹಿತ್ಯ ಸಾಧನೆಗಳು

| | |
|---|---|
| 1949 | ಆರ್ಯನ್ ಹೈಸ್ಕೂಲ್ (ತುಮಕೂರು) ನಲ್ಲಿ ನಡೆದ ಕಥಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ. |
| 1950 | ಪ್ರಥಮ ಕಥೆ ವಿಶ್ವಕರ್ನಾಟಕದಲ್ಲಿ ಪ್ರಕಟಣೆ. |
| 1951 | ಕರ್ಮವೀರ ನಡೆಸಿದ್ದ ದೀಪಾವಳಿ ಕಥಾ ಸ್ಪರ್ಧೆಯಲ್ಲಿ ಕಥೆಗೆ ಮೆಚ್ಚುಗೆ |
| 1953 | ವಿಶ್ವವಿದ್ಯಾನಿಲಯ ಅಂತರ ಕಾಲೇಜು (ಶಿವಮೊಗ್ಗ) ಕಥಾ ಸ್ಪರ್ಧೆಯಲ್ಲಿ ದ್ವಿತೀಯ ಬಹುಮಾನ ರಜತ ಕರಂಡ. |
| 1953 | ಬೆಂಗಳೂರಿನ ಸಾಹಿತ್ಯ ಸಂಘ ಏರ್ಪಡಿಸಿದ್ದ ಕಥಾ ಸ್ಪರ್ಧೆಯಲ್ಲಿ ಬಹುಮಾನ. |
| 1960 | ಪ್ರಥಮ ಕಾದಂಬರಿ 'ಕನ್ಯಾದಾನ' ಪ್ರಕಟಣೆ. ತಿಪಟೂರಿನ ಸುದರ್ಶನ ಪ್ರಕಾಶನದಿಂದ. |
| 1961 | 'ಹಂಬಲ' ಕಿರು ಕಾದಂಬರಿ ಕತೆಗಾರದಲ್ಲಿ ಧಾರಾವಾಹಿ. |
| 1961 | 'ಹಸಿರು ಮಂಟಪ' ಕಾದಂಬರಿ. ಪ್ರಕಟಣೆ–ಸುದರ್ಶನ ಪ್ರಕಾಶನದಿಂದ. |
| 20–12–69 ರಿಂದ 1–2–70 | 'ಸುಣ್ಣವಿಲ್ಲದ ವೀಳ್ಯ' ಕಾದಂಬರಿ ಕನ್ನಡ ಪ್ರಭದಲ್ಲಿ ಧಾರಾವಾಹಿಯಾಗಿ ಪ್ರಕಟಣೆ |
| 12-7-70 ರಿಂದ 20-9-70 | 'ಮಬ್ಬು ಮುಂಜಾವು' ಸುಧಾದಲ್ಲಿ ಧಾರಾವಾಹಿಯಾಗಿ ಪ್ರಕಟಣೆ. |
| 27-12–70 ರಿಂದ 28–3-71 | 'ಕಾಡಬೆಳದಿಂಗಳು' ಸುಧಾದಲ್ಲಿ ಧಾರಾವಾಹಿಯಾಗಿ ಪ್ರಕಟಣೆ. |
| 12-5–72 ರಿಂದ 12-6-72 | 'ಸೋನಾರ್ ಬಾಂಗ್ಲಾ' ಕಾದಂಬರಿ, ಕನ್ನಡ ಪ್ರಭದಲ್ಲಿ ಧಾರಾವಾಹಿಯಾಗಿ ಪ್ರಕಟಣೆ. |

| | |
|---|---|
| 1973 | 'ಕಾಗೆಯ ಗೂಡಿನಲ್ಲಿ ಕೋಗಿಲೆ ಹಾಡಿತು' ಕಥಾಸಂಕಲನ ಪ್ರಕಟಣೆ. ಬಿಡುಗಡೆ : ಡಾ॥ ಸರೋಜಿನಿ ಮಹಿಷಿ ಅವರಿಂದ. |
| 1974 | 'ಇಮ್ಮಡಿ ಪುಲಿಕೇಶಿ' (ಮಕ್ಕಳ ಪುಸ್ತಕ) ಐ.ಬಿ.ಹೆಚ್. ನಿಂದ ಪ್ರಕಟಣೆ. |
| 25-5-75 ರಿಂದ 24-8-75 | 'ಸ್ವರ ಮೇಳ' ಕಾದಂಬರಿ 'ಸುಧಾ'ದಲ್ಲಿ ಧಾರಾವಾಹಿ |
| 12-9-76 ರಿಂದ 21-11-76 | 'ಅನುಬಂಧ' ಕಾದಂಬರಿ 'ಸುಧಾ'ದಲ್ಲಿ ಧಾರಾವಾಹಿ. |
| 1976 | ಕೆರೂರು ವಾಸುದೇವಾಚಾರ್ಯ, ಐ.ಬಿ.ಎಚ್.ನಿಂದ ಪ್ರಕಟಣೆ. |
| ಫೆಬ್ರುವರಿ-ಮಾರ್ಚ್ 1976 | ಕೇಂದ್ರ ಸರ್ಕಾರದ ವಾರ್ತಾ ಇಲಾಖೆ ಏರ್ಪಡಿಸಿದ್ದ ಅಖಿಲ ಭಾರತ ಲೇಖಕರ ಕಮ್ಮಟದಲ್ಲಿ ಭಾಗವಹಿಸಿ ದಕ್ಷಿಣ ಭಾರತದ ಪ್ರವಾಸ. |
| 4-11-79 ರಿಂದ 20-1-80 | 'ಮಂಥನ' ಕಾದಂಬರಿ ಪ್ರಜಾಮತದಲ್ಲಿ ಧಾರಾವಾಹಿ. |
| 6-1-80 ರಿಂದ 9-3-80 | 'ಇಬ್ಬನಿ' ಕಾದಂಬರಿ 'ಸುಧಾ'ದಲ್ಲಿ ಧಾರಾವಾಹಿ. |
| 3-1-82 ರಿಂದ 18-3-82 | 'ಹರಿಗೋಲು' ಕಾದಂಬರಿ 'ಕನ್ನಡ ಪ್ರಭ'ದಲ್ಲಿ ಧಾರಾವಾಹಿ |
| 8-82 ರಿಂದ 11-82 | 'ಪವನಚಕ್ರ' ಕಿರು ಕಾದಂಬರಿ 'ಮಲ್ಲಿಗೆ'ಯಲ್ಲಿ ಧಾರಾವಾಹಿ. |
| 1-5-83 ರಿಂದ 7-8-83 | 'ರಂಗಸ್ಥಳ' ಕಾದಂಬರಿ ಪ್ರಜಾಮತದಲ್ಲಿ ಧಾರಾವಾಹಿ. |
| ಜನವರಿ 1984 | 'ಒರಿಯಾ ಕಥೆಗಳು' ಅನುವಾದ ಗ್ರಂಥಕ್ಕೆ ರಾಜ್ಯ ಸರ್ಕಾರದಿಂದ ಬಹುಮಾನ. |
| 1985 | 'ಗೊಂಚಲು' ಕಥಾಸಂಕಲನ ಬಿಡುಗಡೆ ಪ್ರೊ. ಜಿ.ಎಸ್. ಶಿವರುದ್ರಪ್ಪ ಅವರಿಂದ. |

| | |
|---|---|
| 31-7-85 ರಿಂದ 11-12-85 | ‘ಗೆಜ್ಜೆ ಕಟ್ಟಿದ ಹೆಜ್ಜೆ’ ಕಾದಂಬರಿ ಮಂಗಳದಲ್ಲಿ ಧಾರಾವಾಹಿ. |
| 1985 | ‘ಗಂಗರಾಜ ದುರ್ವಿನೀತ’ ಐ.ಬಿ.ಎಚ್.ನಿಂದ ಪ್ರಕಟಣೆ |
| 1986 | ‘ಬಾನುಲಿ ನಾಟಕ’ಗಳು (ಮಕ್ಕಳ ಪುಸ್ತಕ) ಪ್ರಕಟಣೆ. |
| 15-12-85 ರಿಂದ 16-11-86 | ‘ಮಕ್ಕಳೇ, ಇವರನ್ನು ನೀವು ಬಲ್ಲಿರಾ’ ಲೇಖನಗಳ ಪ್ರಕಟಣೆ, ಪ್ರಜಾಮತದಲ್ಲಿ. |
| ಡಿಸೆಂಬರ್ 86 | ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅನುದಾನ ಯೋಜನೆಯಡಿ ಆಂಧ್ರಪ್ರದೇಶ ಪ್ರವಾಸ. |
| ನವೆಂಬರ್ 86 | ಕೇಂದ್ರ ಸರ್ಕಾರದ ಡಿಫೆನ್ಸ್ ಅಕೌಂಟ್ಸ್‌ನಿಂದ ರಾಜ್ಯೋತ್ಸವ ಸನ್ಮಾನ. |
| 19-6-87 ರಿಂದ 1-10-87 | ಪ್ರೌಢಪ್ರತಾಪ ವೀರ ರಾಜೇಂದ್ರ’ ಚಾರಿತ್ರಿಕ ಕಾದಂಬರಿ ‘ಕನ್ನಡ ಪ್ರಭ’ದಲ್ಲಿ ಧಾರಾವಾಹಿ. |
| ಸೆಪ್ಟೆಂಬರ್ 1988 | ಪಂ. ಗೋವಿಂದ ವಲ್ಲಭಪಂತ್ ರೂಪಕ ದೂರದರ್ಶನದಲ್ಲಿ ಪ್ರಸಾರ. |
| 1989 | ಹ್ಯೂಯನ್‌ತ್ಸಾಂಗ್‌ನ ಇಂಡಿಯಾ ಪ್ರವಾಸ ಗ್ರಂಥದ ಅನುವಾದ (ಇಂಗ್ಲೀಷ್‌ನಿಂದ ಕನ್ನಡಕ್ಕೆ) ಎನ್.ಬಿ.ಟಿಗಾಗಿ |
| 26-1-1989 | ‘ಕನ್ನಡ ಸಾಹಿತಿ ದರ್ಶನ’ ಕೃತಿ ಬಿಡುಗಡೆ, ರಾಷ್ಟ್ರಕವಿ ಡಾ॥ ಕುವೆಂಪು ಅವರಿಂದ. |
| ಫೆಬ್ರವರಿ 1989 | ಕ.ಸಾ.ಪ.ನ ಗೌ॥ ಕೋಶಾಧಿಕಾರಿಯಾಗಿ ಅಧಿಕಾರ ಸ್ವೀಕಾರ. |
| ಮಾರ್ಚ್ 1989 | ‘ಪೌರ ಪ್ರಜ್ಞೆ’ ರೂಪಕ ದೂರದರ್ಶನದಲ್ಲಿ ಪ್ರಸಾರ. |
| ಜೂನ್ 1989 | ಉತ್ಥಾನ ಕಥಾ ಸ್ಪರ್ಧೆಯಲ್ಲಿ ಬಹುಮಾನ. |
| ಜೂನ್ 1989 | ‘ಕನ್ನಡ ಸಾಹಿತಿ ದರ್ಶನ’ ಕೃತಿ ಬಿಡುಗಡೆ ಡಾ॥ ಕುವೆಂಪುರವರ ಅಮೃತ ಹಸ್ತದಿಂದ. |
| ನವೆಂಬರ್ 1989 | ‘ಮೌ॥ ಅಬುಲ್ ಕಲಾಮ್ ಆಜಾದ್’ ರೂಪಕ ದೂರದರ್ಶನ ಕೇಂದ್ರದಿಂದ ಪ್ರಸಾರ. |
| ಸೆಪ್ಟೆಂಬರ್ 1989 | ‘ಕೈಗಾರಿಕಾಕರಣ’ ದೂರದರ್ಶನದಿಂದ ಪ್ರಸಾರ. |
| ಮಾರ್ಚ್ 1990 | ತುಮಕೂರಿನಲ್ಲಿ ಜಿಲ್ಲಾ ಸಾಹಿತ್ಯ ಪರಿಷತ್ತಿನಿಂದ ಸನ್ಮಾನ, |

| | |
|---|---|
| ನವೆಂಬರ್ 1990 | ಸಿ.ಕ್ಯು.ಎ.ಎಲ್. ಆವರಣದಲ್ಲಿ ರಾಜ್ಯೋತ್ಸವ ಸನ್ಮಾನ. |
| ಮೇ 1989 | ಅಷ್ಟ ಭಾಷಾ ಮಕ್ಕಳ ಸಾಹಿತ್ಯ ಸಮ್ಮೇಳನ. (ಮಕ್ಕಳ ಸಾಹಿತ್ಯ ಪರಿಷತ್ತಿನ ವತಿಯಿಂದ) |
| 26-9-89 | ಶ್ರೀ ಟಿ. ಜಿ. ರಾಘವ ಅವರ ಸಂದರ್ಶನ-ದೂರದರ್ಶನ ದಲ್ಲಿ. |
| ಮಾರ್ಚ್ 1990 | ಶ್ರೀ ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳ ಸಂದರ್ಶನ, ದೂರದರ್ಶನದಲ್ಲಿ. |
| ಡಿಸೆಂಬರ್ 1990 | ಕವಾನಿ ಮೆಟಲ್ಸ್ ಮತ್ತು ಅಲಾಯ್ಸ್ (ಲಿ) ಅವರಿಂದ ರಾಜ್ಯೋತ್ಸವ ಸನ್ಮಾನ. |
| 1990 | 'ಇಪ್ಪತ್ತೊಂದು ಬಂಗಾಳಿ ಕಥೆಗಳು' ಅನುವಾದ ಎನ್.ಬಿ.ಟಿ ಗಾಗಿ. |
| 1990 | 'ಕವಿ ರತ್ನತ್ರಯರು' ಮಕ್ಕಳ ಪುಸ್ತಕ ಪ್ರಕಟಣೆ. |
| ಜನವರಿ 1991 | 'ಮಾಡು ಸಿಕ್ಕದಲ್ಲಾ....' ಕಥೆ ದೂರದರ್ಶನದಿಂದ ಪ್ರಸಾರ. |
| 1-1-91 ರಿಂದ 1-9-91 | 'ಪುಟಾಣಿ ಸಾಹಸಿಗಳು' ಕಾದಂಬರಿ 'ಬಾಲಮಂಗಳ'ದಲ್ಲಿ ಧಾರಾವಾಹಿ. |
| ಫೆಬ್ರವರಿ 1991 | 'ಪ್ರೌಢಪ್ರತಾಪ ವೀರರಾಜೇಂದ್ರ' ಕಾದಂಬರಿ ಬಿಡುಗಡೆ ಶ್ರೀ ಆರ್. ಗುಂಡೂರಾವ್‌ರಿಂದ. ಹಾಗೂ ಕೊಡಗು ಜಿಲ್ಲಾ ಸಾಹಿತ್ಯ ಪರಿಷತ್ತಿನಿಂದ ಸನ್ಮಾನ. |
| ಮಾರ್ಚ್ 1991 | 'ಪ್ರೌಢ ಪ್ರತಾಪ ವೀರರಾಜೇಂದ್ರ' ಕಾದಂಬರಿಗೆ ವಿಶ್ವಭಾರತೀಯ ಪರಿಷತ್ತು, ಪಾಚ್ಚಾಪುರ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ರೂ. 4000/- |
| ನವಂಬರ್ 1991 | 'ಪ್ರೌಢ ಪ್ರತಾಪ ವೀರರಾಜೇಂದ್ರ' ಕಾದಂಬರಿಗೆ 1980-90 ದಶಕದ ಅತ್ಯುತ್ತಮ ಕೃತಿಗಳಲ್ಲಿ ಒಂದೆಂದು ಪರಿಗಣಿಸಿ 'ನೃಪತುಂಗ ಸಾಹಿತ್ಯ ಪ್ರಶಸ್ತಿ' ಮೈಸೂರಿನ ಕರುನಾಡು ಶಿಕ್ಷಣ ಸಂಸ್ಥೆ ವತಿಯಿಂದ. |
| 29-11-91 | ರಕ್ಷಣಾ ವಿಭಾಗದ ಇ.ಟಿ ಡಿ.ಸಿ.ಯಿಂದ ರಾಜ್ಯೋತ್ಸವ ಸನ್ಮಾನ. |
| 1991 | 'ಸ್ಮರಣೀಯ ಹುತಾತ್ಮರು' ನವಸಾಕ್ಷರರಿಗಾಗಿ ಕೃತಿ ಪ್ರಕಟಣೆ. |

| | |
|---|---|
| 23-11-92 | ಕರ್ನಾಟಕ ರಾಜ್ಯ ಸಾರ್ವಜನಿಕ ಹಿತರಕ್ಷಣೆ ಮತ್ತು ಸಾಂಸ್ಕೃತಿಕ ಸಂಘದ ವತಿಯಿಂದ ಟಿ.ಟಿ.ಡಿ. ಛತ್ರದಲ್ಲಿ ಸನ್ಮಾನ. |
| 11-93 | ಬನಶಂಕರಿ ಸಾಂಸ್ಕೃತಿಕ ಸಂಘ ಮತ್ತು ತೆರಿಗೆದಾರರ ಸಂಘಗಳ ವತಿಯಿಂದ ರಾಜ್ಯೋತ್ಸವ ಸನ್ಮಾನ—ಹೆಚ್. ವಿಶ್ವನಾಥ್‌ರವರಿಂದ. |
| 6–94 | 'ಕಾಕಾ ಕಾಲೇಲ್‌ಕರ್' ಅನುವಾದ. ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ. |
| 12-94 | 'ಡಾ॥ ಬೆಟಗೇರಿ ಕೃಷ್ಣಶರ್ಮ' ವಾಚಿಕೆಯ ಸಂಪಾದನೆ. ರಾಜ್ಯ ಸಾಹಿತ್ಯ ಅಕಾಡೆಮಿಗಾಗಿ. |
| 12-94 | ಮೂಡಬಿದಿರಿ ವೀರಪ್ಪ ಮೊಯಿಲಿ ಕೃತಿರಚನೆ. |
| 1–95 | 'ಹಾರೋ ಹನುಮ' ಮಕ್ಕಳಿಗಾಗಿ ಕಾದಂಬರಿ ರಚನೆ. |
| 2–95 | 'ಪರಿಸರ ಸಂರಕ್ಷಣೆ' ಕೃತಿ ರಚನೆ, ಕನ್ನಡ ಸಾಹಿತ್ಯ ಪರಿಷತ್ತಿಗಾಗಿ. |

## ಕೃತಿಗಳು

1. **ಕಾದಂಬರಿಗಳು :**

1) (ಅ) ಕನ್ಯಾದಾನ
(ಆ) ಹಸಿರು ಮಂಟಪ } (ಪುಸ್ತಕ ರೂಪದಲ್ಲಿ ಪ್ರಕಟಗೊಂಡಿವೆ)

2) **ಧಾರಾವಾಹಿಯಾಗಿ ಪ್ರಕಟಗೊಂಡು ಅನಂತರ ಪುಸ್ತಕ ರೂಪದಲ್ಲಿ ಹೊರ ಬಂದಿರುವ ಕೃತಿಗಳು :**

ಅ) ಮಣ್ಣಿನ ಮಗ (ಕತೆಗಾರದಲ್ಲಿ)

ಆ) ಬಾಳೇ ಬಂಗಾರ (ಸುಧಾದಲ್ಲಿ 'ಶಿಖಿಡ ಬೆಳದಿಂಗಳು' ಹೆಸರಿನಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡು ಚಲನಚಿತ್ರವಾಗುತ್ತಿರುವ ಕಾದಂಬರಿ)

ಇ) ಮಬ್ಬು ಮುಂಜಾವು ('ಸುಧಾ'ದಲ್ಲಿ)
ಈ) ಸ್ವರಮೇಳ ('ಸುಧಾ'ದಲ್ಲಿ)
ಉ) ಸ್ವಾತಿಯ ಹನಿ ('ಸುಧಾ'ದಲ್ಲಿ 'ಅನುಬಂಧ' ಹೆಸರಿನಲ್ಲಿ)
ಊ) ಇಬ್ಬನಿ ('ಸುಧಾ'ದಲ್ಲಿ)
ಋ) ಸುಣ್ಣವಿಲ್ಲದ ವೀಳ್ಯ ('ಕನ್ನಡ ಪ್ರಭ'ದಲ್ಲಿ)
ೠ) ಸೋನಾರ್ ಬಾಂಗ್ಲಾ ('ಕನ್ನಡ ಪ್ರಭ'ದಲ್ಲಿ)
ಎ) ಹರಿಗೋಲು ('ಕನ್ನಡ ಪ್ರಭ'ದಲ್ಲಿ)
ಏ) ಮಂಥನ ('ಪ್ರಜಾಮತ'ದಲ್ಲಿ)
ಐ) ರಂಗಸ್ಥಳ ('ಪ್ರಜಾಮತ'ದಲ್ಲಿ)
ಒ) ಪವನಚಕ್ರ ('ಮಲ್ಲಿಗೆ'ಯಲ್ಲಿ)
(ಓ) ಗೆಜ್ಜೆ ಕಟ್ಟಿದ ಹೆಜ್ಜೆ ('ಮಂಗಳ'ದಲ್ಲಿ)
(ಔ) ಪ್ರೌಢ ಪ್ರತಾಪ ವೀರರಾಜೇಂದ್ರ ('ಕನ್ನಡ ಪ್ರಭ'ದಲ್ಲಿ)

3) **ಪುಸ್ತಕ ರೂಪದಲ್ಲಿ ಹೊರಬರಲಿರುವ ಕೃತಿಗಳು :**

(ಅ) ಸಮನ್ವಯ
ಆ) ಸತ್ಯಮೇವ ಜಯತೆ (ಕಿರು ಕಾದಂಬರಿ)

II **ಕಥಾಸಂಕಲನಗಳು :**

ಅ) ಕಾಗೆಯ ಗೂಡಿನಲ್ಲಿ ಕೋಗಿಲೆ ಹಾಡಿತು

ಆ) ಗಾಳಿ ಮೋಡದ ಗೆಳತಿ

ಇ) ಒರಿಯಾ ಕಥೆಗಳು (ನ್ಯಾಷನಲ್ ಬುಕ್ ಟ್ರಸ್ಟ್‌ಗಾಗಿ ಅನುವಾದ— 1984ರ ರಾಜ್ಯ ಸರ್ಕಾರದ ಪುರಸ್ಕಾರ ಗಳಿಸಿದೆ.)
ಇ) ಗೊಂಚಲು
ಉ) ಇಪ್ಪತ್ತೊಂದು ಬಂಗಾಳಿ ಕಥೆಗಳು
ಊ) ಹೃಷಿಕೇಶ್ ಪಾಂಡೆ ಅವರ 'ಜಯ್ದು ಒರಿಯಾ ಕಥೆಗಳು' ಸಂಕಲನಕ್ಕೆ ಆರು ಕಥೆಗಳ ಅನುವಾದ)

III. **ಮಕ್ಕಳ ಪುಸ್ತಕಗಳು :**

ಅ) ಇಮ್ಮಡಿ ಪುಲಿಕೇಶಿ (ಭಾರತ–ಭಾರತಿ ಪುಸ್ತಕ ಸಂಪದ)
ಆ) ಕೆರೂರ ವಾಸುದೇವಾಚಾರ್ಯ (ಐ.ಬಿ.ಹೆಚ್. ಸಂಸ್ಥೆಗಾಗಿ)
ಇ) ನಮ್ಮ ವಾಯುಪಡೆ (ನ್ಯಾಷನಲ್ ಬುಕ್ ಟ್ರಸ್ಟ್‌ಗಾಗಿ ಅನುವಾದ)

ಈ) ಗಂಗರಾಜ ದುರ್ವಿನೀತ (ಐ.ಬಿ.ಹೆಚ್. ಸಂಸ್ಥೆಗಾಗಿ)

ಉ) ಬಾನುಲಿ ನಾಟಕಗಳು (ಆಕಾಶವಾಣಿ ಪ್ರಸಾರಿತ ನಾಟಕಗಳು)

ಊ) ಮಕ್ಕಳೇ, ಇವರನ್ನು ನೀವು ಬಲ್ಲಿರಾ ? (ಮಕ್ಕಳ ಕೃತಿ ರಚಿಸಿರುವ ಸಾಹಿತಿಗಳ ಪರಿಚಯ ಮಾಲೆ)

ಋ) ಹ್ಯೂಯೆನ್‌ತ್ಸಾಂಗನ ಇಂಡಿಯ ಪ್ರವಾಸ

ೠ) ಪಂಡಿತ ಗೋವಿಂದ ವಲ್ಲಭ ಪಂತ್

ಎ) ಮೌಲಾನಾ ಅಬುಲ್ ಕಲಾಂ ಅಜಾದ್

ಏ) ಪೌರಪ್ರಜ್ಞೆ

ಐ) ಕವಿರತ್ನತ್ರಯರು

ಒ) ಸ್ಮರಣೀಯ ಹುತಾತ್ಮರು

ಓ) ಜಲಸಂಪತ್ತು

ಔ) ಪುಟಾಣಿ ಸಾಹಸಿಗಳು (ಮಕ್ಕಳ ಸಾಹಸ ಕಾದಂಬರಿ)

*IV* (1) **ಪ್ರಸಾರಗೊಂಡಿರುವ ರೇಡಿಯೋ ರೂಪಕಗಳು ಹಾಗೂ ನಾಟಕಗಳು :**

ಅ. ಹದಿನೈದು ನಿಮಿಷ ಆ. ದುರ್ವಿನೀತ ಇ. ಓಂ ಮಾನೆ ಪೇಮೆ ಹುಂ ಈ. ತರಂಗರಂಗ ಉ. ಓವರ್ ಟೈಂ ರಾಮು ಊ. ಅಪಘಾತ ಋ. ಪ್ರವಾಸ ೠ. ಇಂಟರ್‌ವ್ಯೂ ಎ. ಮನಕೆ ಜಯವಿಲ್ಲ ಏ. ಜಗಜೆಟ್ಟಿ ಐ. ಶಂಕರಾಚಾರ್ಯ ಒ. ಸಾಹಿತ್ಯ ಮತ್ತು ವಿಜ್ಞಾನ ಓ. ಒರಿಯಾ ಸಾಹಿತ್ಯ (ಹಿಂದಿಯಲ್ಲಿ ಭಾಷಣ) ಔ. ಮಕ್ಕಳಿಗೆ ಮೂರು ಕಥೆಗಳು ಅಂ. ಸುಬೋಧ ರಾಮರಾಯರು ಅಃ. ಮೋಪುಂಡಿ ಮಲ್ಲಾರಿ ಕ. ದಿನಕರ ದೇಸಾಯಿ ಖ. ವಿದ್ಯುತ್ ಜನಕಗಳು

(2) **ಪ್ರಸಾರಿತ ದೂರದರ್ಶನ ರೂಪಕಗಳು :**

ಅ. ಪಂಡಿತ ಗೋವಿಂದ ವಲ್ಲಭ ಪಂತ್

ಆ. ಮೌಲಾನಾ ಅಬುಲ್ ಕಲಾಂ ಆಜಾದ್

ಇ. ಮಕ್ಕಳಲ್ಲಿ ಪೌರಪ್ರಜ್ಞೆ

ಈ. ಕೈಗಾರಿಕೀಕರಣ

**ಇತರ ಗ್ರಂಥಗಳು :**

ಅ. ಕನ್ನಡ ಸಾಹಿತಿ ದರ್ಶನ—ದಿನಾಂಕ 26-1-1989ರಂದು ರಾಷ್ಟ್ರಕವಿ ಡಾ!! ಕುವೆಂಪುರವರಿಂದ ಬಿಡುಗಡೆಗೊಂಡಿದೆ.

1500ಕ್ಕೂ ಹೆಚ್ಚು ಪ್ರಾಚೀನ, ಅರ್ವಾಚೀನ ಸಾಹಿತಿಗಳ ಪರಿಚಯ ನೀಡುವ ವಿಶಿಷ್ಟ ಕೃತಿ.

ಆ. ಭಾರತ ದರ್ಶನ (ಪ್ರವಾಸ ಗ್ರಂಥ)

*i.* ಉತ್ತರ ಭಾರತ *ii.* ದಕ್ಷಿಣ ಭಾರತ

ಇ. ಕಾಕಾ ಕಾಲೇಲ್‌ಕರ್ (ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ)

ಈ. ಡಾ॥ ಬೆಟಗೇರಿ ಕೃಷ್ಣಶರ್ಮ-ವಾಚಿಕೆ (ರಾಜ್ಯ ಸಾಹಿತ್ಯ ಅಕಾಡೆಮಿ ಗಾಗಿ)

## *VI* ಬರಲಿರುವ ಕೃತಿಗಳು :

ಅ) ಪ್ರೌಢ ಪ್ರತಾಪ ವೀರರಾಜೇಂದ್ರ (ಉತ್ತರ ಭಾಗ)

ಆ) ಅಂಕ ಮುಗಿಯಲಿಲ್ಲ (ಕಥಾ ಸಂಕಲನ)

ಇ) ಪ್ರೇಮಕಥೆಗಳು (ಕಥಾ ಸಂಕಲನ)

ಈ) ಜವಾಹರ್‌ಲಾಲ್ ನೆಹರು (ಮಕ್ಕಳ ಪುಸ್ತಕ)

ಉ) ಇಣಿಕುನೋಟ (ಅಮೇರಿಕಾ ಪ್ರವಾಸ)

ಊ) ಪರಿಸರ ಸಂರಕ್ಷಣೆ

ಋ) ಹಾರೋ ಪನುಮ (ಮಕ್ಕಳಿಗಾಗಿ ಕಾದಂಬರಿ)

## *VII* ಇತರ ಬಿಡಿ ಲೇಖನಗಳು :

1) ಆದರಣೀಯ ವ್ಯಕ್ತಿತ್ವ (ಡಾ॥ ಸಾ. ಶಿ. ಮರುಳಯ್ಯ) : 'ತುಮ್ಮಗೂರು' ನೆನಪಿನ ಸಂಚಿಕೆ.

2) ಕನ್ನಡ ಸಾಹಿತ್ಯ ಕ್ಷಿತಿಜದ ಪ್ರಭಾವಿತ ತಾರೆ–ವಿ.ಸೀ : 'ದೇವಗಂಗೆ' ಬೆಂಗಳೂರು ಗ್ರಾಮಾಂತರ ಜಿಲ್ಲೆ ಕ.ಸಾ.ಪ.

3) ಕರ್ತೃತ್ವ ಶಕ್ತಿಯ ಸಾಕಾರ ರೂಪ–ಆರ್. ಕಲ್ಯಾಣಮ್ಮ : 'ಲೇಖಕಿ' ವಿಶೇಷ ಸಂಚಿಕೆ.

4) ಇದ್ದು ಜಯಿಸಬೇಕು ಮತ್ತು ದೀಪಾವಳಿ : 'ಮಂದಾರ' ಡಾ॥ ವರದರಾಜಹುಯಿಲ ಗೋಳರ ಜೀವನ ಮತ್ತು ಕೃತಿಗಳ ಸಮೀಕ್ಷೆ

5) ಮಕ್ಕಳೇ, ಇವರನ್ನು ನೀವು ಬಲ್ಲಿರಾ ? : ದೇಜಗೌ ಎಪ್ಪತ್ತರ ಹೊಸ್ತಿಲಲ್ಲಿ ಅಭಿನಂದನಾಗ್ರಂಥ.

6) 1980-90 ದಶಕದ ಕಾದಂಬರಿಗಳು : ದೇಜಗೌ ಎಪ್ಪತ್ತೈದರ ಅಭಿನಂದನಾ ಗ್ರಂಥ.

7) ವೈಶಿಷ್ಟ್ಯಪೂರ್ಣ ವ್ಯಕ್ತಿ–ವಿ.ಸೀ. : 'ಜ್ಞಾನ ಸುಧಾ' ಡಾ॥ ವಿ.ಸೀ. ಸ್ಮರಣ ಸಂಚಿಕೆ.

8) ಕನ್ನಡದಲ್ಲಿ ಮಕ್ಕಳ ಸಾಹಿತ್ಯ : 'ಶಿಶು ಭಾರತಿ' ಅಷ್ಟ ಭಾಷಾ ಮಕ್ಕಳ ಸಾಹಿತ್ಯ ಸಮ್ಮೇಳನ ಸಂಚಿಕೆ.

9) ಕನಕದಾಸರು : 'ಕನಕರತ್ನ' ಸ್ಮರಣ ಸಂಚಿಕೆ.

10) ಜ್ವಲಂತ ಸ್ಫೂರ್ತಿಯ ಜೀವಂತ ಸಂಕೇತ : 'ದೀನಬಂಧು' ಅಭಿನಂದನಾ ಸಂಚಿಕೆ.

11) ಧಾರ್ಮಿಕ ರಾಯಭಾರಿ, ದೀನಬಂಧು ನಾಯ್ಡು ಧರ್ಮಯಾತ್ರೆ : 'ದೀನಬಂಧು' ಅಭಿನಂದನಾ ಸಂಚಿಕೆ.

12) ನವರಾತ್ರಿ : ದುರ್ಗಾಪೂಜಾ ಸಾಂಸ್ಕೃತಿಕ ಸಮಿತಿ ವಿಶೇಷ ಸಂಚಿಕೆ.

13) ಪರಿಸರ ಮಾಲಿನ್ಯದಲ್ಲಿ ಔದ್ಯೋಗಿಕ ವಿಷ : ಪ್ರಜಾಮತ.

14) ಪ್ರೊ॥ ಎಲ್.ಎಸ್. ಶೇಷಗಿರಿರಾವ್ : 'ಮಂಗಳ' ವಾರ ಪತ್ರಿಕೆ.

15) ಎಂ.ಎಸ್. ಪುಟ್ಟಣ್ಣ : 'ಮಂಗಳ' ವಾರ ಪತ್ರಿಕೆ.

16) ಹಂಪನಾ : 'ಮಂಗಳ' ವಾರಪತ್ರಿಕೆ.

17) ಚೀಣಾದ ಅವಮಾನುಷತೆಗೆ ಬಲಿಯಾದ ಟಿಬೆಟ್ : ತಾಯಿನಾಡು

18) ಜಾತೀಯತೆಯನ್ನು ಮೆಟ್ಟಿ ಆದರ್ಶ ಜೀವನ ನಡೆಸುವುದರ ಚಿತ್ರಣ– 'ದಾಟು' : 'ಸಮತಾ'ದಲ್ಲಿ ವಿಮರ್ಶೆ.

19) ಶಿವರಾಮ ಕಾರಂತರ ಮಕ್ಕಳ ಸಾಹಿತ್ಯ : ಅರ್ಕಾವತಿ ಪ್ರಕಾಶನ ದಶಮಾನೋತ್ಸವ ಸಂಚಿಕೆ.

20) ಜ್ಞಾನಪೀಠ ಪ್ರಶಸ್ತಿ ವಿಜೇತರು : 'ಯುವ ಕರ್ನಾಟಕ'.

21) ಶಿಶು ಸಾಹಿತ್ಯದ ಉಗಮ ಮತ್ತು ವಿಕಾಸ : ಮಕ್ಕಳ ಸಾಹಿತ್ಯ ಸಮಾವೇಶ ಚನ್ನಪಟ್ಟಣ, ಕ.ಸಾ.ಪ.

22) ಪಂಜೆ ಮಂಗೇಶರಾಯರು : ಕನ್ನಡ ಸಾಹಿತ್ಯ ಅಕಾಡೆಮಿ.

23) ಮಾಸ್ತಿ : ಯುವ ಕರ್ನಾಟಕ.

24) ಕರ್ನಾಟಕದಲ್ಲಿ ಮಕ್ಕಳ ಸಾಹಿತ್ಯ ಕೃಷಿ : 'ಗಿರಿ ನವಿಲು' ಸ್ಮರಣ ಸಂಚಿಕೆ (ಮಕ್ಕಳ ಸಾಹಿತ್ಯ ಅಕಾಡೆಮಿ)

25) ಕನ್ನಡದಲ್ಲಿ ಮಕ್ಕಳ ಸಾಹಿತ್ಯ : 'ವಜ್ರದೀಪ್ತಿ' 60ನೇ ಸಾಹಿತ್ಯ ಸಮ್ಮೇಳನ ಕನ್ನಡ ಸಾಹಿತ್ಯ ಪರಿಷತ್ತು.

26) ಜಗತ್ತಿನ ಅತ್ಯುತ್ತಮ ಗ್ರಂಥಾಲಯ : 'ಕರ್ಮವೀರ' ವಾರಪತ್ರಿಕೆ

27) ಅಮೇರಿಕಾದ ಒಂದು ಹಿಂದೂ ದೇವಾಲಯ : 'ಉತ್ಥಾನ' ಮಾಸ ಪತ್ರಿಕೆ

28) ಲೈಬ್ರರಿ ಆಫ್ ಕಾಂಗ್ರೆಸ್ : 'ಮಂಗಳ' ವಾರಪತ್ರಿಕೆ

29) ಸ್ಮಿತ್ ಸೋನಿಯನ್ ಸಂಸ್ಥೆ : 'ಕಸ್ತೂರಿ' ಮಾಸಪತ್ರಿಕೆ

30) ಶಾಸನಗಳು ದೇವಾಲಯಗಳು : ಬನಶಂಕರಿ ಸಾಂಸ್ಕೃತಿಕ ಸಂಘದ ವಿಶೇಷ ಸಂಚಿಕೆ

31) ನಾನು ಕಂಡ ಅಮೇರಿಕಾದ ಹಿಂದೂ ದೇವಾಲಯ : 'ಶ್ರೀಮುಖ' ವಿಶೇಷ ಸಂಚಿಕೆ.

32) ಕರ್ನಾಟಕದಲ್ಲಿ ಧರ್ಮ ಜಾಗೃತಿ : 'ಪ್ರಮೋದ' ವಿಶೇಷ ಸಂಚಿಕೆ.

33) ಓ ! ಬುದ್ಧ (ಕವನ) : 'ಕಾವ್ಯ' ವಿಶೇಷ ಸಂಚಿಕೆ

34) ರಾಮಾಯಣ ಒಂದು ಸಮೀಕ್ಷೆ : 'ಸುಮುಖ' ವಿಶೇಷ ಸಂಚಿಕೆ.

35) ಜೀವನ ಸತ್ಯ (ಕವನ) : 'ಭವ್ಯ' ವಿಶೇಷ ಸಂಚಿಕೆ.

36) ರಾಮಾಯಣದ ಪ್ರಾಚೀನತೆ ಮತ್ತು ಅದರಲ್ಲಿನ ವೈವಿಧ್ಯತೆ : 'ಜ್ಯೋತಿ' ವಿಶೇಷ ಸಂಚಿಕೆ.

37) ಭಾರತೀಯ ಸಂಸ್ಕೃತಿ ಮತ್ತು ಪರಂಪರೆ : 'ಸಾಧನಾ' ವಿಶೇಷ ಸಂಚಿಕೆ.

38) ಕನ್ನಡದ ನೆಲೆ–ಬೆಲೆ : ತುಮಕೂರು ಜಿಲ್ಲಾ 3ನೇ ಕ.ಸಾಹಿತ್ಯ ಸಮ್ಮೇಳನ (ಪ್ರಬಂಧ)

39) ಮಕ್ಕಳ ಸಾಹಿತ್ಯ ; ಅನ್ವಯ–ಪ್ರಯೋಗ : ರಾಜ್ಯಮಟ್ಟದ ಮಕ್ಕಳ ಸಾಹಿತ್ಯ ಸಮಾವೇಶ-ಚನ್ನಪಟ್ಟಣ (ಪ್ರಬಂಧ)

40) ಟ್ರೂ ಕಾಪಿ. (ವ್ಯಂಗ ರೂಪಕ) : ಜಯಂತಿ (1957)

41) ಜನಸ್ಫೂರ್ತಿ ಸ್ಫೂರ್ತಿ ಸಾರ್ವಜನಿಕ ವೇದಿಕೆ.

42) 32 ಪ್ರವಾಸ ಲೇಖನಗಳು 'ಯಾತ್ರಿಕ' ಪತ್ರಿಕೆಯಲ್ಲಿ.

*VIII* **ಸಂಕಲನಗಳಲ್ಲಿ ಸೇರಿಲ್ಲದ, ಇತರ ಪ್ರಕಟಿತ ಕಥೆಗಳು :**

1. ಹದ್ದುಗಳು (ಮಯೂರ)
2. ಧೂಳು ಮುಸುಕಿತು (ಮಯೂರ)
3. ಬಲೆ (ಮಲ್ಲಿಗೆ)
4. ಋಣ (ಕಸ್ತೂರಿ)
5. ನೀ ಮಾಯೆಯೊಳಗೊ(ಕಸ್ತೂರಿ)
6. ಹೆಣ್ಣು ಕಲ್ಪನೆ ('ಶೋಭಾ' ಮದರಾಸು)
7. ಮಾಲಿನ್ಯ (ಉತ್ಥಾನ) ಬಹುಮಾನಿತ ಕಥೆ
8. ಗೆಲ್ಲುವ ಕುದುರೆ (ಉತ್ಥಾನ)
9. ಸೋಲು (ಮಯೂರ)
10. ಸಾಕ್ಷಿ (ಮಯೂರ)
11. ಪ್ರಪಾತ (ಸುಧಾ)
12. ಕುಂಬಾರಪೇಟೆ (ಮಯೂರ)
13. ಪಾರಿವಾಳ (ಮಯೂರ)
14. ಬಯಕೆ ಬರಿದಾಯಿತು (ಕತೆಗಾರ)
15. ನಾಳಿಕ್ಬರ್ತೀನಿ (ಕತೆಗಾರ)
16. ತರಂಗ (ಸುಧಾ)
17. ನಂಬಿ ಕೆಟ್ಟವರಿಲ್ಲವೊ (ಸುಧಾ)

18. ಎಂದೆಂದೂ ನಿನ್ನ ಪಾದವೇ ಗತಿ (ಕರ್ಮವೀರ)
19. ಸುಳುಹು (ಸುಧಾ)
20. ದಿಗಂತ (ಸುಧಾ)
21. ಶಿಕ್ಷೆ ಯಾರಿಗೆ ? (ಸುಧಾ)
22. ದರ್ಪಣ ಸುಂದರಿ (ಮಂಗಳ)
23. ಸಂಕರ್ಷಣ (ತರಂಗ)
24. ಹರಿಶ್ಚಂದ್ರ ರಾಜ್ಯ (ತರಂಗ)
25. ನೀರು....ನೀರು (ತರಂಗ)
26. ನಿಮಗೂ ಹೀಗೆ ಆಗಬಹುದು (ಸುಧಾ)
27. ಆವರ್ತ (ಸುಧಾ)
28. ಸೋಲು (ಸುಧಾ)
29. ಹಸಿವು (ಸುಧಾ)
30. ಆಟ (ಮಂಗಳ) ದೀಪಾವಳಿ ವಿಶೇಷಾಂಕ
31. ಅಂತರ (ಮಂಗಳ) ದೀಪಾವಳಿ ವಿಶೇಷಾಂಕ
32. ನಾಯಿ ಹಸಿದಿತ್ತು (ಮಂಗಳ) ದೀಪಾವಳಿ ವಿಶೇಷಾಂಕ
33. ದೇವಿದರ್ಶನ ('ಶೋಭಾ' ಮದರಾಸು)
34. ಜೀವಿಸುವುದಕ್ಕಾಗಿ (ಪ್ರಜಾಮತ)
35. ಕೆಸರು [ಭಾಗ 1] [ಭಾಗ 2] (ಪ್ರಜಾಮತ)
36. ತುಡಿತ (ಪ್ರಜಾಮತ)
37. ರತಿಸುಖ ಹೃದಯ ವರ್ಧಕ (ಪ್ರಜಾಮತ)
38. ಸಾಕಿದ ನಾಯಿ (ಪ್ರಜಾಮತ)
39. ಬವಣೆ (ಕನ್ನಡ ಪ್ರಭ)
40. ನಿಯಂತ್ರಣ (ಕನ್ನಡ ಪ್ರಭ)
41. ಅಂಕ ಮುಗಿಯಲಿಲ್ಲ (ಸಂಯುಕ್ತ ಕರ್ನಾಟಕ)
42. ದೇವರು ಕ್ಷಮಿಸಲಿಲ್ಲ (ಕನ್ನಡ ಪ್ರಭ)
43. ಬಯಕೆ ಬತ್ತಿತು (ಕನ್ನಡಪ್ರಭ)
44. ಏರಿ ಇಳಿಯಿತು (ಪ್ರಜಾವಾಣಿ)
45. ತಲ್ಲಣಿಸದಿರು ಮನವೆ (ಕನ್ನಡಪ್ರಭ)
46. ಕರಿಯ ಮರದ ಪೆಟ್ಟಿಗೆ(ಅನುವಾದ) (ಸುಧಾ)
47. ಸಾವಿತ್ರಿ ಬಾಲಾ (ಅನುವಾದ) (ಅನಿಕೇತನ)
48. ಒಂದು ಕಲ್ಲು ಎರಡು ಹಣ್ಣು 'ಮಂಗಳ' ದೀಪಾವಳಿ ಸಂಚಿಕೆ 94
49. ಮೂಕನೋಟ 'ರಾಯಭಾರಿ'

ವಿಶ್ವ ಕರ್ನಾಟಕ, ಕಥಾಂಜಲಿ. ಕತೆಗಾರ, ಉಷಾ, ರಾಮರಾಜ್ಯ ಮುಂತಾದವುಗಳಲ್ಲಿ ಪ್ರಕಟಗೊಂಡಿದ್ದ 25ಕ್ಕೂ ಹೆಚ್ಚು ಕಥೆಗಳು ಉಪಲಬ್ಧವಿಲ್ಲ.

# ಬರಹಗಾರರ ವಿಳಾಸಗಳು

1) ಡಾ॥ ಸಾ. ಶಿ. ಮರುಳಯ್ಯ
'ರಾಗಿಣಿ', ನಂ 3, ಸರ್ವಿಸ್‌ರೋಡ್, ಆರ್. ಪಿ. ಸಿ. ಲೇಔಟ್,
ವಿಜಯನಗರ ಎಕ್ಸ್‌ಟೆನ್‌ಷನ್, ಬೆಂಗಳೂರು-40

2) ಶ್ರೀ ಅರಳು ಮಲ್ಲಿಗೆ ಪಾರ್ಥಸಾರಥಿ
194, ಲಕ್ಷ್ಮೀ ನಿಲಯ, ರಾಘವೇಂದ್ರ ಕಾಲೋನಿ, ಬೆಂಗಳೂರು-18

3) ಶ್ರೀ ಬಾಬು ಕೃಷ್ಣಮೂರ್ತಿ
ಸಂಪಾದಕರು 'ಮಂಗಳ', 21, ಶಂಕರಪ್ಪ ಗಾರ್ಡನ್, ಮಾಗಡಿ
ರಸ್ತೆ, ಬೆಂಗಳೂರು-23

4) ದಿ॥ ರಸಿಕಪುತ್ರಿಗೆ—ಚನ್ನಪಟ್ಟಣ-571501

5) ಶ್ರೀಮತಿ ಹೆಚ್. ಎಸ್. ಪಾರ್ವತಿ
'ಸ್ನೇಹ', 3368-13ನೇ ಕ್ರಾಸ್, ನ್ಯೂ ಕೆ. ಆರ್. ರೋಡ್,
ಶಾಸ್ತ್ರೀನಗರ, ಬೆಂಗಳೂರು-560028

6) ಪ್ರೊ॥ ಎಲ್. ಎಸ್. ಶೇಷಗಿರಿರಾವ್
'ಜ್ಯೋತಿ', 267, 3ನೇ ಬ್ಲಾಕ್, ಜಯನಗರ, ಬೆಂ-11

7) ದಿ॥ ಡಾ॥ ಸಿದ್ಧಯ್ಯ ಪುರಾಣಿಕ್
'ಶ್ರೀ ಗಿರಿ' 4-5 ಎ, ಆಲಿ ಆಸ್ಕರ್ ರಸ್ತೆ, ಬೆಂಗಳೂರು-52

8) ಶ್ರೀ ಎನ್. ಗುರುಮೂರ್ತಿ ಆಚಾರ್
1432, 'ನಾರಾಯಣ ಕೃಪ', ಕೆ. ಆರ್. ಎಕ್ಸ್‌ಟೆನ್‌ಷನ್,
ತುಮಕೂರು-572101

9) ಪ್ರೊ॥ ಹೆಚ್. ಆರ್. ದಾಸೇಗೌಡ
'ಅನುರಾಧಾ-ಅನುಪಮ' 681-12ನೇ ಕ್ರಾಸ್,
ಮಾಗಡಿಕಾರ್ಡ್ ರಸ್ತೆ, ಬೆಂಗಳೂರು-40

10) ಶ್ರೀಮತಿ ಗಾಯತ್ರಿ ಮೂರ್ತಿ
'ಅಭ್ಯುದಯ', ಹೋಲಿಸೆಂಟ್ ಸ್ಕೂಲ್ ಎದುರು, ನಂ-422/25
5ನೇ ಕ್ರಾಸ್, ಜಯನಗರ 7ನೇ ಬ್ಲಾಕ್, ಬೆಂಗಳೂರು-82

11) ಶ್ರೀ ಕೆ. ಆರ್. ಕಮಲೇಶ್
'ನೃಪತುಂಗ', ಮೂಕಾಂಬಿಕಾ ದೇವಸ್ಥಾನದ ಹತ್ತಿರ,
ಉಪ್ಪಾರಹಳ್ಳಿ, ತುಮಕೂರು-572102

